**17. ರಿಜಿಸ್ಟ್ರಾರ್.-** (1) ರಿಜಿಸ್ಟ್ರಾರ್‌ರವರು ವಿಶ್ವವಿದ್ಯಾನಿಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ರಾಜ್ಯ ಸರ್ಕಾರವು, ಉನ್ನತ ಕಾಲಶ್ರೇಣಿಯ ಗ್ರೂಪ್ ಎ ಅಧಿಕಾರಿಯ ದರ್ಜೆಗಿಂತ ಕಡಿಮೆಯಲ್ಲದ ಒಬ್ಬ ಅಧಿಕಾರಿಯನ್ನು ಅಥವಾ ಕನಿಷ್ಠ ಐದು ವರ್ಷಗಳು ಪ್ರಾಧ್ಯಾಪಕರಾಗಿ ಕರ್ತವ್ಯ ನಿರ್ವಹಿಸಿರುವ ಯಾವುದೇ ವಿಶ್ವವಿದ್ಯಾಲಯದ ವ್ಯಾಸಂಗ ವಿಭಾಗದ ಸದಸ್ಯನನ್ನು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್‌ರನ್ನಾಗಿ ನೇಮಕ ಮಾಡಬಹುದು.

(2) ರಿಜಿಸ್ಟ್ರಾರನು, ವಿದ್ಯಾವಿಷಯಕ ಪರಿಷತ್ತಿನ ಮತ್ತು ಸಿಂಡಿಕೇಟಿನ ಪದನಿಮಿತ್ತ ಸದಸ್ಯಕಾರ್ಯದರ್ಶಿಯು ಮತ್ತು ಹಣಕಾಸು ಸಮಿತಿಯ ಸದಸ್ಯನು ಆಗಿರತಕ್ಕದ್ದು.

(3)(i) ವಿಶ್ವವಿದ್ಯಾನಿಲಯದ ದಾಖಲೆಗಳ, ಸಾಮಾನ್ಯ ಮೊಹರಿನ ಮತ್ತು ಕುಲಪತಿ ಅಥವಾ ಸಿಂಡಿಕೇಟ್ ಅವನ ವಶಕ್ಕೆ ಒಪ್ಪಿಸುವಂಥ ಇತರ ಸ್ವತ್ತಿನ ಅಭಿರಕ್ಷಕನಾಗಿರುವುದು;

(ii) ಸಿಂಡಿಕೇಟಿನ, ವಿದ್ಯಾವಿಷಯಕ ಪರಿಷತ್ತಿನ ಅಥವಾ ವ್ಯಾಸಂಗ ವಿಭಾಗಗಳ, ಅಧ್ಯಯನ ಮಂಡಲಿಯ ಮತ್ತು ವಿಶ್ವವಿದ್ಯಾನಿಲಯದ ಯಾವುದೇ ಪ್ರಾಧಿಕಾರದ ಸಭೆಗಳನ್ನು ಕರೆಯುವ ನೋಟೀಸುಗಳನ್ನು ಹೊರಡಿಸುವುದು ಮತ್ತು ಅಂಥ ಎಲ್ಲ ಸಭೆಗಳ ನಡವಳಿಗಳನ್ನು ಇಡುವುದು;

(iii) ಅವನು ಸದಸ್ಯ ಕಾಯದರ್ಶಿಯಾಗಿರುವ ಪ್ರಾಧಿಕಾರಗಳ ಅಧಿಕೃತ ಪತ್ರವ್ಯವಹಾರವನ್ನು ನಡೆಸುವುದು;

(iv) ವಿಶ್ವವಿದ್ಯಾನಿಲಯದ ಪ್ರಾಧಿಕಾರಗಳ ಸಭೆಗಳ ಕಾರ್ಯಸೂಚಿಯ ಪ್ರತಿಗಳನ್ನು, ಅವುಗಳನ್ನು ಹೊರಡಿಸಿದ ಕೂಡಲೇ, ಮತ್ತು ಸಭೆಗಳನ್ನು ನಡೆಸಿದ ಒಂದು ತಿಂಗಳೊಳಗಾಗಿ ಅವುಗಳ ನಡವಳಿಗಳನ್ನು ಕುಲಾಧಿಪತಿಗೆ ಮತ್ತು ರಾಜ್ಯಸರ್ಕಾರಕ್ಕೆ ಒದಗಿಸುವುದು;

-ರಿಜಿಸ್ಟ್ರಾರನ ಕರ್ತವ್ಯವಾಗಿರತಕ್ಕದ್ದು.

(4) ರಿಜಿಸ್ಟ್ರಾರನು ಪರಿನಿಯಮಗಳು, ಆರ್ಡಿನೆನ್ಸ್‌ಗಳು ಅಥವಾ ವಿನಿಯಮಗಳು ನಿಯಮಿಸಬಹುದಾದಂಥ ಮತ್ತು ಕುಲಪತಿಯು ಕಾಲಕಾಲಕ್ಕೆ ಹಂಚಿಕೆ ಮಾಡಬಹುದಾದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(5) ರಿಜಿಸ್ಟ್ರಾರನಿಗೆ ಒಬ್ಬ ಅಥವಾ ಅದಕ್ಕೂ ಹೆಚ್ಚಿನ ಉಪ ರಿಜಿಸ್ಟ್ರಾರರು ಮತ್ತು ಸಹಾಯಕ ರಿಜಿಸ್ಟ್ರಾರರು ನೆರವು ನೀಡತಕ್ಕದ್ದು.

xx xx xx

**20. ರಿಜಿಸ್ಟ್ರಾರ್, ರಿಜಿಸ್ಟ್ರಾರ್ (ಮೌಲ್ಯಮಾಪನ), ಹಣಕಾಸು ಅಧಿಕಾರಿಯ ಹುದ್ದೆಯು ತಾತ್ಕಾಲಿಕವಾಗಿ ಖಾಲಿ ಇರುವುದು.-** (1) ರಿಜಿಸ್ಟ್ರಾರ್, ರಿಜಿಸ್ಟ್ರಾರ್ (ಮೌಲ್ಯಮಾಪನ) ಅಥವಾ ಹಣಕಾಸು ಅಧಿಕಾರಿಯ ಮರಣ, ಅಮಾನತ್ತು ಅಥವಾ ತಾತ್ಕಾಲಿಕ ಗೈರು ಹಾಜರಿಯ ಸಂದರ್ಭದಲ್ಲಿ, ಕುಲಾಧಿಪತಿಯು, ಸಂದರ್ಭಾನುಸಾರ ರಿಜಿಸ್ಟ್ರಾರ್, ರಿಜಿಸ್ಟ್ರಾರ್ (ಮೌಲ್ಯಮಾಪನ) ಅಥವಾ ಹಣಕಾಸು ಅಧಿಕಾರಿಯ ಕರ್ತವ್ಯಗಳನ್ನು ನಿರ್ವಹಿಸಲು ವಿಶ್ವವಿದ್ಯಾನಿಲಯದ ಯಾವೊಬ್ಬ ಇತರ ಸೂಕ್ತ ಅಧಿಕಾರಿಗೆ ಪ್ರಾಧಿಕಾರ ನೀಡಬಹುದು.

(2) ರಿಜಿಸ್ಟ್ರಾರ್, ರಿಜಿಸ್ಟ್ರಾರ್ (ಮೌಲ್ಯಮಾಪನ) ಅಥವಾ ಹಣಕಾಸು ಅಧಿಕಾರಿಯ ಪದದಲ್ಲಿ ಖಾಲಿ ಸ್ಥಾನವನ್ನು ಭರ್ತಿ ಮಾಡಲು ಸೂಕ್ತ ಅಧಿಕಾರಿಯನ್ನು ನೇಮಕಾತಿ ಮಾಡುವವರೆಗೆ ಕುಲಪತಿಯು ತನ್ನ ವಿವೇಚನಾನುಸಾರ, ಅಂತಹ ಖಾಲಿ ಹುದ್ದೆಗಳ ಕರ್ತವ್ಯವನ್ನು ನಿರ್ವಹಿಸಲು ಯಾವೊಬ್ಬ ಅಧಿಕಾರಿಯನ್ನು ಪ್ರಾಧೀಕರಿಸಬಹುದು. ಕುಲಪತಿಯು, ಈ ಉಪಪ್ರಕರಣದ ಅಡಿಯಲ್ಲಿ ತಾನು ಕೈಗೊಂಡ ಕ್ರಮದ ಬಗ್ಗೆ ಕೂಡಲೇ ಕುಲಾಧಿಪತಿಗೆ ವರದಿಮಾಡತಕ್ಕದ್ದು.

xx xx xx

**28. ಸಿಂಡಿಕೇಟ್.-** xx xx xx

(2) ಸಿಂಡಿಕೇಟ್, ಒಂದು ವರ್ಷದಲ್ಲಿ ಕನಿಷ್ಠಪಕ್ಷ ಎಂಟು ಸಭೆಗಳನ್ನು ನಡೆಸತಕ್ಕದ್ದು. ಎರಡು ನಿರಂತರ ಸಭೆಗಳ ನಡುವಣ ಅವಧಿಯು ಎಂಟು ವಾರಗಳನ್ನು ಮೀರತಕ್ಕದ್ದಲ್ಲ. ಕುಲಪತಿಯು, ತುರ್ತು ಸಂದರ್ಭಗಳಲ್ಲಿ ವಿಶೇಷ ಸಭೆಗಳನ್ನು ನಡೆಸಬಹುದು.

xx xx xx

**30. ವಿದ್ಯಾವಿಷಯಕ ಪರಿಷತ್ತು.-** (1) ವಿದ್ಯಾವಿಷಯಕ ಪರಿಷತ್ತು ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:-

xx xx xx

(x) ಎರಡು ವರ್ಷಗಳ ಅವಧಿಗಾಗಿ ಕುಲಪತಿಯವರಿಂದ ನಾಮನಿರ್ದೇಶನ ಮಾಡಲಾಗುವ ಆರು ವಿದ್ಯಾರ್ಥಿಗಳು, ಅವರ ಪೈಕಿ, ಪದವಿ ವ್ಯಾಸಂಗದ ಒಬ್ಬ ವಿದ್ಯಾರ್ಥಿ, ಸ್ನಾತಕೋತ್ತರ ಪದವಿಯ ಒಬ್ಬ ವಿದ್ಯಾರ್ಥಿ, ವೃತ್ತಿಪರ ವ್ಯಾಸಂಗದ ಒಬ್ಬ ವಿದ್ಯಾರ್ಥಿ, ನ್ಯಾಷನಲ್ ಕೆಡೆಟ್ ಕೋರ್‌ನ ಒಬ್ಬ ಅಭ್ಯರ್ಥಿ, ನ್ಯಾಷನಲ್ ಸೋಷಿಯಲ್ ಸರ್ವಿಸ್‌ನ ಒಬ್ಬ ಅಭ್ಯರ್ಥಿ, ಅರ್ಹತೆಯ ಆಧಾರದ ಮೇಲೆ ಒಬ್ಬ ಕ್ರೀಡಾಪಟು, ಮತ್ತು ಅವರಲ್ಲಿ ಕನಿಷ್ಠ ಪಕ್ಷ ಒಬ್ಬ ಮಹಿಳೆ ಇರತಕ್ಕದ್ದು, ಮತ್ತು ಒಬ್ಬ ಸಂಶೋಧನಾ ವಿದ್ಯಾರ್ಥಿ ಇರತಕ್ಕದ್ದು:

xx xx xx

**38. ವಿದ್ಯಾವಿಷಯಕ ಪರಿಷತ್ತು ಮತ್ತು ಸಿಂಡಿಕೇಟಿನ ಸದಸ್ಯರ ಪದಾವಧಿ.-** (1) ಅನ್ಯಥಾ ಉಪಬಂಧಿಸಿದ್ದ ಹೊರತು, ವಿದ್ಯಾವಿಷಯಕ ಪರಿಷತ್ತಿನ ಮತ್ತು ಸಿಂಡಿಕೇಟಿನ ಪದನಿಮಿತ್ತ ಸದಸ್ಯರನ್ನು ಹೊರತು ಪಡಿಸಿ, ಉಳಿದ ಸದಸ್ಯರ ಪದಾವಧಿಯು, ಮೂರು ವರ್ಷಗಳು.

xx xx xx

**58. ನೌಕರರ ವರ್ಗಾವಣೆಗಳು.-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕರಾರು, ಒಪ್ಪಂದ ಅಥವಾ ಯಾವುದೇ ಇತರ ಕಾನೂನಿನಲ್ಲಿ ಮತ್ತು ವಿಶ್ವವಿದ್ಯಾನಿಲಯದ ನೌಕರರಿಗೆ ಅನ್ವಯವಾಗುವ ಸೇವಾ ಷರತ್ತುಗಳಲ್ಲಿ ಏನೇ ಇದ್ದಾಗ್ಯೂ, ಕುಲಾಧಿಪತಿಯು, ರಾಜ್ಯಸರ್ಕಾರದೊಡನೆ ಸಮಾಲೋಚಿಸಿ, ಆಡಳಿತಾತ್ಮಕ ಕಾರಣಗಳಿಗಾಗಿ ವಿಶ್ವವಿದ್ಯಾನಿಲಯದಲ್ಲಿ ಯಾವುದೇ ಹುದ್ದೆಯನ್ನು ಧಾರಣ ಮಾಡಿರುವ ಯಾವನೇ ವ್ಯಕ್ತಿಯನ್ನು, ಈ ಅಧಿನಿಯಮದಲ್ಲಿ ತತ್ಕಾಲದಲ್ಲಿ ಜಾರಿಯಲ್ಲಿರುವ ರಾಜ್ಯ ವಿಧಾನಮಂಡಲವು ರಚಿಸಿದ ಯಾವುದೇ ಕಾನೂನಿನ ಅಡಿಯಲ್ಲಿ ಸ್ಥಾಪಿಸಲಾದ ಯಾವುದೇ ಇತರ ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸಬಹುದು ಮತ್ತು ಹಾಗೆ ವರ್ಗಾಯಿತನಾದ ವ್ಯಕ್ತಿಯು, ಯಾವ ವಿಶ್ವವಿದ್ಯಾನಿಲಯಕ್ಕೆ ಅವನನ್ನು ವರ್ಗಾಯಿಸಲಾಗಿದೆಯೋ ಆ ವಿಶ್ವವಿದ್ಯಾಲಯಕ್ಕೆ,

ವರ್ಗಾವಣೆಯ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸೇವಾ ಷರತ್ತುಗಳೊಂದಿಗೆ ಹೋಗತಕ್ಕದ್ದು. ವರ್ಗಾವಣೆಯಾದ ಮೇಲೆ ಅಂಥ ವ್ಯಕ್ತಿಯು ಅವನು ವರ್ಗಾವಣೆಯಾದ ವಿಶ್ವವಿದ್ಯಾನಿಲಯದ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡಿರುವುದಾಗಿ ಭಾವಿಸತಕ್ಕದ್ದು:

ಪರಂತು ಹಾಗೆ ವರ್ಗಾಯಿತನಾದ ನೌಕರನು, ತಾನು ಪ್ರಾರಂಭದಲ್ಲಿ ನೇಮಕಗೊಂಡಿದ್ದ ವಿಶ್ವವಿದ್ಯಾನಿಲಯದಲ್ಲಿ ತನ್ನ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳುವ ಅಥವಾ ತಾನು ವರ್ಗಾಯಿತನಾದ ವಿಶ್ವವಿದ್ಯಾನಿಲಯದಲ್ಲಿ ವಿಲೀನಗೊಳ್ಳುವ ಆಯ್ಕೆಯ ಸ್ವಾತಂತ್ರ್ಯವನ್ನು ಹೊಂದಿರತಕ್ಕದ್ದು.

(2) (1)ನೇ ಉಪ-ಪ್ರಕರಣದ ಅಡಿಯಲ್ಲಿ ನೌಕರರ ಅಂಥ ವರ್ಗಾವಣೆಗೆ ಆದೇಶ ನೀಡುವ ಉದ್ದೇಶಕ್ಕಾಗಿ, ಹಾಗೆ ವರ್ಗಾಯಿಸಲಾದ ನೌಕರರು ಧಾರಣ ಮಾಡಿದ್ದ ಹುದ್ದೆಗಳ ಸಂಬಂಧದಲ್ಲಿ ಕುಲಾಧಿಪತಿಯವರನ್ನು ನೇಮಕ ಪ್ರಾಧಿಕಾರ ಎಂದು ಭಾವಿಸತಕ್ಕದ್ದು.

xx xx xx

**KARNATAKA LEGISLATIVE COUNCIL**

**ONE HUNDRED AND TWENTY FIRST SESSION**

## THE KARNATAKA STATE UNIVERSITIES (SECOND AMENDMENT) BILL, 2013

**(L.C. Bill No. 05 of 2013)**

A Bill further to amend the Karnataka State Universities Act, 2000.

Whereas it is expedient further to amend the Karnataka State Universities Act, 2000 (Karnataka Act 29 of 2001) for the purposes hereinafter appearing;

Be it enacted by the Karnataka State Legislature in the Sixty-Fourth Year of the Republic of India, as follows:-

**1. Short title and commencement.-** (1) This Act may be called the Karnataka State Universities (Second Amendment) Act, 2013.

(2) It shall come into force at once.

**2. Amendment of section 8.-** In section 8 of the Karnataka State Universities Act, 2000 (Karnataka Act 29 of 2001) (hereinafter referred to as the principal Act),-

(i) in sub-section (1), for the words "The Chancellor may suo-moto or on the recommendation of the Government", the words "The Chancellor or the Pro-Chancellor" shall be substituted;

(ii) for sub-section (3), the following shall be substituted, namely:-

"(3) The Commission shall submit a report of the result of the inspection or inquiry to the Chancellor or to the Pro-Chancellor as the case may be within three months from the date of his appointment."

(iii) in sub-section (4) and (7), after the word "the Chancellor", the words "or the Pro-chancellor as the case may be" shall be inserted.

**3. Amendment of section 9.-** In section 9 of the principal Act, for the words "the Chancellor may either suo-moto or on the recommendation of the Government", the words "the Chancellor or the Pro-Chancellor" shall be substituted.

**4. Amendment of section 13.-** In section 13 of the principal Act, after sub-section (2), the following shall be inserted, namely:-

"(3) He shall have such other powers as may be conferred on him by or under this Act."

**5. Amendment of section 14.-** In section 14 of the principal Act,-

(i) after sub-section (3), the following shall be inserted, namely:-

"(3A) The Government shall call for application with wide publicity along with document on his vision to develop the University from the interested candidates and after scrutiny place all applications of eligible candidates before the Search Committee. The Search Committee shall hold an interview with the applicants, to assess the eligibility, suitability, vision, experience and such other aspects of the candidates, as deemed fit by the committee and prepare a panel of three persons."

(ii) in sub-section (4), after the last proviso the following shall be inserted at the end, namely:-

"Provided also that no person who belongs to the same University shall be considered for the post of Vice Chancellor.

**Explanation.-** For the purpose of this section eminent academician means a person who has an experience of a minimum of five years as a professor in a University established by Law and Who has guided at least five Ph.D. students and has sufficient experience in administration."

(iii) in sub-section (7) and (8), after the words "the Chancellor" wherever they occurs, the words "or the Pro-Chancellor as the case may be" shall be inserted.

**6. Amendment of section 16.-** In section 16 of the principal Act,-

(1) in sub-section (1),

(i) after the words "the Chancellor", the words "or the Pro-Chancellor" shall be inserted;

(ii) for the proviso, the following shall be substituted, namely:-

"Provided that pending the making of such arrangements by the Chancellor or the Pro-Chancellor, the Vice-Chancellor may designate the Seniormost professor available in the University to be incharge of the current duties of the Vice-Chancellor for a period not exceeding one month or till arrangements are made by the Chancellor or Pro-Chancellor, whichever is earlier."

(2) in sub-section (2),-

(i) after the words "the Chancellor", the words "or the Pro-Chancellor" shall be inserted;

(ii) for the word "Dean", the word "Professor" shall be substituted.

**7. Substitution of section 17.-** For section 17 of the principal Act, the following shall be substituted, namely:-

"**17. Registrar.-** The Registrar shall be a whole time officer of the University. The State Government may appoint an officer belonging to the All India Services or an officer belonging to Karnataka Administrative Services not below the rank of a supertime scale officer or a professor of a State University who has put in a service as professor for not less than five years, to be the Registrar of a University."

**8. Amendment of section 20.-** In section 20 of the principal Act, in sub-section (1) and (2), after the words "the Chancellor", the words "or the Pro-Chancellor" shall be inserted.

**9. Amendment of section 28.-** In section 28 of the principal Act,-

(1) in sub-section (1), after sub-clause (a), the following shall be inserted, namely:-

"(aa) The Principal Secretary or the Secretary to Government, incharge of the Department of Higher Education or his nominee not below the rank of a Deputy Secretary".

(2) in sub-section (2), after the words "eight meetings", the words" excluding the special meeting and meetings by circulation" shall be inserted.

**10. Amendment of section 30.-** In section 30 of the principal Act, in sub-section (1), in clause (x), for the word "two years", the words "one and a half years or until new nomination is made whichever is earlier" shall be substituted.

**11. Amendment of section 38.-** In section 38 of the principal Act,- in sub-section (1), for the words "three years", the words "four years" shall be substituted.

**12. Amendment of section 58.-** In section 58 of the principal Act,-

(a) in sub-section (1), for the words " the Chancellor in consultation with the State Government may for administrative reasons", the words "the State Government in consultation with the Universities Establishment Board constituted under sub-section (5) may for administrative reasons or for the reasons specified in section 58-A" shall be substituted.

(b) in sub-section (2), for the word "Chancellor", the words "State Government" shall be substituted.

(c) after sub-section (4), the following shall be inserted, namely:-

"(5) The State Government shall by notification constitute the Universities Establishment Board consisting of the following members, namely:-

| | | | |
|---|---|---|---|
| (a) | The Principal Secretary to Government incharge of Higher Education | --- | Chairman |
| (b) | The Vice-chairman of the Karnataka Higher Education Council | --- | Member |
| (c) | The Executive Director of the Karnataka Higher Education Council | --- | Member |
| (d) | The Vice-chancellors of the concerned Universities | --- | Members |
| (e) | The Deputy Secretary to Government, Department of Higher Education who shall be the convener " | | |

**13. Insertion of new section 58-A.-** After section 58 of the principal Act, the following new section shall be inserted, namely:-

**"58-A. Pooling of subject.-** If the number of students in a subject of a department of P.G. course in a University is less than ten in two consecutive years, the State Government may order to close the particular subject in the University and transfer the students in that subject to any other University in the State, where that subject is available. For this purpose, the State Government may order to pool such students in such subject by transfer to any one University so that the number of students in that subject shall be more than ten in the first year of the P.G. Course:

Provided that, the students who are transferred due to pooling of subjects to another University shall not be restricted by the geographical jurisdiction of the University."

**STATEMENT OF OBJECTS AND REASONS**

It is considered necessary to amend the Karnataka State Universities Act, 2000 (Karnataka Act 29 of 2001), to provide for,-

(1) entrusting more power to the pro-chancellor;

(2) transparent selection of Vice-Chancellor after calling application with a vide publicity and interview by the such committee;

(3) representation of the Principal Secretary or Secretary to Government, incharge of Department of Higher Education or his nominee as the member of the syndicate; and

(4) certain other consequential amendments.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**C.T. RAVI**

Minister for Higher Education

**V. SHREESH**

Secretary

Karnataka Legislative Council

**ANNEXURE**

**EXTRACT FROM THE KARNATAKA STATE UNIVERSITIES ACT, 2000 (KARNATAKA ACT 29 OF 2001)**

XX XX XX

**8. Discipline, Inspection and Control.-** (1) The Chancellor may suo motu or on the recommendation of the State Government cause an inspection to be made by a Commission of Enquiry consisting of one or more persons as he may direct, of the buildings, Laboratories, Libraries, Museums, Workshops and equipments of any institution maintained, administered, recognised or approved, by the University and also of the examinations, teaching and other work conducted or done by the University and into any specific allegations against any employee of the University in like manner in respect of any matter connected with or ancillary thereto.

XX XX XX

(3) The Commission shall submit a report of the result of the inspection or inquiry to the Chancellor and shall forward a copy thereof to the State Government.

(4) Soon after receipt of the report, the Chancellor shall record his findings thereon and send the same to the State Government for taking further action, as may be necessary or as directed by him.

XX XX XX

(7) If the Vice-Chancellor fails to comply with the directions of the State Government then it shall be reported to

the Chancellor whose order shall be final and shall be implemented by the Vice-Chancellor within such time as set out in the orders of the Chancellor.

XX XX XX

**9. Power to issue directions.-** The Chancellor may either suo motu or on the recommendation of the State Government issue such directions as may be necessary or expedient in the interest of both administration and academic functioning of the University and in particular to ensure peace and tranquility and to protect the property and finances.

XX XX XX

**16. Arrangement of work during vacancy in the office of the Vice-Chancellor.-** (1) During the temporary absence of the Vice-Chancellor by reason of leave, illness or any other cause, the Chancellor may make such arrangements as he deems fit for carrying on the duties of the Vice-Chancellor:

Provided that pending the making of such arrangements by the Chancellor, the Vice-Chancellor may designate the senior most Dean available in the University to be incharge of the current duties of the Vice-Chancellor for a period not exceeding one month or till arrangements are made by the Chancellor, whichever is earlier.

(2) During the period when a vacancy in the office of the Vice-Chancellor remains unfilled, the senior most Dean available in the University as the Chancellor may appoint shall act as Vice-Chancellor and the person so appointed shall have all the powers and shall be entitled to all the privileges of the Vice-Chancellor and to such emoluments and allowances as may be determined by the Chancellor in accordance with the Statutes, if any, framed in this behalf.

**17. Registrar.-** (1)The Registrar shall be a whole time officer of the University. The State Government may appoint an officer not below the rank of Group-A officer of the super time scale or a member of the faculty of any university working as a Professor for atleast five years, to be a Registrar of a University.

(2) The Registrar shall be ex-officio Member-Secretary of the Academic Council and the Syndicate and member of the Finance Committee.

(3) It shall be the duty of the Registrar,-

(i) to be the custodian of the records, the common seal and such other property of the University as the Vice-Chancellor, or the Syndicate shall commit to his charge;

(ii) to issue notices convening the meetings of the Syndicate Academic Council or the Faculties, the Board of Studies, and of any authority of the University and to keep minutes of all such meetings;

(iii) to conduct the official correspondence of the authorities of which he shall be the Member-Secretary.

(iv) to supply to the Chancellor and to the State Government copies of the agenda of the meetings of the authorities of the University as soon as they are issued and the minutes of the meeting within a month of holding of the meeting.

(4) The Registrar shall exercise such other powers and perform such other duties as may be prescribed by the Statutes, Ordinances or Regulations and as may be allocated to him from time to time by the Vice-Chancellor.

(5) The Registrar may be assisted by one or more Deputy Registrars and Assistant Registrars.

XX XX XX

**20. Temporary vacancy in the office of the Registrar, the Registrar (Evaluation), the Finance Officer.-** (1) In the event of death, suspension or temporary absence of the Registrar, the Registrar (Evaluation) or the Finance Officer the Chancellor may authorise any other suitable officer of the University to perform the duties of the Registrar, Registrar (Evaluation) or the Finance Officer, as the case may be.

(2) Pending appointment of a suitable officer to fill the vacancy in the office of the Registrar, Registrar (Evaluation) or the Finance Officer, the Vice-Chancellor may in his discretion authorise any officer to perform the duties of such vacant post till appointment is made. The Vice-Chancellor shall immediately report the action taken by him under this sub-section to the Chancellor.

XX XX XX

**28. Syndicate.- XX XX XX**

(2) The Syndicate shall hold atleast eight meetings, during a year. The duration between two consecutive meetings shall not exceed eight weeks. The Vice-Chancellor may in case of urgency convene special meetings.

XX XX XX

**30. Academic Council.-** (1) The Academic Council shall consist of the following members, namely:-

XX XX XX

(x) six students to be nominated by the Vice-Chancellor for a period of two years of whom one shall be a student of a degree course, one, a student of a post-graduate course, one, a student of a professional course one, a candidate of National Cadet Corps , one a candidate National Social Service , one sports candidate on the basis of merit and of them atleast one shall be a woman and one a research student:

XX XX XX

**38. The term of office of the members of the Academic Council and Syndicate.-** (1) Save as otherwise provided the term of the office of the members other than the ex-officio members of the Academic Council and the Syndicate shall be three years,

**XX XX XX**

**58. Transfer of employees.-** (1) Notwithstanding anything contained in any contract, agreement or in any other law for the time being in force and the conditions of service applicable to the employees of the University, the Chancellor in consultation with the State Government may for administrative reasons transfer any employee holding any post in a University to any other University established under this Act or under any law made by the State Legislature for the time being in force and the employee so transferred shall carry with him such conditions of service as may be specified in the order of transfer. Such employee shall on transfer be deemed to have been appointed by the competent authority of the University to which he is transferred:

XX XX XX

(2) For the purpose of ordering such transfer of employees under sub-section (1) the Chancellor shall be deemed to be the appointing authority in respect of posts held by the employees so transferred.

XX XX XX

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ – IV-A** | **ಬೆಂಗಳೂರು, ಬುಧವಾರ, ಫೆಬ್ರವರಿ ೧೩, ೨೦೧೩ (ಮಾಘ ೨೪, ಶಕ ವರ್ಷ ೧೯೩೪)** | **ನಂ. ೩೯೬** |
| **Part – IV-A** | **Bangalore, Wednesday, February 13, 2013 (Magha 24, Shaka Varsha 1934)** | **No. 396** |

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ: 121ಅ:ವಿಪ:7:2013, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ, 2013**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 12ನೇ ಫೆಬ್ರವರಿ, 2013ರಂದು ಮಂಡಿಸಲಾಯಿತು

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಇಪ್ಪತ್ತೊಂದನೇ ಅಧಿವೇಶನ**

## ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 7)**

ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಅಧಿನಿಯಮ, 1994ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಅಧಿನಿಯಮ, 1994ನ್ನು (1994ರ ಕರ್ನಾಟಕ ಅಧಿನಿಯಮ 39) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 13ನೇ ಪ್ರಕರಣದ ತಿದ್ದುಪಡಿ.–** ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯಗಳ ಅಧಿನಿಯಮ, 1994ರ (1994ರ ಕರ್ನಾಟಕ ಅಧಿನಿಯಮ 39) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ), 13ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದಲ್ಲಿ, "ಕುಲಪತಿಯು," ಎಂಬ ಪದಕ್ಕೆ ಮೊದಲು "ಸರ್ಕಾರದ ಸಮ್ಮತಿಯೊಂದಿಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (3)ನೇ ಉಪಪ್ರಕರಣದ ಪರಂತುಕಕ್ಕೆ, ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

ಪರಂತು, ಸರ್ಕಾರವು, ವ್ಯಾಪಕ ಪ್ರಚಾರದ ಮೂಲಕ, ಆಸಕ್ತಿಯುಳ್ಳ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು ಮತ್ತು ಪರಿಶೀಲನೆಯ ನಂತರ ಅರ್ಹ ಅಭ್ಯರ್ಥಿಗಳ ಎಲ್ಲಾ ಅರ್ಜಿಗಳನ್ನು ಶೋಧನಾ ಸಮಿತಿಯ ಮುಂದೆ ಇಡತಕ್ಕದ್ದು. ಶೋಧನಾ ಸಮಿತಿಯು, ಅಭ್ಯರ್ಥಿಗಳ ಅರ್ಹತೆ, ಸೂಕ್ತತೆ, ದೃಷ್ಟಿಕೋನ, ಅನುಭವ ಮತ್ತು ಅಂಥ ಇತರ ಸಂಗತಿಗಳನ್ನು ನಿರ್ಧರಿಸಲು ತಾನು ಸೂಕ್ತವೆಂದು ಭಾವಿಸಬಹುದಾದಂತೆ ಅರ್ಜಿದಾರರೊಂದಿಗೆ ಸಂದರ್ಶನವನ್ನು ನಡೆಸತಕ್ಕದ್ದು ಮತ್ತು ಅಕಾರಾದಿ ಕ್ರಮದಲ್ಲಿ ಮೂರು ಹೆಸರುಗಳನ್ನುಳ್ಳ ಒಂದು ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು. ಆ ಹೆಸರುಗಳ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಸರ್ಕಾರವು ಪಟ್ಟಿಯಿಂದ ಸೂಕ್ತ ಅಭ್ಯರ್ಥಿಯನ್ನು ಶಿಫಾರಸ್ಸು ಮಾಡಿ ಕುಲಪತಿಯವರಿಗೆ ಕಳುಹಿಸತಕ್ಕದ್ದು. ಸರ್ಕಾರವು ಶಿಫಾರಸ್ಸು ಮಾಡಿದ ಹೆಸರನ್ನು ಕುಲಪತಿಯವರು ಒಪ್ಪದಿದ್ದರೆ, ಅವರು ಸರ್ಕಾರದ ಸಮ್ಮತಿಯನ್ನು ಪಡೆದ ನಂತರ ಪಟ್ಟಿಯಿಂದ ಯಾವೊಬ್ಬ ಇತರ ಅಭ್ಯರ್ಥಿಯನ್ನು ನೇಮಕ ಮಾಡಬಹುದು.

**ವಿವರಣೆ**:– ಈ ಅಧಿನಿಯದ ಉದ್ದೇಶಕ್ಕಾಗಿ, ಪ್ರಖ್ಯಾತ ಶಿಕ್ಷಣ ತಜ್ಞ ಎಂದರೆ ಕಾನೂನಿನ ಮೂಲಕ ಸ್ಥಾಪನೆಯಾದ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕನಾಗಿ ಕನಿಷ್ಠ ಐದು ವರ್ಷಗಳ ಅನುಭವವನ್ನು ಹೊಂದಿರುವ ಹಾಗೂ ಕನಿಷ್ಠ ಪಕ್ಷ ಐವರು ಪಿಹೆಚ್.ಡಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿರುವ ಹಾಗೂ ಆಡಳಿತದಲ್ಲಿ ಸಾಕಷ್ಟು ಅನುಭವವಿರುವ ವ್ಯಕ್ತಿ:

ಪರಂತು, ಸಮಿತಿಯ ಶಿಫಾರಸ್ಸು ಮಾಡಿದ ಯಾವೊಬ್ಬ ವ್ಯಕ್ತಿಗಳು, ನೇಮಕಾತಿಯನ್ನು ಒಪ್ಪಿಕೊಳ್ಳದಿದ್ದರೆ ಅಥವಾ ಶಿಫಾರಸ್ಸು ಮಾಡಲಾದ ಯಾವೊಬ್ಬ ವ್ಯಕ್ತಿಗಳು ಕುಲಪತಿಗಳಿಗೆ ಒಪ್ಪಿಗೆಯಾಗದಿದ್ದರೆ, ಕುಲಪತಿಯು ಅಂಥ ಸಮಿತಿಯಿಂದ ಹೊಸ ಶಿಫಾರಸ್ಸುಗಳಿಗಾಗಿ ಕೋರಬಹುದು.

ಅಲ್ಲದೆ ಪರಂತು, ಮೊದಲ ಉಪಕುಲಪತಿಯವರನ್ನು ರಾಜ್ಯ ಸರ್ಕಾರವು ಶಿಫಾರಸ್ಸು ಮಾಡಿದ ಹೆಸರುಗಳ ಪಟ್ಟಿಯಿಂದ ಕುಲಪತಿಯು ನೇಮಿಸತಕ್ಕದ್ದು."

(iii) (4)ನೇ ಉಪಪ್ರಕರಣಕ್ಕೆ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) ಕುಲಪತಿಯವರ ಇಚ್ಛೆಗೊಳಪಟ್ಟು, ಉಪಕುಲಪತಿಯವರ ಪದಾವಧಿಯು ಅವರು ಪದವನ್ನು ಸ್ವೀಕರಿಸಿದ ದಿನಾಂಕದಿಂದ ನಾಲ್ಕು ವರ್ಷಗಳು ಅಥವಾ ಅವರು ಅರವತ್ತೇಳು ವರ್ಷ ವಯಸ್ಸನ್ನು ತಲುಪುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಆ ಅವಧಿ ಆಗಿರತಕ್ಕದ್ದು ಮತ್ತು ಅವರು ಪುನರ್ ನೇಮಕಾತಿಗೆ ಅರ್ಹರಾಗಿರತಕ್ಕದ್ದಲ್ಲ."

(iv) (5)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**3. 15ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 15ನೇ ಪ್ರಕರಣದ (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ರಿಜಿಸ್ಟ್ರಾರನು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ರಾಜ್ಯ ಸರ್ಕಾರವು, ಭಾರತೀಯ ಆಡಳಿತ ಸೇವೆಗೆ ಸೇರಿದ (IAS) ಅಥವಾ ಸೂಪರ್ ಟೈಮ್ ಸ್ಕೇಲ್ ಕರ್ನಾಟಕ ಆಡಳಿತ ಸೇವೆಗೆ ಸೇರಿದ ಅಧಿಕಾರಿಯನ್ನು ಅಥವಾ ರಾಜ್ಯ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಐದು ವರ್ಷಗಳಿಗಿಂತ ಹೆಚ್ಚಿನ ಸೇವೆಯನ್ನು ಸಲ್ಲಿಸಿರುವ ಅಧಿಕಾರಿಯನ್ನು ನೇಮಿಸತಕ್ಕದ್ದು, ರಿಜಿಸ್ಟ್ರಾರನು ಸರ್ಕಾರದ ಇಚ್ಛೆಗೊಳಪಟ್ಟು ಪದಧಾರಣವನ್ನು ಮಾಡತಕ್ಕದ್ದು."

**4. 19ನೇ ಪ್ರಕರಣ ತಿದ್ದುಪಡಿ.–** ಮೂಲ ಅಧಿನಿಯಮದ 19ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ,–

(1) (ಬಿ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಬಿಬಿ) ತಾಂತ್ರಿಕ ಶಿಕ್ಷಣದ ನಿರ್ದೇಶಕರು"

(2) (ಸಿ) ಖಂಡಕ್ಕೆ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಸಿ) ಸರ್ಕಾರವು ನಾಮನಿರ್ದೇಶಿಸಿದ ಕೈಗಾರಿಕೆ/ವ್ಯವಹಾರ, ಶೈಕ್ಷಣಿಕ ತಜ್ಞರುಗಳು, ಶಿಕ್ಷಣ ತಜ್ಞರು ಎಂಜಿನಿಯರಿಂಗ್/ವಾಸ್ತುಶಿಲ್ಪ ಕ್ಷೇತ್ರದಲ್ಲಿನ ವೃತ್ತಿಪರರನ್ನು ಪ್ರತಿನಿಧಿಸುವ ಆರು ಜನ ವ್ಯಕ್ತಿಗಳು ಅವರ ಪೈಕಿ ಒಬ್ಬರು ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿರತಕ್ಕದ್ದು, ಒಬ್ಬರು ಇತರ ಹಿಂದುಳಿದ ಸಮುದಾಯಕ್ಕೆ ಸೇರಿರತಕ್ಕದ್ದು, ಒಬ್ಬರು ಧಾರ್ಮಿಕ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರಾಗಿರತಕ್ಕದ್ದು ಮತ್ತು ಒಬ್ಬರು ಮಹಿಳಾ ಅಭ್ಯರ್ಥಿಯಾಗಿರತಕ್ಕದ್ದು."

(3) (ಡಿ) ಖಂಡಕ್ಕೆ, ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಡಿ) ಕುಲಪತಿಯವರು ನಾಮನಿರ್ದೇಶಿಸಿದ ಇಬ್ಬರು ವ್ಯಕ್ತಿಗಳು"

**5. 20ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 20ನೇ ಪ್ರಕರಣದ ತರುವಾಯ ಈ ಮುಂದಿನ ಹೊಸ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"**20ಎ ಕಾರ್ಯಕಾರಿ ಪರಿಷತ್ತಿನ ವ್ಯವಹರಣೆಗಳನ್ನು ರದ್ದುಗೊಳಿಸುವುದು.–** ರಾಜ್ಯ ಸರ್ಕಾರವು ಆದೇಶದ ಮೂಲಕ, ಕಾರ್ಯಕಾರಿ ಪರಿಷತ್ತು, ಅಕಾಡೆಮಿಕ್ ಸೆನೇಟ್ ಮುಂತಾದವುಗಳ ಯಾವುವೇ ಸಭೆಗಳ ಯಾವುದೇ ಆದೇಶ, ಅಧಿಸೂಚನೆ, ನಿರ್ಣಯವನ್ನು ರದ್ದುಗೊಳಿಸಬಹುದು.

ಪರಂತು, ಸರ್ಕಾರವು, ವಿಶ್ವವಿದ್ಯಾಲಯಕ್ಕೆ ಕಾರಣ ತೋರಿಸುವ ನೋಟೀಸನ್ನು, ಸದರಿ ನೋಟೀಸಿನಲ್ಲಿ ಸೂಚಿಸಲಾದ ಕಾಲಾವಧಿಯೊಳಗೆ ವಿವರಣೆಯನ್ನು ಕೋರಿ, ನೀಡತಕ್ಕದ್ದು ಹಾಗೂ ವಿವರಣೆಯನ್ನು ಪರಿಗಣಿಸಿದ ನಂತರವಷ್ಟೆ ಸರ್ಕಾರವು ವ್ಯವಹರಣೆಗಳನ್ನು ರದ್ದುಗೊಳಿಸಬಹುದು. ನೋಟೀಸಿನಲ್ಲಿ ನಿರ್ದಿಷ್ಟಪಡಿಸಲಾದ ಕಾಲದೊಳಗೆ ಸರ್ಕಾರವು ವಿವರಣೆಯನ್ನು ಸ್ವೀಕರಿಸದಿದ್ದರೆ, ಸರ್ಕಾರವು ಸೂಕ್ತವೆಂದು ಭಾವಿಸಬಹುದಾದ ಅಂಥ ಮುಂದಿನ ಕ್ರಮವನ್ನು ಕೈಗೊಳ್ಳಬಹುದು."

**6. 22ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 22ನೇ ಪ್ರಕರಣದಲ್ಲಿ (11)ನೇ ಉಪಪ್ರಕರಣದಲ್ಲಿ "ಕುಲಪತಿಯವರು" ಎಂಬ ಪದಕ್ಕೆ "ರಾಜ್ಯ ಸರ್ಕಾರವು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 26ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 26ನೇ ಪ್ರಕರಣದಲ್ಲಿ "ಅಧಿಕಾರವನ್ನು ಹೊಂದಿರತಕ್ಕದ್ದು" ಪದಗಳ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಸರಿಯಾದ ಕ್ರಮಗಳನ್ನು ಜಾರಿಗೊಳಿಸಲು ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸತಕ್ಕದ್ದು. ಸಹ ಕುಲಪತಿಯು, ಈ ಸಂಬಂಧದಲ್ಲಿ ವಿಶ್ವವಿದ್ಯಾಲಯ ದೋಷಯುಕ್ತ ಅಧಿಕಾರಿ ಅಥವಾ ಸಿಬ್ಬಂದಿಯ ವಿರುದ್ಧ ಶಿಸ್ತು ವ್ಯವಹರಣೆಗೆ ಆದೇಶಿಸಬಹುದು:"

ಪರಂತು, ಸರ್ಕಾರವು, ಅಧಿಕಾರಿಗಳು ಹಾಗೂ ಸಿಬ್ಬಂದಿಗಳ ವಿರುದ್ಧ ಕೈಗೊಂಡ ಬಗ್ಗೆ ಶಿಸ್ತು ಕ್ರಮದ ಬಗ್ಗೆ ಕುಲಪತಿಯವರಿಗೆ ತಿಳಿಸತಕ್ಕದ್ದು."

**8. 30ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 30ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**30. ಶಾಸನಗಳನ್ನು ರಚಿಸುವ ಬಗ್ಗೆ.**– ಕಾರ್ಯಕಾರಿ ಪರಿಷತ್ತಿನ ಅನುಮೋದನೆಯನ್ನು ಪಡೆದ ಬಳಿಕ, ಪ್ರತಿಯೊಂದು ಹೊಸ ಶಾಸನವನ್ನು ಅಥವಾ ಈಗ ಇರುವ ಶಾಸನಕ್ಕೆ ತಿದ್ದುಪಡಿಯನ್ನು ಅಥವಾ ಶಾಸನವನ್ನು ರದ್ದತಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು. ಸರ್ಕಾರವು ಅದನ್ನು ಪರೀಕ್ಷಿಸತಕ್ಕದ್ದು ಮತ್ತು ಅದು ಅಧಿನಿಯಮ ಮತ್ತು ಸರ್ಕಾರದ ಕಾರ್ಯನೀತಿಗೆ ಅನುಗುಣವಾಗಿದೆಯೆಂದು ಮನಗಂಡರೆ ಅದರ ಅನುಮೋದನೆಗಾಗಿ ಕುಲಪತಿಗೆ ಅದನ್ನು ಕಳುಹಿಸತಕ್ಕದ್ದು ಅಥವಾ ಸರ್ಕಾರವು ಮಾಡಿದ ಆಕ್ಷೇಪಣೆಗಳ ಹಿನ್ನೆಲೆಯಲ್ಲಿ ಅದನ್ನು ಪುನರ್ ಪರಿಶೀಲನೆಗಾಗಿ ಕಾರ್ಯಕಾರಿ ಪರಿಷತ್ತಿಗೆ ಹಿಂದಿರುಗಿಸಬಹುದು. ಕುಲಪತಿಯು ಶಾಸನವನ್ನು ಸ್ವೀಕರಿಸಿದ ತರುವಾಯ ಅದನ್ನು ಒಪ್ಪಬಹುದು ಅಥವಾ ತಾನು ಮಾಡಿದ ಆಕ್ಷೇಪಣೆಗಳ ಹಿನ್ನೆಲೆಯಲ್ಲಿ, ಯಾವುದಾದರು ಇದ್ದಲ್ಲಿ, ಅದನ್ನು ಪುನರ್ ಪರಿಶೀಲನೆಗಾಗಿ ಕಾರ್ಯಕಾರಿ ಪರಿಷತ್ತಿಗೆ ಹಿಂದಿರುಗಿಸಬಹುದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ವಿಶ್ವೇಶ್ವರಯ್ಯ ತಾಂತ್ರಿಕ ಅಧಿನಿಯಮ, 1994ನ್ನು (1994ರ ಕರ್ನಾಟಕ ಅಧಿನಿಯಮ 39) ಈ ಮುಂದಿನವುಗಳಿಗಾಗಿ ಎಂದರೆ:–

(1) ಸಹಕುಲಪತಿಗೆ ಹೆಚ್ಚಿನ ಅಧಿಕಾರವನ್ನು ವಹಿಸಿಕೊಡಲು;

(2) ವಿಶ್ವವಿದ್ಯಾಲಯಕ್ಕೆ ಕಾರಣ ತೋರಿಸುವ ನೋಟೀಸನ್ನು ನೀಡಿದ ನಂತರ, ಸರ್ಕಾರವು ಕಾರ್ಯಕಾರಿ ಪರಿಷತ್ತಿನ ವ್ಯವಹರಣೆಗಳನ್ನು ರದ್ದುಗೊಳಿಸಲು;

(3) ವಿಶ್ವವಿದ್ಯಾಲಯ ದೋಷಯುಕ್ತ ಅಧಿಕಾರಿಗಳ ವಿರುದ್ಧ ಶಿಸ್ತು ವ್ಯವಹರಣೆಗಳನ್ನು ಆದೇಶಿಸಲು ಸಹಕುಲಪತಿಗೆ ಅಧಿಕಾರ ನೀಡಲು, ಹಾಗೂ

(4) ಕೆಲವು ಇತರ ಆನುಷಂಗಿಕ ತಿದ್ದುಪಡಿಗಳು,

– ಇವುಗಳಿಗೆ ಉಪಬಂಧಗಳನ್ನು ಕಲ್ಪಿಸಲು.

ಆದ್ದರಿಂದ ಈ ವಿಧೇಯಕ.

### ಆರ್ಥಿಕ ಜ್ಞಾಪನಾ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಸಿ.ಟಿ. ರವಿ**
ಉನ್ನತ ಶಿಕ್ಷಣ ಸಚಿವರು

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

### ಅನುಬಂಧ

### ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಅಧಿನಿಯಮ, 1994 (1994ರ ಕರ್ನಾಟಕ ಅಧಿನಿಯಮ 39)ರ ಉದ್ಧೃತ ಭಾಗ

XX XX XX

**13. ಉಪ ಕುಲಪತಿ.**– (1) ಉಪ ಕುಲಪತಿಯು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ವಿದ್ಯಾವಿಷಯಕ ಮುಖ್ಯಸ್ಥ ಮತ್ತು ಆಡಳಿತ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸತಕ್ಕದ್ದು.

(2) ಕುಲಪತಿಯು, ತಜ್ಞರಾಗಿರುವ ಮತ್ತು ಈ ಪ್ರಕರಣದ (3)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿರುವ ಸಮಿತಿಯು ಶಿಫಾರಸ್ಸು ಮಾಡುವ ಮೂರು ಜನರ ಪಟ್ಟಿಯಿಂದ ಆಯ್ಕೆ ಮಾಡಿ ನೇಮಕ ಮಾಡತಕ್ಕದ್ದು ಮತ್ತು ಅಂಥ ಪಟ್ಟಿಯು ಉಪ ಸಮಿತಿಯ ಯಾವೊಬ್ಬ ಸದಸ್ಯನ ಹೆಸರನ್ನು ಒಳಗೊಂಡಿರತಕ್ಕದ್ದಲ್ಲ.

(3) (2)ನೇ ಉಪಪ್ರಕರಣದ ಉದ್ದೇಶಕ್ಕಾಗಿ, ಸಮಿತಿಯು ಕುಲಪತಿಯಿಂದ ನಾಮನಿರ್ದೇಶಿತರಾದ ವಿದ್ಯಾವಿಷಯಕ ಸೆನೆಟಿನ ಒಬ್ಬ ಸದಸ್ಯ, ಕಾರ್ಯಕಾರಿ ಪರಿಷತ್ತಿನ ಒಬ್ಬ ಸದಸ್ಯ, ಸರ್ಕಾರದ ಒಬ್ಬ ಪ್ರತಿನಿಧಿ ಮತ್ತು ಇಂಜಿನಿಯರಿಂಗ್, ತಂತ್ರಜ್ಞಾನ ಮತ್ತು ಕೈಗಾರಿಕಾ ರಂಗದಲ್ಲಿ ತಜ್ಞನಾದ ಒಬ್ಬ ವ್ಯಕ್ತಿ ಇವರನ್ನು ಒಳಗೊಂಡಿರತಕ್ಕದ್ದು:

ಪರಂತು, ಸಮಿತಿಯ ಶಿಫಾರಸ್ಸು ಮಾಡಿದ ಯಾವೊಬ್ಬ ಸದಸ್ಯರೂ ನೇಮಕಾತಿಯನ್ನು ಅಂಗೀಕರಿಸಲು ಇಚ್ಛಿಸದಿದ್ದರೆ, ಅಥವಾ ಶಿಫಾರಸ್ಸು ಮಾಡಲಾದ ಯಾವೊಬ್ಬ ವ್ಯಕ್ತಿಯನ್ನು ಕುಲಪತಿಯು ಅಂಗೀಕರಿಸದಿದ್ದರೆ, ಕುಲಪತಿಯು, ಸಮಿತಿಯಿಂದ ಹೊಸ ಶಿಫಾರಸ್ಸನ್ನು ತರಿಸಿಕೊಳ್ಳಬಹುದು:

ಮತ್ತು ಪರಂತು, ಕುಲಪತಿಯು, ಮೊದಲನೇ ಉಪಕುಲಪತಿಯನ್ನು ರಾಜ್ಯ ಸರ್ಕಾರವು ಶಿಫಾರಸ್ಸು ಮಾಡಿದ ಹೆಸರುಗಳ ಪಟ್ಟಿಯಿಂದ ಆಯ್ಕೆ ಮಾಡಿ ನೇಮಕ ಮಾಡತಕ್ಕದ್ದು.

(4) ಉಪಕುಲಪತಿಯ ಪದಾವಧಿಯು ಮೂರು ವರ್ಷಗಳಾಗಿರತಕ್ಕದ್ದು. ಇದು ಕುಲಪತಿಯ ಇಚ್ಛಾನುಸಾರವಾಗಿ ಅಷ್ಟೇ ಕಾಲಾವಧಿಯ ಮತ್ತೊಂದು ಅವಧಿಗೆ ವಿಸ್ತರಿಸಬಹುದಾಗಿರತಕ್ಕದ್ದು:

ಪರಂತು, ಉಪಕುಲಪತಿಯು ತನ್ನ ಸಹಿಯೊಂದಿಗೆ ಲಿಖಿತದಲ್ಲಿ ಕುಲಪತಿಗೆ ಮನವಿ ಸಲ್ಲಿಸುವ ಮೂಲಕ ಮತ್ತು ಮೂರು ತಿಂಗಳ ನೋಟೀಸನ್ನು ನೀಡಿದ ತರುವಾಯ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು.

(5) ಕುಲಪತಿಯು, ಪದಾವಧಿಯು ಮುಕ್ತಾಯಗೊಂಡ ಉಪಕುಲಪತಿಗೆ ನಿರ್ದೇಶನ ನೀಡಿ, ಆ ನಿರ್ದೇಶನದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಒಂದು ವರ್ಷಕ್ಕೆ ಮೀರದಂಥ ಅವಧಿಗೆ ಪದದಲ್ಲಿ ಮುಂದುವರಿಯಲು ನಿರ್ದೇಶಿಸಬಹುದು.

(6) ಉಪಕುಲಪತಿಯ ಉಪಲಬ್ಧಿಗಳು ಮತ್ತು ಸೇವಾ ಷರತ್ತುಗಳು ಕುಲಪತಿಯು ನಿರ್ಧಾರಣೆ ಮಾಡಬಹುದಾದಂಥದ್ದಾಗಿರತಕ್ಕದ್ದು ಮತ್ತು ಅವನ ನೇಮಕಾತಿಯಾದ ತರುವಾಯ ಅದನ್ನು ಅವನಿಗೆ ತೊಂದರೆಯಾಗುವಂತೆ ಬದಲಾಯಿಸತಕ್ಕದ್ದಲ್ಲ.

XX XX XX

**15. ರಿಜಿಸ್ಟ್ರಾರ್.–** (1) ಶಾಸನಗಳ ಮೂಲಕ ನಿಯಮಿಸಬಹುದಾದ ಅಂಥ ಅವಧಿಗೆ ಮತ್ತು ಅಂಥ ನಿಬಂಧನೆಗಳ ಮೇಲೆ ಉಪಕುಲಪತಿಗಳ ಕಾರ್ಯಕಾರಿ ಪರಿಷತ್ತಿಗೆ ಶಿಫಾರಸ್ಸು ಮಾಡಿದ ಮೂರು ಜನರಿಗೆ ಕಡಿಮೆಯಿಲ್ಲದ ವ್ಯಕ್ತಿಗಳ ಪೈಕಿ, ಕಾರ್ಯಕಾರಿ ಪರಿಷತ್ತಿನ ಅನುಮೋದನೆಯೊಂದಿಗೆ ನೇಮಕಾರಿ ಮಾಡಲಾದ ರಿಜಿಸ್ಟ್ರಾರನು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

XX XX XX

**19. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** XX XX XX

(3) ಕಾರ್ಯಕಾರಿ ಪರಿಷತ್ತು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಉಪಕುಲಪತಿ, ಪದನಿಮಿತ್ತ ಅಧ್ಯಕ್ಷ;

(ಬಿ) ಪ್ರೌಢ ಶಿಕ್ಷಣ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ, ಅಥವಾ ಅವನಿಂದ ನಾಮನಿರ್ದೇಶಿತನಾದ ಸರ್ಕಾರದ ಉಪಕಾರ್ಯದರ್ಶಿ ದರ್ಜೆಗೆ ಕಡಿಮೆಯಿಲ್ಲದ ವ್ಯಕ್ತಿ;

(ಸಿ) ಉಪಕುಲಪತಿಯ ಶಿಫಾರಸ್ಸಿನ ಮೇಲೆ ಕುಲಪತಿಯು ನಾಮನಿರ್ದೇಶಿಸುವ, ಇಂಜಿನಿಯರಿಂಗ್/ವಾಸ್ತುಶಿಲ್ಪ ಕ್ಷೇತ್ರ ಮತ್ತು ಇಂಜಿನಿಯರಿಂಗ್ ವೃತ್ತಿಯಲ್ಲಿ ತಜ್ಞರಾದ ಕೈಗಾರಿಕೆ/ವ್ಯವಹಾರ, ವ್ಯಾಪಾರ/ಶೈಕ್ಷಣಿಕ ರಂಗಗಳನ್ನು ಪ್ರತಿನಿಧಿಸುವ ಐದು ಜನರು, ಅವರ ಪೈಕಿ ಒಬ್ಬನು ಅನುಸೂಚಿತ ಜಾತಿ/ಅನುಸೂಚಿತ ಪಂಗಡಕ್ಕೆ, ಒಬ್ಬ ಹಿಂದುಳಿದ ಸಮುದಾಯ ಮತ್ತು ಒಬ್ಬನು ಮತೀಯ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರಾಗಿರತಕ್ಕದ್ದು;

(ಡಿ) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ಕರ್ನಾಟಕ ಸರ್ಕಾರದ ಮೂರು ಜನ ಪ್ರತಿನಿಧಿಗಳು ಇವರಲ್ಲಿ ಒಬ್ಬನು ತಾಂತ್ರಿಕ ಶಿಕ್ಷಣದ ನಿರ್ದೇಶಕನಾಗಿರತಕ್ಕದ್ದು.

(ಇ) ಉಪಕುಲಪತಿಯ ಶಿಫಾರಸ್ಸಿನ ಮೇಲೆ ಕುಲಪತಿಯು ನಾಮನಿರ್ದೇಶಿಸುವ ಪ್ರಾಂಶುಪಾಲ/ಪ್ರಾಧ್ಯಾಪಕನ ದರ್ಜೆಗೆ ಕಡಿಮೆಯಿಲ್ಲದ, ಘಟಕ ಕಾಲೇಜುಗಳ ಐದು ಜನ ಪ್ರತಿನಿಧಿಗಳು;

(ಎಫ್) ವಿಶ್ವವಿದ್ಯಾಲಯಗಳ ಅನುದಾನ ಸಮಿತಿಯಿಂದ ನಾಮನಿರ್ದೇಶಿತನಾದ ವ್ಯಕ್ತಿ;

(ಜಿ) ಪರಿಷತ್ತು ಸಹ ಆಯ್ಕೆ ಮಾಡುವ ಇಂಜಿನಿಯರಿಂಗ್, ತಂತ್ರಜ್ಞಾನ ಅಥವಾ ಸಂಬಂಧಿತ ವಿಜ್ಞಾನ ಶಿಕ್ಷಣಕ್ಕೆ ಸಂಬಂಧಪಡುವ ಇಬ್ಬರು ಗಣ್ಯ ವ್ಯಕ್ತಿಗಳು;

**22. ವಿದ್ಯಾವಿಷಯಕ ಸೆನೆಟಿನ ರಚನೆ.–** ವಿದ್ಯಾವಿಷಯಕ ಸೆನೆಟು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

**(1) ಉಪಕುಲಪತಿ.–** XX XX XX

(11) ಕುಲಪತಿಯು ನಾಮನಿರ್ದೇಶಿಸಿದ (ಎ) ಅನುಸೂಚಿತ ಜಾತಿ/ಅನುಸೂಚಿತ ಪಂಗಡಗಳು (ಬಿ) ಹಿಂದುಳಿದ ವರ್ಗ (ಸಿ) ಮತೀಯ ಅಲ್ಪಸಂಖ್ಯಾತರು – ಇವುಗಳಿಗೆ ಸೇರಿದ ವ್ಯಕ್ತಿಗಳಲ್ಲಿ ಪ್ರತಿಯೊಂದರಿಂದಲೂ ಒಬ್ಬರಂತೆ ತಾಂತ್ರಿಕ ಹಿನ್ನಲೆಯುಳ್ಳವಂಥ ಮೂವರು ಪ್ರಸಿದ್ಧ ವ್ಯಕ್ತಿಗಳು;

**26. ಲೆಕ್ಕ ಪರಿಶೋಧನೆಗೆ ಆದೇಶಿಸಲು ಸರ್ಕಾರದ ಅಧಿಕಾರ.–** ರಾಜ್ಯ ಸರ್ಕಾರವು ತಾನು ನಿರ್ದೇಶಿಸಬಹುದಾದಂಥ ಲೆಕ್ಕ ಪರಿಶೋಧಕರಿಂದ ಯಾವುದೇ ಸಮಯದಲ್ಲಿ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆಗೆ ಆದೇಶಿಸಲು ಅಧಿಕಾರ ಹೊಂದಿರತಕ್ಕದ್ದು.

XX XX XX

**30. ಶಾಸನಗಳನ್ನು ರಚಿಸುವ ಬಗ್ಗೆ.–** (1) 29ನೇ ಪ್ರಕರಣದಲ್ಲಿ ಹೇಳಲಾದ ವಿಷಯಗಳ ಸಂಬಂಧದಲ್ಲಿ ಮೊದಲ ಶಾಸನಗಳನ್ನು ಕುಲಪತಿಯ ಅನುಮೋದನೆಯನ್ನು ಪಡೆದು ಉಪಕುಲಪತಿಯು ಮಾಡತಕ್ಕದ್ದು.

(2) ಕಾರ್ಯಕಾರಿ ಪರಿಷತ್ತು ಈ ಪ್ರಕರಣದಲ್ಲಿ ಇನ್ನು ಮುಂದೆ ಉಪಬಂಧಿಸಲಾದ ರೀತಿಯಲ್ಲಿ ಕಾಲಕಾಲಕ್ಕೆ ಶಾಶನಗಳನ್ನು ಮಾಡಬಹುದು ಮತ್ತು ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

(3) ಕಾರ್ಯಕಾರಿ ಪರಿಷತ್ತು ಹೊರಡಿಸಿದ ಶಾಸನವನ್ನು ಕುಲಪತಿಗೆ ಒಪ್ಪಿಸತಕ್ಕದ್ದು ಮತ್ತು ಅವರು ಇದಕ್ಕೆ ಸಮ್ಮತಿ ನೀಡಬಹುದು ಅಥವಾ ಸಮ್ಮತಿ ತಡೆಹಿಡಿಯಬಹುದು. ಕಾರ್ಯಕಾರಿ ಪರಿಷತ್ತು ಹೊರಡಿಸಿದ ಯಾವುದೇ ಆದೇಶವು ಕುಲಪತಿಯಿಂದ ಅಧ್ಯಕ್ಷರ ಸಮ್ಮತಿ ದೊರಕಿದ ಹೊರತು ಮಾನ್ಯವಾಗತಕ್ಕದ್ದಲ್ಲ.

XX XX XX

**KARNATAKA LEGISLATIVE COUNCIL**
**ONE HUNDRED AND TWENTY FIRST SESSION**

## THE VISVESVARAYA TECHNOLOGICAL UNIVERSITY (AMENDMENT) BILL, 2013

**(L.C. Bill No. 07 of 2013)**

A Bill further to amend the Visvesvaraya Technological University Act, 1994.

Whereas it is expedient further to amend the Visvesvaraya Technological University Act, 1994 (Karnataka Act 39 of 1994) for the purposes hereinafter appearing;

Be it enacted by the Karnataka State Legislature in the sixty- fourth year of the Republic of India, as follows:-

**1. Short title and commencement.-** (1) This Act may be called the Visvesvaraya Technological University (Amendment) Act, 2013.

(2) It shall come into force at once.

**2. Amendment of section 13.-** In section 13 of the Visvesvaraya Technological University Act, 1994 (Karnataka Act 39 of 1994) (hereinafter referred to as the principal Act),-

(i) in sub-section (2), after the words, "The Vice Chancellor shall be appointed by the Chancellor", the words "with the concurrence of the Government" shall be inserted,

(ii) for the proviso to sub-section (3), the following shall be substituted, namely:-

"Provided that, the Government shall call for applications with wide publicity from the interested candidates and after scrutiny place all applications of eligible candidates before the Search Committee. The Search Committee shall hold an interview with the applicants to assess the eligibility, suitability, vision, experience and such other aspects of the candidates as deemed fit by the committee and prepare a panel of three names in the alphabetical order. The panel of names shall be submitted to the Government and the Government shall forward the panel to the Chancellor recommending a suitable candidate from the list. If the Chancellor is not agreeable to the name suggested by the Government, he may appoint any other candidate from the panel after the consent of the Government.

**Explanation.-** For the purpose of this section eminent academician means a person who has an experience of a minimum of five years as a professor in a university established by law and has guided at least five Ph.D students and has sufficient experience in administration.

Provided further that, if none of the persons recommended by the committee is willing to accept the appointment or if none of the persons recommended is acceptable to the Chancellor, the Chancellor may call for fresh recommendations from such committee:

Provided also that the first Vice-Chancellor shall be appointed by the Chancellor from out of a panel of names recommended by State Government."

(iii) for sub-section (4), the following shall be substituted, namely:-

"(4) Subject to the pleasure of the chancellor the term of the Vice-Chancellor shall be four years from the date on which he enters upon his office or until he attains the age of sixty-seven years whichever is earlier, and he shall not be eligible for reappointment.

(iv) sub-section (5), shall be omitted.

**3. Amendment of section 15.-** In section 15 of the principal Act, for sub-section (1), the following shall be substituted, namely:-

"(1) The Registrar shall be a wholetime officer of the University. The State Government shall appoint an officer belonging to the Indian Administrative Service or Karnataka Administrative Service officer of Supertime scale or a member of a faculty who has put in more than five years of service as a professor in a State University. The Registrar shall hold the office subject to the pleasure of the Government."

**4. Amendment of section 19.-** In section 19, of the Principal Act, in sub-section(3),-

(1) after clause (b), the following shall be inserted, namely:-

"(bb) Director of Technical Education"

(2) for clause (c), the following shall be substituted, namely:-

"(c) Six persons representing industry/business, educational experts, academicians/professionals in the field of Engineering/ Architecture, nominated by the Government. Out of them, one shall belongs to the Scheduled Castes or Secheduled Tribes, one shall belongs to other Backward community, one shall belongs to religious minorities and one shall be women."

(3) for clause(d), the following shall be substituted, namely:-

"(d) two persons nominated by the Chancellor."

**5. Insertion of new section 20A.-** After section 20, of the Principal Act, the following new section shall be inserted, namely:-

"**20A. To Annul the Proceedings of the Executive Council.-** The State Government may by an order, annul any order notification, resolution of any meetings of the Executive Council, Academic Senate etc.,:

Provided that, the Government, shall issue a showcause notice to the University, calling for explanation within a period of time mentioned in the said notice, and only after considering the explanation, Government may annul the proceedings. If no explanation is received by the Government within the time stipulated in the notice, the Government may take further action as deemed fit."

**6. Amendment of section 22.-** In section 22 of the principal Act, in sub-section (11) for the word "the Chancellor" the words "the State Government" shall be substituted.

**7. Amendment of section 26.-** In section 26 of the principal Act, after the words 'as it may direct', the following shall be inserted, namely:-

"and direct the University to effect corrective measures; The Pro-Chancellor may order for disciplinary proceedings against the erring officer or officials of the University in this regard:

Provided that the Government shall keep the Chancellor informed on the disciplinary action taken against the officers and officials."

**8. Amendment of section 30.-** For section 30 of the principal Act, the following shall be substituted, namely:-

"**30. Statutes, how made.-** Every new statute or amendment to the existing statute or repeal of a statute after the approval of the Executive Council shall be forward to the Government. The Government may examine the same and if satisfied about its conformity with the Act and policy of the Government, shall forward the same for the approval of the Chancellor or may remit to the Executive Council for reconsideration in the light of the observation made by the Government. The Chancellor, on receipt of the statute may assent or remit to the Executive Council for reconsideration in the light of the observation, if any made by him."

## STATEMENT OF OBJECTS AND REASONS

It is considered necessary to amend the Visvesvaraya Technological University Act, 1994 (Karnataka Act 39 of 1994), to provide for,-

(1) entrusting more power to the pro-chancellor;

(2) annulment of proceedings of the executive council by the Government after giving show cause notice to the University;

(3) empowerment of Pro-Chancellor to order disciplinary proceedings against the erring officers of the University; and

(4) certain other consequential amendments.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**C.T. RAVI**

Minister for Higher Education

**V. SHREESH**

Secretary

Karnataka Legislative Council

**ANNEXURE**

**EXTRACT FROM THE VISVESVARAYA TECHNOLOGICAL UNIVERSITIES ACT, 1994**

**(KARNATAKA ACT NO. 39 of 1994)**

**XX XX XX**

**13. The Vice Chancellor.-** (1) The Vice-Chancellor shall be a whole time officer of the University and shall function as the chief academic and administrative head of the University.

(2) The Vice-Chancellor shall be appointed by the Chancellor from a panel of three persons who are outstanding in the field of Engineering, Technology or education and recommended by the committee referred to in sub-section (3) of this section and such panel shall not contain the name of any member of the sub-committee.

(3) For the purpose of sub-section (2) the committee shall consist of a member of Academic Senate, a member of the Executive Council, a representative of Government and a person of eminence in the field of engineering, technology and industry nominated by the Chancellor:

Provided that if none of the persons recommended by the committee is willing to accept the appointment or if none of the persons recommended is acceptable to the Chancellor, the Chancellor may call for fresh recommendations from such committee:

Provided further that the first Vice-Chancellor shall be appointed by the Chancellor from out of a panel of names recommended by State Government.

(4) The term of office of the Vice-Chancellor shall be three years extendable by another term of similar period at the discretion of the Chancellor:

Provided that the Vice-Chancellor may by writing under his hand addressed to the Chancellor and after giving three months notice resign his office.

(5) The Chancellor may direct that a Vice-Chancellor whose term of office has expired shall continue in the office for such period not exceeding one year as may be specified in the direction.

XX XX XX

**15. Registrar.-** (1) The Registrar shall be a whole time officer of the University appointed by the Vice-Chancellor with the approval of Executive Council from out of not less than three persons recommended by the Vice-Chancellor to the Executive Council for such period and on such terms as may be prescribed by the Statutes.

XX XX XX

**19. Authorities of the University.-**

XX XX xx

(3) The Executive Council shall consist of the following members namely:-

(a) the Vice-Chancellor, ex-officio Chairman;

(b) Secretary to Government in-charge of Higher Education or his nominee not less than the rank of Deputy Secretary to Government;

(c) five persons representing Industry/business, trade/educational experts in the field of Engineering/Architecture and the Engineering professions, nominated by the Chancellor on the recommendation of the

Vice-Chancellor. Out of them, one must belong to Scheduled Caste/Scheduled Tribe, one to backward community and one to religious minorities;

(d) three representatives of the Government of Karnataka nominated by the State Government one of whom shall be the Director of Technical Education;

(e) five representatives of the constituent colleges, not below the rank of Principal/Professor nominated by the Chancellor on the recommendations of the Vice-Chancellor;

(f) the nominee of the Universities Grant Commission;

(g) two eminent persons connected with Engineering, Technology or allied sciences education co-opted by the Council.

XX XX XX

**22. Constitution of the Academic Senate**.-

XX XX XX

(11) three eminent persons having technical back-ground, one each belonging to (a) Scheduled Castes/Scheduled Tribes (b) Backward classes and (c) religious minority nominated by the Chancellor.

XX XX XX

**26. Power of Government to order auditing**.- The State Government shall have power at any time to order an audit of the account of the University by such auditors as it may direct.

XX XX XX

**30. Statutes, how made.-** (1) The first Statutes with regard to matters set out in section 29 shall be made by the Vice-Chancellor with the approval of the Chancellor.

(2) The Executive Council may from time to time, make Statutes and amend or repeal the Statutes in the manner hereinafter provided in this section.

(3) A Statute passed by the Executive Council shall be submitted to the Chancellor who may assent thereto or withhold his assent. A Statute passed by the Executive Council shall have no validity until it has been assented to by the Chancellor.

XX XX XX


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಬುಧವಾರ, ಫೆಬ್ರವರಿ ೧೩, ೨೦೧೩ (ಮಾಘ ೨೪, ಶಕ ವರ್ಷ ೧೯೩೪) | ನಂ. ೩೯೭ |
| **Part – IV-A** | **Bangalore, Wednesday, February 13, 2013 (Magha 24, Shaka Varsha 1934)** | **No. 397** |


**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ: 121ಅ:ವಿಪ:8:2013, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ, 2013**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 12ನೇ ಫೆಬ್ರವರಿ, 2013ರಂದು ಮಂಡಿಸಲಾಯಿತು

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಇಪ್ಪತ್ತೊಂದನೇ ಅಧಿವೇಶನ**

## ಕರ್ನಾಟಕ ಪುರಸಭೆಗಳು ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 8)**

ಕರ್ನಾಟಕ ಪುರಸಭೆಗಳ ಅಧಿನಿಯಮ, 1964 ಮತ್ತು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪುರಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 22) ಮತ್ತು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಪುರಸಭೆಗಳು ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

**(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.**

**2. 1964ರ ಕರ್ನಾಟಕ ಅಧಿನಿಯಮ 22ಕ್ಕೆ ತಿದ್ದುಪಡಿ.–** ಕರ್ನಾಟಕ ಪುರಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) 14ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

**``14ಎ. ರಾಜ್ಯ ಚುನಾವಣಾ ಆಯೋಗವು ಚುನಾವಣೆಗಳ ದಿನಾಂಕವನ್ನು ನಿಗದಿ ಮಾಡುವುದು.**–(1) ನಗರಸಭೆ ಅಥವಾ ಪಟ್ಟಣ ಪುರಸಭೆ ಅಥವಾ ಪಟ್ಟಣ ಪಂಚಾಯತಿಗಳನ್ನು ರಚಿಸಲು ಮತ್ತು ಆಕಸ್ಮಿಕ ಖಾಲಿ ಸ್ಥಾನಗಳನ್ನು ಭರ್ತಿ ಮಾಡಲು ಚುನಾವಣೆಗಳ ದಿನಾಂಕ ಅಥವಾ ದಿನಾಂಕಗಳನ್ನು ರಾಜ್ಯ ಸರ್ಕಾರದ ಸಹಮತಿಯೊಂದಿಗೆ ರಾಜ್ಯ ಚುನಾವಣಾ ಆಯೋಗವು ನಿಗದಿ ಮಾಡತಕ್ಕದ್ದು:

ಪರಂತು, ಕೌನ್ಸಿಲರ್‌ನು ಸಾಮಾನ್ಯವಾಗಿ ನಿವೃತ್ತಿಯಾಗುವ ದಿನಾಂಕಕ್ಕಿಂತ ಮೊದಲು ನಾಲ್ಕು ತಿಂಗಳುಗಳೊಳಗೆ ಉಂಟಾಗುವ ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿ ಮಾಡಲು ಯಾವುದೇ ಚುನಾವಣೆ ನಡೆಸತಕ್ಕದ್ದಲ್ಲ ಮತ್ತು ಅಂಥ ಖಾಲಿ ಸ್ಥಾನವನ್ನು ಮುಂಬರುವ ಸಾಮಾನ್ಯ ಚುನಾವಣೆಯಲ್ಲಿಯೇ ಭರ್ತಿ ಮಾಡತಕ್ಕದ್ದು.

(2) ಆಕಸ್ಮಿಕ ಖಾಲಿ ಸ್ಥಾನದ ಚುನಾವಣೆಯಲ್ಲಿ ಚುನಾಯಿತಗೊಂಡ ಕೌನ್ಸಿಲರು ಕೂಡಲೇ ಪದಧಾರಣ ಮಾಡತಕ್ಕದ್ದು ಆದರೆ ಖಾಲಿ ಸ್ಥಾನವು ಉಂಟಾಗದಿದ್ದಲ್ಲಿ, ಆತನು ಯಾರ ಸ್ಥಾನದಲ್ಲಿ ಕೌನ್ಸಿಲರ್ ಆಗಿ ಚುನಾಯಿತಗೊಂಡಿರುವನೋ ಅವರ ಉಳಿದ ಅವಧಿಯವರೆಗೆ ಪದಧಾರಣವನ್ನು ಮಾಡತಕ್ಕದ್ದು.''

**3. 1977ರ ಕರ್ನಾಟಕ ಅಧಿನಿಯಮ 14ರ ತಿದ್ದುಪಡಿ.–** ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರಲ್ಲಿನ (ಕರ್ನಾಟಕ ಅಧಿನಿಯಮ ಸಂಖ್ಯೆ: 1977ರ 14) 24ನೇ ಪ್ರಕರಣದ, (1)ನೇ ಉಪ ಪ್ರಕರಣದಲ್ಲಿ, "ಸರ್ಕಾರದೊಂದಿಗೆ ಸಮಾಲೋಚನೆ ನಡೆಸುವ" ಎಂಬ ಪದಗಳಿಗೆ "ರಾಜ್ಯ ಸರ್ಕಾರದ ಸಹಮತಿಯನ್ನು ಪಡೆಯುವ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ರಾಜ್ಯ ಸರ್ಕಾರದ ಮತ್ತು ರಾಜ್ಯ ಚುನಾವಣಾ ಆಯೋಗದ ನಡುವೆ ಉತ್ತಮ ಸಮನ್ವಯವನ್ನು ಸಾಧಿಸುವ ಉದ್ದೇಶದಿಂದ, ರಾಜ್ಯ ಸರ್ಕಾರದ ಸಹಮತಿ ಪಡೆದ ಚುನಾವಣಾ ಆಯೋಗವು ಚುನಾವಣಾ ದಿನಾಂಕವನ್ನು ನಿಗದಿಪಡಿಸಲು ಸಾಧ್ಯವಾಗುವಂತೆ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ಮತ್ತು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನಾ ಪತ್ರ**

ಪ್ರಸ್ತಾವಿತ ತಿದ್ದುಪಡಿಯು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು
ಸಂಸದೀಯ ವ್ಯವಹಾರಗಳ ಸಚಿವರು

**ಪಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**ಅನುಬಂಧ**

**ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14) ಉದ್ಧೃತ ಭಾಗ**

xx xx xx

**24. ರಾಜ್ಯ ಚುನಾವಣಾ ಆಯೋಗವು ಚುನಾವಣೆಗಳ ದಿನಾಂಕವನ್ನು ಗೊತ್ತುಪಡಿಸತಕ್ಕದ್ದು.–** (1) ನಿಗಮದ ರಚನೆಗೆ ಮತ್ತು ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿ ಮಾಡುವುದಕ್ಕೆ ಚುನಾವಣೆಯ ದಿನಾಂಕ ಅಥವಾ ದಿನಾಂಕಗಳನ್ನು ರಾಜ್ಯ ಚುನಾವಣಾ ಆಯೋಗವು ಸರ್ಕಾರದೊಂದಿಗೆ ಸಮಾಲೋಚನೆ ನಡೆಸುವ ಮೂಲಕ ನಿಗದಿಪಡಿಸತಕ್ಕದ್ದು:

ಪರಂತು, ಕೌನ್ಸಿಲರನ ನಿವೃತ್ತಿಯ ಸಾಮಾನ್ಯ ದಿನಾಂಕಕ್ಕಿಂತ ಮುಂಚೆ ನಾಲ್ಕು ತಿಂಗಳುಗಳ ಒಳಗೆ ಸಂಭವಿಸಿದ ಆಕಸ್ಮಿಕ ಸ್ಥಾನವನ್ನು ಭರ್ತಿ ಮಾಡಲು ಯಾವುದೇ ಚುನಾವಣೆ ನಡೆಸತಕ್ಕದ್ದಲ್ಲ ಮತ್ತು ಅಂಥ ಖಾಲಿ ಸ್ಥಾನವನ್ನು ಮುಂದಿನ ಸಾರ್ವತ್ರಿಕ ಚುನಾವಣೆಯಲ್ಲಿ ಭರ್ತಿ ಮಾಡತಕ್ಕದ್ದು.

xx xx xx

## KARNATAKA LEGISLATIVE COUNCIL
## ONE HUNDRED AND TWENTY FIRST SESSION
# THE KARNATAKA MUNICIPALITIES AND CERTAIN OTHER LAW (AMENDMENT) BILL, 2013
## (L.C. Bill No. 08 of 2013)

A Bill further to amend the Karnataka Municipalities Act, 1964 and the Karnataka Municipal Corporations Act, 1976.

Whereas it is expedient further to amend the Karnataka Municipalities Act, 1964 (Karnataka Act 22 of 1964) and the Karnataka Municipal Corporations Act, 1976 (Karnataka Act 14 of 1977) for the purposes hereinafter appearing;

Be it enacted by the Karnataka State Legislature in the Sixty fourth year of the Republic of India as follows:-

**1. Short title and commencement.-** (1) This Act may be called the Karnataka Municipalities and Certain Other Law (Amendment) Act, 2013.

(2) It shall come into force at once.

**2. Amendment of the Karnataka Act 22 of 1964.-** In the Karnataka Municipalities Act, 1964 (Karnataka Act 22 of 1964), after section 14, the following shall be inserted, namely:-

**"14A. State Election Commission to fix date of elections.-**(1) The date or dates of elections to constitute a City Municipal Council or Town Municipal Council or a Town Panchayat and to fill the casual vacancy shall be fixed by the State Election Commission with the concurrence of the State Government.

Provided that no election shall be held to fill a casual vacancy occurring within four months before the ordinary date of retirement of the councilor and that such vacancy shall be filled at the next ordinary election.

(2) A councilor elected at a casual vacancy election shall enter upon office forthwith but-shall hold office so long only as the councilor in whose place he is elected would have held if the vacancy had not occurred".

**3. Amendment of the Karnataka Act 14 of 1977.-** In the Karnataka Municipal Corporations Act, 1976 (Karnataka Act 14 of 1977), in section 24, in sub-section (1), for the words "in consultation with the Government" the words "with concurrence of the State Government" shall be substituted.

## STATEMENT OF OBJECTS AND REASONS

It is considered necessary to amend the Karnataka Municipalities Act, 1964 and the Karnataka Municipal Corporations Act, 1976 to enable the Election Commission to fix the date of Elections with the concurrence of the State Government with an object to have better co-ordination between the State Government and the State Election Commission.

Hence the Bill.

## FINANCIAL MEMORANDUM

There is no extra expenditure involved in the proposed legislative measure.

**S. SURESH KUMAR**
Minister for Urban Development,
Law and Parliamentary affairs

**V. SHREESH**
Secretary
Karnataka Legislative Council

## ANNEXURE

## THE EXTRACT FROM THE KARNATAKA MUNICIPAL CORPORATIONS ACT, 1976 (KARNATAKA ACT 14 OF 1977)

XX XX XX

**24. State Election Commission to fix date of elections.-** (1) The date or dates of elections to constitute a corporation and to fill the casual vacancy shall be fixed by the State Election Commission in consultation with the Government: Provided that no election shall be held to fill a casual vacancy occurring within four months before the ordinary date of retirement of the councillor and that such vacancy shall be filled at the next ordinary election.

XX XX XX

## STATEMENT OF OBJECTS AND REASONS

The Government had constituted One-man Committee under the Chairmanship of Sri K.R.Chamayya, Former Vice-Chairman, Karnataka Administrative Tribunal to suggest repeal of all obsolete regional acts which are in force in different areas of the State i.e. Belgaum Area, Coorg Area, Gulbarga Area, Mangalore and Kollegal Area, and Mysore Area.

Accordingly, One–Man Committee has proposed to repeal 05 Acts relating to the Belgaum Area, 03 Acts relating to Mangalore and Kollegal Area, 02 Acts relating to Gulbarga Area and 01 Act relating to Mysore Area. And also it is considered necessary to repeal 296 Amending Acts.

Hence the bill

## FINANCIAL MEMORANDUM

There is no extra expenditure involved in the proposed measure.

**S. SURESH KUMAR**
Minister for Urban Development,
Parliamentary Affairs and Legislation

**P. OMPRAKASHA**
Secretary
Karnataka Legislative Assembly


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೧೩, ೨೦೧೩ (ಮಾಘ ೨೪, ಶಕ ವರ್ಷ ೧೯೩೪) | ನಂ. ೪೦೧ |
| **Part – IV-A** | **Bangalore, Wednesday, February 13, 2013 (Magha 24, Shaka Varsha 1934)** | **No. 401** |


## KARNATAKA LEGISLATIVE ASSEMBLY SECRETARIAT

**NOTIFICATION**

**No. KLA/LGA/04/Bill/2013, Bangalore, Dated: 13-02-2013**

The following Bill was introduced in Legislative Assembly on 13-2-2013

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನಾರನೇ ಅಧಿವೇಶನ**

## ವಿದ್ಯುಚ್ಛಕ್ತಿ (ಕರ್ನಾಟಕ ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 04)**

ವಿದ್ಯುಚ್ಛಕ್ತಿ ಅಧಿನಿಯಮ, 2003ನ್ನು ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ಮತ್ತಷ್ಟು ತಿದ್ದುಪಡಿಯನ್ನು ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಕ್ಕಾಗಿ ವಿದ್ಯುಚ್ಛಕ್ತಿ ಅಧಿನಿಯಮ, 2003ನ್ನು (2003ರ ಕೇಂದ್ರ ಅಧಿನಿಯಮ 36) ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ವಿದ್ಯುಚ್ಛಕ್ತಿ (ಕರ್ನಾಟಕ ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 53ಎ ಪ್ರಕರಣದ ಸೇರ್ಪಡೆ.–** ವಿದ್ಯುಚ್ಛಕ್ತಿ ಅಧಿನಿಯಮ, 2003ರ (2003ರ ಕೇಂದ್ರ ಅಧಿನಿಯಮ 36) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 53ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"53–ಎ. ಸುರಕ್ಷತೆ ಮತ್ತು ವಿದ್ಯುಚ್ಛಕ್ತಿ ಸರಬರಾಜಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರದ ಅಧಿಕಾರಗಳು.–** ವಿದ್ಯುತ್ ಸುರಕ್ಷತಾ ಕ್ರಮಗಳನ್ನು ಅನುಸರಿಸಲು ಮತ್ತು ವಿದ್ಯುಚ್ಛಕ್ತಿ ಸರಬರಾಜಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರ ಅಥವಾ ಪ್ರಾಧಿಕಾರವು ಯಾವುದೇ ಉಪಬಂಧವನ್ನು ಕಲ್ಪಿಸಿರದಿದ್ದಲ್ಲಿ ರಾಜ್ಯ ಸರ್ಕಾರವು ಈ ಮುಂದಿನವುಗಳಿಗಾಗಿ ನಿಯಮಗಳ ಮೂಲಕ ಉಪಬಂಧಗಳನ್ನು ಕಲ್ಪಿಸಬಹುದು,–

(ಎ) ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ವಿದ್ಯುತ್ ಪರಿವೀಕ್ಷಕರುಗಳಿಂದ ಪರಿವೀಕ್ಷಣೆಯ ಸಂಬಂಧದಲ್ಲಿ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ವಿಧಾನ;

(ಬಿ) ವಿದ್ಯುತ್ ಗುತ್ತಿಗೆದಾರರಿಗೆ ಪರವಾನಗಿ ನೀಡುವ, ವಿದ್ಯುತ್ ಮೇಲ್ವಿಚಾರಕರುಗಳಿಗೆ ಮತ್ತು ತಂತಿ ಕೆಲಸಗಾರರಿಗೆ (ವೈರ್‌ಮೆನ್) ಸಕ್ಷಮ ಪ್ರಮಾಣ ಪತ್ರಗಳನ್ನು ಮತ್ತು ರಹದಾರಿಗಳನ್ನು ನೀಡುವ ವಿಧಾನ;

(ಸಿ) ವಿದ್ಯುತ್ ಸ್ಥಾವರಗಳ ಅಳವಡಿಕೆಯ ನೀಲಿ ನಕ್ಷೆಗಳ ಪರಿಶೀಲನೆ ಮತ್ತು ಅನುಮೋದನೆಯ ವಿಧಾನ;

(ಡಿ) ಮುಖ್ಯ ವಿದ್ಯುತ್ ಪರಿವೀಕ್ಷಕರು ಅಥವಾ ವಿದ್ಯುತ್ ಪರಿವೀಕ್ಷಕರು ಪರಿವೀಕ್ಷಣೆ ನಡೆಸಿದ್ದಕ್ಕಾಗಿ ಅಥವಾ ಅವರು ಒದಗಿಸುವ ಇತರ ಸೇವೆಗಳಿಗಾಗಿ ಶುಲ್ಕವನ್ನು ವಿಧಿಸುವುದು; ಮತ್ತು

(ಇ) ವಿದ್ಯುತ್ ಸ್ಥಾವರಗಳ ಪರಿವೀಕ್ಷಣೆ ಮತ್ತು ಇತರ ಸೇವೆಗಳ ಶುಲ್ಕದ ದರ ಮತ್ತು ಸಂಗ್ರಹಿಸುವ ವಿಧಾನ. ಗೊತ್ತುಪಡಿಸಿದ ಅವಧಿಯೊಳಗೆ ಸಂದಾಯ ಮಾಡದಿದ್ದಲ್ಲಿ, ಅದನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡುವುದು."

**3. 162ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 162ನೇ ಪ್ರಕರಣದಲ್ಲಿ, (2)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ವಿದ್ಯುತ್ ಪರಿವೀಕ್ಷಕರುಗಳ ಅಧಿಕಾರಗಳು ಮತ್ತು ಪ್ರಕಾರ್ಯಗಳು ಹಾಗೂ ವಿದ್ಯಾರ್ಹತೆಗಳ ಸಂಬಂಧದಲ್ಲಿ ಕೇಂದ್ರ ಸರ್ಕಾರ ಅಥವಾ ಕೇಂದ್ರ ವಿದ್ಯುಚ್ಛಕ್ತಿ ಪ್ರಾಧಿಕಾರವು ಯಾವುದೇ ಉಪಬಂಧವನ್ನು ಕಲ್ಪಿಸಿರದಿದ್ದಲ್ಲಿ, ರಾಜ್ಯ ಸರ್ಕಾರವು ನಿಯಮಗಳ ಮೂಲಕ ಅವುಗಳನ್ನು ನಿಯಮಿಸಬಹುದು."

**4. 180ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 180ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ,–

(ಎ) (ಎ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎಎ) 53ನೇ ಪ್ರಕರಣಕ್ಕೆ ಒಳಪಟ್ಟು,–

(i) ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ವಿದ್ಯುತ್ ಪರಿವೀಕ್ಷಕರಿಂದ ಪರಿವೀಕ್ಷಣೆಯ ಕಾರ್ಯ ವಿಧಾನದ ಬಗ್ಗೆ;

(ii) ವಿದ್ಯುತ್ ಗುತ್ತಿಗೆದಾರರಿಗೆ ಪರವಾನಗಿ ನೀಡುವ, ವಿದ್ಯುತ್ ಮೇಲ್ವಿಚಾರಕರುಗಳಿಗೆ ಮತ್ತು ತಂತಿ ಕೆಲಸಗಾರರಿಗೆ (ವೈರ್‌ಮನ್) ಸಕ್ಷಮ ಪ್ರಮಾಣ ಪತ್ರಗಳನ್ನು ಮತ್ತು ರಹದಾರಿಗಳನ್ನು (ಪರ್ಮಿಟು) ನೀಡುವುದಕ್ಕೆ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ವಿಧಾನದ ಬಗ್ಗೆ;

(iii) ವಿದ್ಯುತ್ ಸ್ಥಾವರಗಳ ಅಳವಡಿಕೆಯ ನೀಲಿ ನಕ್ಷೆಗಳ ಪರಿಶೀಲನೆ ಮತ್ತು ಅನುಮೋದನೆಯ ವಿಧಾನ;

(iv) ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ವಿದ್ಯುತ್ ಪರಿವೀಕ್ಷಕರುಗಳು ಪರಿವೀಕ್ಷಣೆ ನಡೆಸಿದ್ದಕ್ಕಾಗಿ ಮತ್ತು ಅವರುಗಳು ಒದಗಿಸುವ ಇತರ ಸೇವೆಗಳಿಗಾಗಿ ಶುಲ್ಕವನ್ನು ವಿಧಿಸುವುದು;

(v) ವಿದ್ಯುತ್ ಸ್ಥಾವರಗಳ ಪರಿವೀಕ್ಷಣೆ ಮತ್ತು ಇತರ ಸೇವೆಗಳ ಶುಲ್ಕ ಸಂಗ್ರಹಣೆಯ ವಿಧಾನ ಮತ್ತು ಗೊತ್ತುಪಡಿಸಿದ ಅವಧಿಯೊಳಗೆ ಸಂದಾಯ ಮಾಡದಿದ್ದಲ್ಲಿ ಅದನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡುವುದು."

(ಬಿ) (ಎಂ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದು, ಎಂದರೆ:–

"(ಎಂಎಂ) 162ನೇ ಪ್ರಕರಣಕ್ಕೆ ಒಳಪಟ್ಟು, ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ವಿದ್ಯುತ್ ಪರಿವೀಕ್ಷಕರುಗಳ ಅಧಿಕಾರಗಳು ಮತ್ತು ಪ್ರಕಾರ್ಯಗಳು ಹಾಗೂ ವಿದ್ಯಾರ್ಹತೆಗಳ ಬಗ್ಗೆ."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಈ ಮುಂದಿನವುಗಳಿಗಾಗಿ, ಎಂದರೆ:–

(i) ವಿದ್ಯುತ್ ಸುರಕ್ಷತಾ ಕ್ರಮಗಳು ಮತ್ತು ವಿದ್ಯುಚ್ಛಕ್ತಿ ಸರಬರಾಜು;

(ii) ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ವಿದ್ಯುತ್ ಪರಿವೀಕ್ಷಕರುಗಳ ವಿದ್ಯಾರ್ಹತೆಗಳು, ಅಧಿಕಾರಗಳು ಮತ್ತು ಪ್ರಕಾರ್ಯಗಳು;

(iii) ವಿದ್ಯುತ್ ಗುತ್ತಿಗೆದಾರರಿಗೆ ಪರವಾನಗಿ ನೀಡುವುದಕ್ಕೆ ಹಾಗೂ ವಿದ್ಯುತ್ ಮೇಲ್ವಿಚಾರಕರುಗಳಿಗೆ ಮತ್ತು ತಂತಿ ಕೆಲಸಗಾರರಿಗೆ (ವೈರ್‌ಮನ್) ಸಕ್ಷಮ ಪ್ರಮಾಣ ಪತ್ರಗಳನ್ನು ಮತ್ತು ರಹದಾರಿಗಳನ್ನು (ಪರ್ಮಿಟು) ನೀಡುವುದಕ್ಕೆ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅದರ ವಿಧಾನ;

(iv) ಮುಖ್ಯ ವಿದ್ಯುತ್ ಪರಿವೀಕ್ಷಕರು ಅಥವಾ ವಿದ್ಯುತ್ ಪರಿವೀಕ್ಷಕರಿಂದ ಪರಿವೀಕ್ಷಣೆ ನಡೆಸಿದ್ದಕ್ಕಾಗಿ ಮತ್ತು ಅವರುಗಳು ಒದಗಿಸುವ ಇತರ ಸೇವೆಗಳಿಗಾಗಿ ಶುಲ್ಕವನ್ನು ವಿಧಿಸುವುದು;

(v) ಕೆಲವು ಆನುಷಂಗಿಕ ವಿಷಯಗಳು.

– ರಾಜ್ಯ ಸರ್ಕಾರಕ್ಕೆ ನಿಯಮ ರಚನಾಧಿಕಾರವನ್ನು ಕಲ್ಪಿಸುವುದಕ್ಕಾಗಿ ವಿದ್ಯುಚ್ಛಕ್ತಿ ಅಧಿನಿಯಮ, 2003 ನ್ನು ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ಮತ್ತಷ್ಟು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನಾ ಪತ್ರ**

**ಖಂಡ 2:** ಈ ಖಂಡದ ಮೂಲಕ ಸೇರಿಸಲು ಉದ್ದೇಶಿಸಲಾಗಿರುವ 53ಎ ಪ್ರಕರಣವು ಈ ಮುಂದಿನವುಗಳಿಗೆ ಸಂಬಂಧಪಟ್ಟಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ:–

(ಎ) ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ವಿದ್ಯುತ್ ಪರಿವೀಕ್ಷಕರು ಮಾಡುವ ಪರಿವೀಕ್ಷಣೆಯ ನಿಬಂಧನೆಗಳು ಮತ್ತು ಷರತ್ತುಗಳು ಮತ್ತು ವಿಧಾನ;

(ಬಿ) ವಿದ್ಯುತ್ ಗುತ್ತಿಗೆದಾರರಿಗೆ ಪರವಾನಗಿಯನ್ನು ನೀಡುವ, ಮೇಲ್ವಿಚಾರಕರುಗಳಿಗೆ ಮತ್ತು ತಂತಿ ಕೆಲಸಗಾರರಿಗೆ ಸಕ್ಷಮ ಪ್ರಮಾಣ ಪತ್ರಗಳನ್ನು ಮತ್ತು ರಹದಾರಿ (ಪರ್ಮಿಟ್ಟು)ಗಳನ್ನು ನೀಡುವ ವಿಧಾನ;

(ಸಿ) ವಿದ್ಯುತ್ ಸ್ಥಾವರಗಳ ಅಳವಡಿಕೆಯ ನೀಲಿ ನಕ್ಷೆಗಳ ಪರಿಶೀಲನೆ ಮತ್ತು ಅನುಮೋದನೆಯ ವಿಧಾನ;

(ಡಿ) ಮುಖ್ಯ ವಿದ್ಯುತ್ ಪರಿವೀಕ್ಷಕರು ಅಥವಾ ವಿದ್ಯುತ್ ಪರಿವೀಕ್ಷಕರು ಮಾಡಿದ ಪರಿವೀಕ್ಷಣೆಗಾಗಿ ಅಥವಾ ಅವರುಗಳು ಒದಗಿಸುವ ಇತರ ಸೇವೆಗಳಿಗಾಗಿ ಶುಲ್ಕವನ್ನು ವಿಧಿಸುವುದು;

(ಇ) ವಿದ್ಯುತ್ ಸ್ಥಾವರಗಳ ಪರಿವೀಕ್ಷಣೆಯ ಮತ್ತು ಇತರ ಸೇವೆಗಳ ಶುಲ್ಕದ ದರ ಮತ್ತು ಸಂಗ್ರಹಿಸುವ ವಿಧಾನ. ಗೊತ್ತುಪಡಿಸಿದ ಅವಧಿಯೊಳಗೆ ಸಂದಾಯ ಮಾಡದಿದ್ದಲ್ಲಿ, ಅದನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡುವುದು.

**ಖಂಡ 3:** ಈ ಖಂಡದ ಮೂಲಕ ಸೇರಿಸಲು ಉದ್ದೇಶಿಸಲಾಗಿರುವ 162ನೇ ಪ್ರಕರಣದ (3)ನೇ ಉಪಪ್ರಕರಣವು, ಮುಖ್ಯ ವಿದ್ಯುತ್ ಪರಿವೀಕ್ಷಕರ ಮತ್ತು ವಿದ್ಯುತ್ ಪರಿವೀಕ್ಷಕರ ಅಧಿಕಾರಗಳು ಮತ್ತು ಪ್ರಕಾರ್ಯಗಳು ಹಾಗೂ ವಿದ್ಯಾರ್ಹತೆಗಳ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 4:** ಈ ಖಂಡದ ಮೂಲಕ ಸೇರಿಸಲು ಉದ್ದೇಶಿಸಲಾಗಿರುವ 180ನೇ ಪ್ರಕರಣದ (2)ನೇ ಉಪಪ್ರಕರಣದ (ಎಎ) ಉಪಖಂಡವು, ಈ ಮುಂದಿನವುಗಳಿಗಾಗಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ:–

(ಎ) ವಿದ್ಯುತ್ ಪರಿವೀಕ್ಷಕರು ಮತ್ತು ವಿದ್ಯುತ್ ಪರಿವೀಕ್ಷಕರುಗಳಿಂದ ಪರಿವೀಕ್ಷಣೆಯ ಕಾರ್ಯ ವಿಧಾನ;

(ಬಿ) ವಿದ್ಯುತ್ ಗುತ್ತಿಗೆದಾರರುಗಳಿಗೆ ಪರವಾನಗಿಯನ್ನು ನೀಡುವ, ವಿದ್ಯುತ್ ಮೇಲ್ವಿಚಾರಕರುಗಳಿಗೆ ಮತ್ತು ತಂತಿ ಕೆಲಸಗಾರರಿಗೆ (ವೈರ್‌ಮನ್) ನೀಡುವ ಸಕ್ಷಮ ಪ್ರಮಾಣಪತ್ರಗಳನ್ನು ಮತ್ತು ರಹದಾರಿ (ಪರ್ಮಿಟ್ಟು)ಗಳನ್ನು ನೀಡುವುದಕ್ಕೆ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ವಿಧಾನ;

(ಸಿ) ವಿದ್ಯುತ್ ಸ್ಥಾವರಗಳ ಅಳವಡಿಕೆಯ ನೀಲಿ ನಕ್ಷೆಗಳ ಪರಿಶೀಲನೆ ಮತ್ತು ಅನುಮೋದನೆಯ ವಿಧಾನ;

(ಡಿ) ಮುಖ್ಯ ವಿದ್ಯುತ್ ಪರಿವೀಕ್ಷಕರು ಅಥವಾ ವಿದ್ಯುತ್ ಪರಿವೀಕ್ಷಕರು ಪರಿವೀಕ್ಷಣೆ ನಡೆಸಿದ್ದಕ್ಕಾಗಿ ಮತ್ತು ಅವರುಗಳು ಒದಗಿಸುವ ಇತರ ಸೇವೆಗಳಿಗಾಗಿ ಶುಲ್ಕವನ್ನು ವಿಧಿಸುವುದು;

(ಇ) ವಿದ್ಯುತ್ ಸ್ಥಾವರಗಳ ಪರಿವೀಕ್ಷಣೆಯ ಮತ್ತು ಇತರ ಸೇವೆಗಳ ಶುಲ್ಕದ ಸಂಗ್ರಹಣೆಯ ವಿಧಾನ.

ಪ್ರತ್ಯಾಯೋಜಿತ ಶಾಸನಾತ್ಮಕ ಅಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಜಗದೀಶ್ ಶೆಟ್ಟರ್**
ಮುಖ್ಯಮಂತ್ರಿಗಳು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ವಿದ್ಯುಚ್ಛಕ್ತಿ ಅಧಿನಿಯಮ, 2003ರ (2003ರ ಕೇಂದ್ರ ಅಧಿನಿಯಮ 36)**

**xx xx xx**

**162. ಮುಖ್ಯ ವಿದ್ಯುತ್ ಪರಿವೀಕ್ಷಕರ ಮತ್ತು ವಿದ್ಯುತ್ ಪರಿವೀಕ್ಷಕರ ನೇಮಕ.–** (1) ಯುಕ್ತ ಸರ್ಕಾರವು, ಅಧಿಸೂಚನೆಯ ಮೂಲಕ, ಯುಕ್ತ ಅರ್ಹತೆಯುಳ್ಳ ವ್ಯಕ್ತಿಗಳನ್ನು ಮುಖ್ಯ ವಿದ್ಯುತ್ ಪರಿವೀಕ್ಷಕರು ಅಥವಾ ವಿದ್ಯುತ್ ಪರಿವೀಕ್ಷಕರನ್ನಾಗಿ ನೇಮಕ ಮಾಡಬಹುದು ಮತ್ತು ಹಾಗೆ ನೇಮಕವಾದ ಪ್ರತಿಯೊಬ್ಬ ಅಂಥ ಪರಿವೀಕ್ಷಕರು, ಈ ಅಧಿನಿಯಮ ಅಡಿಯಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಅಥವಾ ವಿದ್ಯುತ್ ಪರಿವೀಕ್ಷಕರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಅಂಥ ಪ್ರದೇಶಗಳೊಳಗೆ ಅಥವಾ ಅಂಥ ಕಾಮಗಾರಿಗಳ ವರ್ಗ ಮತ್ತು ವಿದ್ಯುತ್ ಸ್ಥಾವರಗಳ ಸಾಮರ್ಥ್ಯ ಮತ್ತು ಅಳವಡಿಕೆಯ ಸಂಬಂಧದಲ್ಲಿ ಮತ್ತು ಯುಕ್ತ ಸರ್ಕಾರವು ನಿರ್ದೇಶಿಸಬಹುದಾದ ಅಂಥ ನಿರ್ಬಂಧಗಳಿಗೆ ಒಳಪಟ್ಟು, ನಿಯಮಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(2) ಈ ಅಧಿನಿಯಮದಲ್ಲಿ ಅಥವಾ ಅದರಡಿಯಲ್ಲಿ ಮಾಡಲಾದ ಯಾವುದೇ ನಿಯಮದಲ್ಲಿ ಇದಕ್ಕೆ ವಿರುದ್ಧವಾಗಿ ಸ್ಪಷ್ಟ ಉಪಬಂಧ ಇಲ್ಲದಿದ್ದಲ್ಲಿ, ಮುಖ್ಯ ವಿದ್ಯುತ್ ಪರಿವೀಕ್ಷಕರ ಅಥವಾ ವಿದ್ಯುತ್ ಪರಿವೀಕ್ಷಕರ ನಿರ್ಧಾರಕ್ಕೆ ಸಂಬಂಧಪಟ್ಟ ಒಂದು ಅಪೀಲನ್ನು, ಯುಕ್ತ ಸರ್ಕಾರಕ್ಕೆ ಅಥವಾ ಯುಕ್ತ ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಹಾಗೆ ನಿರ್ದೇಶಿಸಿದ್ದಲ್ಲಿ, ಯುಕ್ತ ಆಯೋಗಕ್ಕೆ ಸಲ್ಲಿಸತಕ್ಕದ್ದು.

**180. ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಗಳಿಗೆ ಅಧಿಕಾರಗಳು:–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ, ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ, ಅಂಥ ನಿಯಮಗಳು ಈ ಮುಂದಿನ ಎಲ್ಲಾ ಅಥವಾ ಯಾವುದೇ ವಿಷಯಗಳಿಗಾಗಿ ಉಪಬಂಧ ಕಲ್ಪಿಸಬಹುದು, ಎಂದರೆ:–

(ಎ) 15ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಲೈಸೆನ್ಸ್ ಮಂಜೂರಾತಿಗಾಗಿ ಅರ್ಜಿಗಾಗಿ ಶುಲ್ಕಗಳ ಪಾವತಿ;

**xx** **xx** **xx**

## KARNATAKA LEGISLATIVE ASSEMBLY

## THIRTEENTH LEGISLATIVE ASSEMBLY

## SIXTEENTH SESSION

# THE ELECTRICITY (KARNATAKA AMENDMENT) BILL, 2013

## (L.A. Bill No. 4 of 2013)

A Bill further to amend the Electricity Act, 2003 in its application to the State of Karnataka.

Whereas, it is expedient to amend the Electricity Act, 2003 (Central Act 36 of 2003) in its application to the state of Karnataka for the purpose hereinafter appearing;

Be it enacted by the Karnataka State Legislature in the Sixty Fourth Year of the Republic of India as follows:-

**1. Short title and Commencement.-** (1) This Act may be called the Electricity (Karnataka Amendment) Act, 2013.

(2) It shall come into force at once.

**2. Insertion of sections 53 A.-** In the Electricity Act, 2003 (Central Act 36 of 2003)(hereinafter referred to as Principal Act), after section 53, the following shall be inserted, namely:-

"**53-A. Powers of State Government relating to Safety and Electricity supply.-** Where Central Government or the Authority has made no provision relating to following Safety measures and electricity supply the State Government may by rules provide for,-

(a) terms and Conditions and manner of Inspection by the Chief Electrical Inspector and Electrical Inspectors;

(b) manner of Issue of Licence to electrical contractors, Permits to Supervisors and wiremen and competency certificates;

(c) manner of Scrutiny and approval of Electrical Installation drawings,

(d) levy of fee for the Inspection or other services rendered by the Chief Electrical Inspector or the Electrical Inspectors; and

(e) the rate and manner of collection of fee. If not remitted within the stipulated time, to recover the same as an arrears of Land revenue."

**3. Amendment of section 162.-** In section 162 of the Principal Act, After sub-section (2), the following shall be inserted, namely:-

"(3) where no provision is made by Central Government or the Authority in respect of powers and functions and qualifications of Chief Electrical Inspector and Electrical Inspectors, the State Government may by rules prescribe the same".

**4. Amendment of section 180.-** In section 180 of the Principal Act, in sub-section (2),-

(a) after clause (a), the following shall be inserted, namely:-

"(aa) Subject to section 53,-

(i) regarding procedure of Inspection by the Chief Electrical Inspector and Electrical Inspectors;

(ii) regarding terms and conditions and manner of issue of Licence to electrical Contractors, permit to Supervisors and Wireman and Competency certificates;

(iii) manner of Scrutiny and approval of Electrical

Installation drawings;

(iv) Levy of fee for inspections and other services rendered by the Chief Electrical Inspector and Electrical Inspectors;

(v) manner of Collection of fee and if not remitted within the stipulated time to recover the same as arrears of land revenue."

(b) after clause (m), the following shall be inserted, namely:-

"(mm) Subject to section 162 regarding powers and functions and qualifications of the Chief Electrical Inspector and Electrical Inspectors."

**STATEMENT OF OBJECTS AND REASONS**

It is considered necessary to amend the Electricity Act, 2003 in its application to the State of Karnataka to provide for rule making power to State Government regarding,-

(i) safety measures and electricity supply;

(ii) qualifications, powers and functions of the Chief Electrical Inspector and electrical Inspectors;

(iii) terms and conditions and manner of issue of licence to electrical contractors, permit to Supervisors and Wireman;

(iv) levy of fee for inspection and other services rendered by electrical inspectorate;

(v) certain consequential matters.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**MEMORANDUM REGARDING DELEGATED LEGISLATION**

**Clause 2 :** Section 53A sought to be inserted by this clause empowers the State Government to make rules regarding:-

(a) terms and Conditions and manner of Inspection by the Chief Electrical Inspector and Electrical Inspectors;

(b) manner of Issue of Licence to electrical contractors, Permits to Supervisors and wiremen and competency certificates;

(c) manner of Scrutiny and approval of Electrical Installation drawings,

(d) levy of fee for the Inspection or other services rendered by the Chief Electrical Inspector or the Electrical Inspectors; and

(e) the rate and manner of collection of fee. If not remitted within the stipulated time, to recover the same as an arrears of Land revenue."

**Clause 3 :** Sub-section (3) of section 162 sought to be inserted by this clause empowers the State Government to make rules regarding powers and functions and qualifications of the Chief Electrical Inspectors and Electrical Inspectors.

**Clause 4:** In Sub-clause (aa) of sub-section (2) of section 180 sought to be inserted by this clause empowers the State Government to make rules regarding:-

(a) Procedure of Inspection by the Chief Electrical Inspector and Electrical Inspectors,

(b) terms and conditions and manner of issue of Licence to electrical contractors, permit to supervisors and wireman and competency certificates;

(c) manner of scrutiny and approval of electrical installation drawings;

(d) Levy of fee for inspections and other services rendered by the Chief Electrical Inspectors and Electrical Inspectors.

(e) manner of collection of fee.

The proposed delegation of legislative power is normal in character.

**JAGADISH SHETTAR**
CHIEF MINISTER

**P. OMPRAKASHA**
Secretary
Karnataka Legislative Assembly

**ANNEXURE**

**EXTRACT FROM ELECTRICITY ACT, 2003**
**(CENTRAL ACT 36 OF 2003)**

**XX XX XX**

**Section 162 - Appointment of Chief Electrical Inspector and Electrical Inspector.-** (1) The Appropriate Government may, by notification, appoint duly qualified persons to be Chief Electrical Inspector or Electrical Inspectors and every such Inspector so appointed shall exercise the powers and perform the functions of a Chief Electrical Inspector or an Electrical Inspector under this Act exercise such other powers and perform such other functions as may be prescribed within such areas or in respect of such class of works and electric installations and subject to such restrictions as the Appropriate Government may direct.

(2) In the absence of express provision to the contrary in this Act, or any rule made there under, an appeal shall lie from the decision of a Chief Electrical Inspector or an Electrical Inspector to the Appropriate Government or if the Appropriate Government, by general or special order so directs, to an Appropriate Commission.

**XX XX XX**

**Section 180 - Powers of State Governments to make rules.-** (1) The State Government may, by notification, make rules for carrying out the provisions of this Act.

(2) In particular and without prejudice to the generality of foregoing power, such rules may provide for all or any of the following matters, namely: -

(a) the payment of fees for application for grant of licence under subsection (1) of section 15;

**XX XX XX**


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೧೩, ೨೦೧೩ (ಮಾಘ ೨೪, ಶಕ ವರ್ಷ ೧೯೩೪) | ನಂ.೪೦೨ |
| **Part – IV-A** | **Bangalore, Wednesday, February 13, 2013 (Magha 24, Shaka Varsha 1934)** | **No. 402** |


**KARNATAKA LEGISLATIVE ASSEMBLY SECRETARIAT**
**NOTIFICATION**
**No. KLA/LGA/05/Bill/2013, Bangalore, Dated: 13-02-2013**

The following Bill was introduced in Legislative Assembly on 13-2-2013

ಕರ್ನಾಟಕ ವಿಧಾನ ಸಭೆ

ಹದಿಮೂರನೇ ವಿಧಾನ ಸಭೆ

ಹದಿನಾರನೇ ಅಧಿವೇಶನ

# ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆಯ ಮೇಲೆ ತೆರಿಗೆ ನಿರ್ಧರಣೆ) (ತಿದ್ದುಪಡಿ) ವಿಧೇಯಕ, 2013

## (2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 05)

ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆಯ ಮೇಲೆ ತೆರಿಗೆ ನಿರ್ಧರಣೆ) ಅಧಿನಿಯಮ, 1959 ಅನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ (ವಿದ್ಯುಚ್ಛಕ್ತಿ ಬಳಕೆ ಮೇಲೆ ತೆರಿಗೆ ನಿರ್ಧರಣೆ) ಅಧಿನಿಯಮ, 1959 ಅನ್ನು (1959ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದ ಮೂಲಕ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆಯ ಮೇಲೆ ತೆರಿಗೆ ನಿರ್ಧರಣೆ) (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಶೀರ್ಷಿಕೆ, ದೀರ್ಘ ಶೀರ್ಷಿಕೆ ಮತ್ತು ಪ್ರಸ್ತಾವನೆಯ ತಿದ್ದುಪಡಿ.–** ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆ ಮೇಲೆ ತೆರಿಗೆ ನಿರ್ಧರಣೆ) ಅಧಿನಿಯಮ, 1959ರ (1959ರ ಕರ್ನಾಟಕ ಅಧಿನಿಯಮ, 14) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಯವೆಂದು ಉಲ್ಲೇಖಿಸಲಾಗಿದೆ),–

(i) ಪ್ರಸ್ತಾವನೆಯ ಶೀರ್ಷಿಕೆಯಲ್ಲಿ "ಬಳಕೆ" ಎಂಬ ಪದದ ತರುವಾಯ "ಅಥವಾ ಮಾರಾಟದ" ಎಂಬ ಪದಗಳನ್ನು ಸೇರಿಸತಕ್ಕದ್ದು;

(ii) ದೀರ್ಘ ಶೀರ್ಷಿಕೆ ಮತ್ತು ಪ್ರಸ್ತಾವನೆಯಲ್ಲಿ "ಬಳಕೆ" ಪದದ ತರುವಾಯ "ಅಥವಾ ಮಾರಾಟದ" ಎಂಬ ಪದಗಳನ್ನು ಸೇರಿಸತಕ್ಕದ್ದು.

**3. 1ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 1ನೇ ಪ್ರಕರಣದಲ್ಲಿ "ಬಳಕೆ" ಪದದ ತರುವಾಯ "ಅಥವಾ ಮಾರಾಟದ" ಎಂಬ ಪದಗಳನ್ನು ಸೇರಿಸತಕ್ಕದ್ದು.

**4. 2ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 2ನೇ ಪ್ರಕರಣದಲ್ಲಿ,–

(i) (1)ನೇ ಖಂಡವನ್ನು ಅದರ ಖಂಡ (1ಸಿ) ಎಂದು ಮರು ಸಂಖ್ಯೆ ನೀಡತಕ್ಕದ್ದು ಮತ್ತು ಹಾಗೆ ಮರುಸಂಖ್ಯೆ ನೀಡಿದ (1ಸಿ) ಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1ಸಿ) "ಬಳಕೆದಾರ" ಎಂದರೆ, ಲೈಸೆನ್ಸ್‌ದಾರನಿಂದ ಅಥವಾ ಇತರೆ ವ್ಯಕ್ತಿಯಿಂದ ಶುಲ್ಕ ಸಂದಾಯ ಮಾಡಿದುದರ ಮೇಲೆ ಅಥವಾ ಅನ್ಯಥಾ ವಿದ್ಯುತ್ ಸರಬರಾಜನ್ನು ಸ್ಥಳೀಯ ಪ್ರಾಧಿಕಾರ, ಕಂಪನಿ, ಅಥವಾ ಇತರೆ ವ್ಯಕ್ತಿಗಳನ್ನೊಳಗೊಂಡಂತೆ ತಾನೇ ಉತ್ಪಾದಿಸಿ ವಿದ್ಯುತ್ತನ್ನು ಬಳಸುವ ಇತರ ವ್ಯಕ್ತಿಯನ್ನು ಒಳಗೊಳ್ಳುತ್ತದೆ. ಆದರೆ ಇದು ಇತರರಿಗೆ ಸರಬರಾಜು ಮಾಡುವುದಕ್ಕಾಗಿ ಯಾವ ಒಬ್ಬ ಲೈಸೆನ್ಸ್‌ದಾರನಿಗೆ ವಿದ್ಯುತ್ತನ್ನು ಸರಬರಾಜು ಮಾಡುತ್ತದೆಯೋ ಆ ಲೈಸೆನ್ಸ್‌ದಾರನನ್ನು ಒಳಗೊಳ್ಳುವುದಿಲ್ಲ; ಮತ್ತು "ಬಳಕೆ" ಎಂಬ ಪದವನ್ನು ಅದರ ವ್ಯಾಕರಣ ವ್ಯತ್ಯಾಸಗಳೊಂದಿಗೆ ತದನುಸಾರವಾಗಿ ಅರ್ಥೈಸತಕ್ಕದ್ದು;

**ವಿವರಣೆ:–** ಇತರರಿಗೆ ಸರಬರಾಜು ಮಾಡುವುದಕ್ಕಾಗಿ ಯಾರಿಗೆ ವಿದ್ಯುತ್ತನ್ನು ಸರಬರಾಜು ಮಾಡಲಾಗುತ್ತದೆಯೋ ಆ ಲೈಸೆನ್ಸುದಾರನು ಸ್ವತ: ವಿದ್ಯುಚ್ಛಕ್ತಿಯ ಯಾವುದೇ ಭಾಗವನ್ನು ಬಳಸಿಕೊಂಡಲ್ಲಿ ಅವನು ಹಾಗೆ ಬಳಸಿಕೊಂಡ ವಿದ್ಯುತ್ತಿಗೆ ಸಂಬಂಧಿಸಿದಂತೆ ಒಬ್ಬ ಬಳಕೆದಾರ ಎಂದು ಭಾವಿಸತಕ್ಕದ್ದು."

(ii) ಹಾಗೆ ಮರುಸಂಖ್ಯೆ ನೀಡಲಾದ (1ಸಿ) ಖಂಡಕ್ಕೆ ಮೊದಲು ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(1) 'ಪೂರಕ ಬಳಕೆ' ಎಂದರೆ ಉತ್ಪಾದನ ಕೇಂದ್ರದ ನಿರ್ವಹಣಾ ಸಿಬ್ಬಂದಿಯ ವಸತಿಗಾಗಿ ಬಳಸಲಾದ ಯಾವುದೇ ಕಟ್ಟಡವನ್ನು ಹೊರತು ಪಡಿಸಿ, ಸ್ವ–ವಿದ್ಯುತ್ ಉತ್ಪಾದನಾ ಕೇಂದ್ರ, ಸಹ ವಿದ್ಯುತ್ ಉತ್ಪಾದನಾ ಕೇಂದ್ರ ಅಥವಾ ಇತರೆ ವಿದ್ಯುತ್ ಉತ್ಪಾದನಾ ಕೇಂದ್ರಗಳನ್ನೊಳಗೊಂಡಂತೆ, ವಿದ್ಯುತ್ ಉತ್ಪಾದನೆಗಾಗಿ ಉತ್ಪಾದನಾ ಕೇಂದ್ರಗಳಲ್ಲಿ ಇರುವ ವಿದ್ಯುತ್ ಉಪಕರಣಗಳಿಗೆ ಬಳಸಲಾಗುವ ವಿದ್ಯುತ್;

(1ಎ) 'ಸ್ವ–ವಿದ್ಯುತ್ ಬಳಕೆ' ಎಂದರೆ ಕರ್ನಾಟಕ ರಾಜ್ಯದೊಳಗೆ ಸ್ಥಾಪಿಸಿರುವ ಸ್ವ–ವಿದ್ಯುತ್ ಜನಕದಿಂದ ವಿದ್ಯುತ್ ಉತ್ಪಾದಿಸಿ, ಉತ್ಪಾದನೆಯ ಶೇಕಡ ಐವತ್ತೊಂದರಷ್ಟು ಕಡಿಮೆ ಇಲ್ಲದಂತೆ ನಿರ್ಧರಿಸಲಾದ ವಾರ್ಷಿಕವಾರು ಸ್ವಂತಕ್ಕೆ ಉಪಯೋಗಿಸಿದ ವಿದ್ಯುತ್.

ಪರಂತು, ಸಂಸ್ಥೆಯ ಸಂಬಂಧದಲ್ಲಿ ಉತ್ಪಾದಿಸಲಾದ ವಿದ್ಯುಚ್ಛಕ್ತಿಯಲ್ಲಿ ಸದಸ್ಯರುಗಳು ಶೇಕಡ ಐವತ್ತೊಂದರಷ್ಟು ಸ್ವಂತ ಬಳಕೆಯನ್ನು ವಾರ್ಷಿಕ ಆಧಾರದ ಮೇಲೆ ನಿರ್ಧರಿಸಲಾದ ಶೇಕಡ ಹತ್ತರಷ್ಟು ವ್ಯತ್ಯಾಸದೊಂದಿಗೆ ವಿದ್ಯುತ್ ಸ್ಥಾವರದ ತಮ್ಮ ಒಡೆತನದ ಪಾಲಿಗೆ ಪ್ರಮಾಣಾನುಸಾರವಾಗಿರತಕ್ಕದ್ದು,

ಆದರೆ ಇದನ್ನು ಒಳಗೊಳ್ಳುವುದಿಲ್ಲ,–

(ಎ) ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯ ವಸತಿಗಾಗಿ ಬಳಸಲಾದ ಯಾವುದೇ ಕಟ್ಟಡದಲ್ಲಿ ಬಳಸಲಾದ ವಿದ್ಯುಚ್ಛಕ್ತಿ; ಹಾಗೂ

(ಬಿ) ಪೂರಕ ಬಳಕೆ; ಹಾಗೂ

(ಸಿ) ಪರಿವರ್ತನೆಯಿಂದ ಹಾಗೂ ಪ್ರಸರಣದಲ್ಲಿ ಆದ ನಷ್ಟಗಳು,"

(1ಬಿ) 'ಸರ್ಕಾರದ ಮುಖ್ಯ ವಿದ್ಯುತ್ ಪರಿವೀಕ್ಷಕರು', ಎಂದರೆ ವಿದ್ಯುಚ್ಛಕ್ತಿ ಅಧಿನಿಯಮ, 2003ರ (2003ರ ಕೇಂದ್ರ ಅಧಿನಿಯಮ, 36) 162ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರವು ನೇಮಕ ಮಾಡಿದ ಸರ್ಕಾರದ ಮುಖ್ಯ ವಿದ್ಯುತ್ ಪರಿವೀಕ್ಷಕರು ಇವರು ವಿದ್ಯುತ್ ಪರಿವೀಕ್ಷಣಾಲಯ ಇಲಾಖೆಯ ಮುಖ್ಯಸ್ಥರಾಗಿರುವರು,–

(iii) (2)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿತಸತಕ್ಕದ್ದು, ಎಂದರೆ:–

"(2) ವಿದ್ಯುಚ್ಛಕ್ತಿ ಎಂದರೆ, ವಿದ್ಯುತ್ ಇಂಧನ;

(ಎ) ಯಾವುದೇ ಉದ್ದೇಶಗಳಿಗಾಗಿ ಉತ್ಪಾದಿಸಲಾದ, ಬಳಸಲಾದ, ಪ್ರಸರಿಸಲಾದ ಸರಬರಾಜು ಮಾಡಲಾದ ಅಥವಾ ಮಾರಾಟ ಮಾಡಲಾದ; ಅಥವಾ

(ಬಿ) ಸಂದೇಶ ರವಾನೆಯನ್ನು ಹೊರತುಪಡಿಸಿ ಬೇರೆ ಯಾವುದೇ ಉದ್ದೇಶಕ್ಕೆ ಬಳಸಲಾದ ವಿದ್ಯುತ್.

(2ಎ) 'ವಿದ್ಯುತ್ ದರ' ಎಂದರೆ ಸರಬರಾಜು ಮಾಡಲಾದ ವಿದ್ಯುತ್ ಯೂನಿಟ್‍ಗಳ ಮೇಲೆ ನಿಗದಿಪಡಿಸಿದ ದರಗಳಲ್ಲಿ ಬಳಕೆದಾರನು ಸಂದಾಯ ಮಾಡಬೇಕಾದ ವಿದ್ಯುಚ್ಛಕ್ತಿ ದರ.

(2ಬಿ) 'ಪರಿವೀಕ್ಷಣಾಧಿಕಾರಿ' ಎಂದರೆ ಈ ಅಧಿನಿಯಮದ 6ನೇ ಪ್ರಕರಣದ ಅಡಿಯಲ್ಲಿ ಪರಿವೀಕ್ಷಣಾಧಿಕಾರಿಯೆಂದು ರಾಜ್ಯ ಸರ್ಕಾರವು ನೇಮಿಸಿದ ಯಾವೊಬ್ಬ ಅಧಿಕಾರಿ".

(iv) (3)ನೇ ಖಂಡದಲ್ಲಿ,–

(ಎ) (ಎ) ಉಪಖಂಡಕ್ಕೆ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ) ವಿದ್ಯುಚ್ಛಕ್ತಿ ಅಧಿನಿಯಮ, 2003ರ (2003ರ ಕೇಂದ್ರ ಅಧಿನಿಯವ 36) 14ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸನ್ನು ನೀಡಲಾಗಿರುವ ಅಥವಾ ನೀಡಲಾಗಿದೆಯೆಂದು ಭಾವಿಸಲಾಗಿರುವ ಯಾವೊಬ್ಬ ವ್ಯಕ್ತಿ ಹಾಗೂ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ ಅಧಿನಿಯಮ, 1999ರ (1999ರ ಕರ್ನಾಟಕ ಅಧಿನಿಯಮ 25) 14ನೇ ಪ್ರಕರಣಕ್ಕೆ ಅನುಸಾರವಾಗಿ ಮಂಜೂರಾತಿಯನ್ನು ಪಡೆದುಕೊಂಡಿರುವ ಯಾವೊಬ್ಬ ವ್ಯಕ್ತಿಯನ್ನು ಒಳಗೊಳ್ಳುತ್ತದೆ;"

(ಬಿ) (ಬಿ) ಉಪಖಂಡವನ್ನು ಬಿಟ್ಟುಬಿಡತಕ್ಕದ್ದು;

(ಸಿ) (ಸಿ) ಉಪಖಂಡದಲ್ಲಿ "ಇಂಧನ" ಎಂಬ ಪದಕ್ಕೆ "ವಿದ್ಯುಚ್ಛಕ್ತಿ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(v) (3)ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3ಎ) 'ನಾನ್ ಲೈಸೆನ್ಸಿ' ಎಂದರೆ, ವಿದ್ಯುಚ್ಛಕ್ತಿ ಅಧಿನಿಯಮ, 2003ರ (2003ರ ಕೇಂದ್ರ ಅಧಿನಿಯಮ 36) ಮತ್ತು ಅದರ ಅಡಿಯಲ್ಲಿ ಮಾಡಲಾದ ನಿಯಮಗಳ ಮತ್ತು ವಿನಿಯಮಗಳ ಪ್ರಕಾರ ಲೈಸೆನ್ಸ್‍ನ್ನು ಪಡೆಯದೆ, ಯಾವ ವ್ಯಕ್ತಿ ವಿದ್ಯುತ್ತನ್ನು ಉತ್ಪಾದಿಸಿ ಸ್ವಂತಕ್ಕೆ ಉಪಯೋಗಿಸುವ ಅಥವಾ ಇತರ ವ್ಯಕ್ತಿಗೆ ದರಕ್ಕೆ ಅಥವಾ ಅನ್ಯಥಾ ಸರಬರಾಜು ಮಾಡುವ ವ್ಯಕ್ತಿ;"

(vi) 4ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(4ಎ) ವಿದ್ಯುಚ್ಛಕ್ತಿಯ ಸಂಬಂಧದಲ್ಲಿ 'ಸರಬರಾಜು' ಎಂಬುದು ಲೈಸೆನ್ಸುದಾರ ಅಥವಾ ಬಳಕೆದಾರನಿಗೆ ವಿದ್ಯುಚ್ಛಕ್ತಿಯ ಮಾರಾಟ ಮಾಡುವುದನ್ನು ಒಳಗೊಳ್ಳುತ್ತದೆ:

ಪರಂತು, ಇತರರಿಗೆ ಸರಬರಾಜು ಮಾಡಲು ವಿದ್ಯುಚ್ಛಕ್ತಿಯನ್ನು ಲೈಸೆನ್ಸುದಾರನಿಗೆ ಸರಬರಾಜು ಮಾಡುತ್ತಿದ್ದಲ್ಲಿ, ಅಂತಹ ಮಾರಾಟವು ಒಳಗೊಳ್ಳುವುದಿಲ್ಲ."

(vii) (5)ನೇ ಉಪಪ್ರಕಣರದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(6) 'ಯೂನಿಟ್' ಎಂದರೆ, ಒಂದು ಕಿಲೋವ್ಯಾಟ್ ಅವರ್ (kwh) ವಿದ್ಯುತ್; ಇದನ್ನು ವಿದ್ಯುತ್ ಮಾಪಕ ಅಥವಾ ಟ್ರೈವೆಕ್ಟರ್ ಮಾಪಕ ಅಥವಾ ಇನ್ನಾವುದೇ ವಿಧಾನಗಳಿಂದ ಅಳೆಯಲಾಗುವುದು;"

**5. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣಕ್ಕೆ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ವಿದ್ಯುಚ್ಛಕ್ತಿಯನ್ನು ಲೈಸೆನ್ಸುದಾರ ಅಥವಾ ನಾನ್‍ಲೈಸೆನ್ಸಿಯು, ಲೈಸೆನ್ಸುದಾರರ ಮೂಲಕ ಅಥವಾ ಅನ್ಯಥಾ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡಿದಾಗ, ಯಾವೊಬ್ಬ ಬಳಕೆದಾರರು (ಬಾಕಿಗಳನ್ನು ಹೊರತುಪಡಿಸಿ), ಮಾರಾಟ ಮಾಡಲಾದ ಅಥವಾ ಬಳಸಲಾದ ವಿದ್ಯುಚ್ಛಕ್ತಿಯ ಮೇಲೆ ಸಂದಾಯ ಮಾಡಬೇಕಾದ ದರಗಳ ಮೇಲೆ ಶೇಕಡಾ ಆರರಂತೆ ಬೆಲೆಗೆ ತಕ್ಕಂತೆ (Advolorem) ವಿದ್ಯುಚ್ಛಕ್ತಿ ತೆರಿಗೆಯನ್ನು ವಿಧಿಸಿ ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು;

ಪರಂತು, ಬಳಕೆದಾರನು, ರಿಯಾಯಿತಿ ದರದಲ್ಲಿ ಅಥವಾ ಉಚಿತ ದರದಲ್ಲಿ ವಿದ್ಯುಚ್ಛಕ್ತಿಯನ್ನು ಬಳಸಿದಾಗ, ಬಳಕೆದಾರನು, ಇತರ ಬಳಕೆದಾರರಿಗೆ ಲೈಸೆನ್ಸುದಾರರು ವಿಧಿಸುವ ವಿದ್ಯುಚ್ಛಕ್ತಿ ದರದಲ್ಲಿ ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು.

ಇವುಗಳನ್ನು ಹೊರತುಪಡಿಸಿ,–

(i) ಕೃಷಿ ಅಡಿಯಲ್ಲಿ ಬರುವ ಬಳಕೆದಾರರು (ಹತ್ತು ಅಶ್ವಶಕ್ತಿಯ ವರೆಗಿನ ನೀರಾವರಿ ಪಂಪ್‍ಸೆಟ್ಟುಗಳು);

(ii) ಕಾಲಕಾಲಕ್ಕೆ ರಾಜ್ಯ ಸರ್ಕಾರವು ಅನುಮತಿಸಲಾದ ಉಚಿತ ಬಳಕೆಯಷ್ಟರವರೆಗಿನ ಭಾಗ್ಯಜ್ಯೋತಿ ಮತ್ತು ಕುಟೀರ ಜ್ಯೋತಿ ಪ್ರವರ್ಗಗಳು; ಮತ್ತು

(iii) (2)ನೇ ಉಪಪ್ರಕರಣದ ಅಡಿಯಲ್ಲಿ ಒಳಗೊಳ್ಳುವ ಬಳಕೆದಾರರು"

(ii) (2)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಕೆಳಗೆ ನಿರ್ದಿಷ್ಟಪಡಿಸಲಾದ ದರಗಳನ್ನು ಮೀರದಂತೆ ಕಾಲಕಾಲಕ್ಕೆ ಅಧಿಸೂಚನೆ ಮೂಲಕ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದ ಅಂಥ ದರಗಳಲ್ಲಿ ತಾನು ಬಳಸಿದ ಎಲ್ಲಾ ವಿದ್ಯುಚ್ಛಕ್ತಿ ಯೂನಿಟ್‌ಗಳಿಗೆ ವಿದ್ಯುಚ್ಛಕ್ತಿ ತೆರಿಗೆಯನ್ನು ಪ್ರತಿಯೊಬ್ಬ ನಾನ್‌ಲೈಸೆನ್ಸಿಯ ಮೇಲು ವಿಧಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು, ಎಂದರೆ:–

(ಎ) ಸ್ವಂತ ಬಳಕೆಯ ಆಧಾರದ ಮೇಲೆ ಪ್ರತೀ ಯೂನಿಟ್‌ಗೆ 50 ಪೈಸೆಯನ್ನು ಮೀರದಂತೆ ವಿದ್ಯುತ್ ತೆರಿಗೆ;

(ಬಿ) ಉತ್ಪಾದನಾ ಕೇಂದ್ರವಾಗಿರಲಿ ಅಥವಾ ಸಹ ಉತ್ಪಾದನಾ ಕೇಂದ್ರವಾಗಿರಲಿ ಅಥವಾ ಅನ್ಯಥಾ ಆಗಿರಲಿ, ಅಂತಹ ವಿದ್ಯುತ್ ಉತ್ಪಾದನಾ ಕೇಂದ್ರಗಳಲ್ಲಿನ 50 ಕಿಲೋವ್ಯಾಟ್‌ಗಳ ಪೂರಕ ವಿದ್ಯುತ್ ಲೋಡ್ಸ್ (Auxiliary Loads) ಗಳ ಪೂರಕ ಬಳಕೆಯ ಮೇಲೆ ಪ್ರತಿ ಯೂನಿಟ್‌ಗೆ 25 ಪೈಸೆಯನ್ನು ಮೀರದಂತೆ ವಿದ್ಯುತ್ ತೆರಿಗೆ."

**6. 4ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 4ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಪ್ರತಿಯೊಬ್ಬ ಲೈಸೆನ್ಸುದಾರನು, ಈ ಅಧಿನಿಯಮದ ಅಡಿಯಲ್ಲಿ ಪಾವತಿಸಬೇಕಾದ ವಿದ್ಯುತ್ ತೆರಿಗೆಯನ್ನು ನಿಯಮಿಸಲಾದ ವೇಳೆಯಲ್ಲಿ ಹಾಗೂ ರೀತಿಯಲ್ಲಿ ಸಂಗ್ರಹಿಸಿ ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು,–

(ಎ) ಲೈಸೆನ್ಸ್‌ದಾರರು ವಿದ್ಯುತ್ ದರದ ಮೇಲೆ ಬಿಲ್ಲಿನಲ್ಲಿ ಸೇರಿಸಿ ಗ್ರಾಹಕರಿಗೆ ನೀಡಲಾದ ಮೊತ್ತ. ಹಾಗೆ ಸಂದಾಯ ಮಾಡಬೇಕಾದ ತೆರಿಗೆಯು ಸರಬರಾಜುದಾರನು ಸರಬರಾಜು ಮಾಡಿದ ವಿದ್ಯುಚ್ಛಕ್ತಿಯ ದರದ ಮೇಲೆ ವಸೂಲಿ ಮಾಡಬೇಕಾದ ಮೊದಲ ಮೊತ್ತವಾಗಿದ್ದು ಮತ್ತು ಅದು ಆತನಿಂದ ರಾಜ್ಯ ಸರ್ಕಾರಕ್ಕೆ ಬರಬೇಕಾದ ಋಣಿ (debt due) ಆಗಿರತಕ್ಕದ್ದು:

ಪರಂತು, ಲೈಸೆನ್ಸುದಾರನು, ತಾನು ಸರಬರಾಜು ಮಾಡಿದ ವಿದ್ಯುಚ್ಛಕ್ತಿಗೆ ಬಾಕಿ ಮೊತ್ತವನ್ನು ವಸೂಲು ಮಾಡಲು ಸಾಧ್ಯವಾಗದಿದ್ದಲ್ಲಿ, ಅವನು ಹಾಗೆ ಸರಬರಾಜು ಮಾಡಿದ ವಿದ್ಯುಚ್ಛಕ್ತಿಯ ಸಂಬಂಧದಲ್ಲಿ ತೆರಿಗೆಯನ್ನು ಪಾವತಿಸಲು ಜವಾಬ್ದಾರನಾಗಿರತಕ್ಕದ್ದಲ್ಲ;

(ಬಿ) ಲೈಸೆನ್ಸುದಾರನ ಮೂಲಕ ನಾನ್‌ಲೈಸೆನ್ಸಿಯು ಬಳಕೆದಾರರಿಗೆ ಸರಬರಾಜು ಮಾಡಿದ ವಿದ್ಯುಚ್ಛಕ್ತಿಯ ಯೂನಿಟ್ಟುಗಳಿಗೆ".

(ii) (3)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) ತಾನು ಉತ್ಪಾದಿಸಿದ ವಿದ್ಯುಚ್ಛಕ್ತಿಯನ್ನು ಬಳಸುವ ಹಾಗೂ ಅಥವಾ ತನ್ನ ಸ್ವಂತ ವ್ಯವಸ್ಥೆಯ ಮೂಲಕ ಯಾವೊಬ್ಬ ಇತರ ವ್ಯಕ್ತಿಗೆ ಉಚಿತ ದರದಲ್ಲಿ ಅಥವಾ ಅನ್ಯಥಾ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡುತ್ತಿರುವ ಪ್ರತಿಯೊಬ್ಬ ವ್ಯಕ್ತಿಯು, 3ನೇ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ವಿದ್ಯುತ್ ತೆರಿಗೆಯನ್ನು, ನಿಯಮಿಸಲಾದ ವೇಳೆಯಲ್ಲಿ ಹಾಗೂ ರೀತಿಯಲ್ಲಿ, ರಾಜ್ಯ ಸರ್ಕಾರಕ್ಕೆ ಸಂದರ್ಭಾನುಸಾರ ಪಾವತಿಸತಕ್ಕದ್ದು ಅಥವಾ ಸಂಗ್ರಹಿಸಿ ಪಾವತಿಸತಕ್ಕದ್ದು."

(iii) (4)ನೇ ಉಪಪ್ರಕರಣದಲ್ಲಿ,–

(ಎ) "ಉಚಿತದರ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಬಿ) "ಭಾರತೀಯ ವಿದ್ಯುಚ್ಛಕ್ತಿ ಅಧಿನಿಯಮ, 1910ರ 24ನೇ ಪ್ರಕರಣದ (1)ನೇ ಉಪಪ್ರಕರಣ" ಎಂಬ ಪದಗಳಿಗೆ "ವಿದ್ಯುಚ್ಛಕ್ತಿ ಅಧಿನಿಯಮ, 2003ರ (2003ರ ಕೇಂದ್ರ ಅಧಿನಿಯಮ 36) 56ನೇ ಪ್ರಕರಣದ (1)ನೇ ಉಪಪ್ರಕರಣ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 7ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 7ನೇ ಪ್ರಕರಣದಲ್ಲಿ,–

**(ಎ)** (ii) ನೇ ಖಂಡದಲ್ಲಿ "ಉಚಿತವಾಗಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

**(ಬಿ)** (ii) ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(iii) ಸರ್ಕಾರಕ್ಕೆ ಬಾಕಿಯಿರುವ ತೆರಿಗೆ ಅಥವಾ ರಾಜಸ್ವದ ಬಾಕಿಗಳಿಗೆ ಸಂಬಂಧಿಸಿದಂತೆ ಸ್ವೀಕರಿಸಲಾದ ಅಥವಾ ವಸೂಲಿ ಮಾಡಲಾದ ಮೊತ್ತವನ್ನು, ಮೊದಲು ಬಾಕಿ ಇರುವ ದಂಡ ಬಾಬ್ತಿಗೆ, ಉಳಿದುದನ್ನು ತೆರಿಗೆ ಮೇಲಿನ ಬಡ್ಡಿಗೆ ಅಥವಾ ರಾಜಸ್ವಕ್ಕೆ ಹೊಂದಾಣಿಕೆ ಮಾಡತಕ್ಕದ್ದು. ಅಂಥ ಹೊಂದಾಣಿಕೆಯನ್ನು ಮಾಡಿದ ತರುವಾಯ ಬಾಕಿ ಮೊತ್ತವನ್ನು ತೆರಿಗೆ ಅಥವಾ ರಾಜಸ್ವಕ್ಕೆ ಹೊಂದಾಣಿಕೆ ಮಾಡತಕ್ಕದ್ದು;"

**8. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣದಲ್ಲಿ, (1)ನೇ ಉಪ–ಪ್ರಕರಣದಲ್ಲಿ "ಪರಿಶೀಲಕ" ಎಂಬ ಪದಕ್ಕೆ "ಪರಿವೀಕ್ಷಣಾಧಿಕಾರಿ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು ಹಾಗೂ "ಐದುನೂರು" ಎಂಬ ಪದಗಳಿಗೆ "ಐದು ಸಾವಿರ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**9. 9ಎ ಹಾಗೂ 9ಬಿ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 9ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**9ಎ. ಅಪೀಲು.–** (1) (i) ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಯಾವೊಬ್ಬ ಪರಿವೀಕ್ಷಣಾಧಿಕಾರಿಯು ಹೊರಡಿಸಿದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಸರ್ಕಾರದ ಮುಖ್ಯ ವಿದ್ಯುತ್ ಪರಿವೀಕ್ಷಕರಿಗೆ ಅಪೀಲನ್ನು ಸಲ್ಲಿಸಬಹುದು; ಹಾಗೂ

(ii) ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಸರ್ಕಾರದ ಮುಖ್ಯ ವಿದ್ಯುತ್ ಪರಿವೀಕ್ಷಕರು ಹೊರಡಿಸಿದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ರಾಜ್ಯ ಸರ್ಕಾರಕ್ಕೆ ಅಪೀಲನ್ನು ಸಲ್ಲಿಸಬಹುದು.

(2) ಅಪೀಲು, ನಿಯಮಿಸಲಾದ ಅಂಥ ಅವಧಿಯೊಳಗೆ ಮತ್ತು ಅಂಥ ನಮೂನೆಯಲ್ಲಿ ಇರತಕ್ಕದ್ದು, ನಿಯಮಿಸಲಾದ ಅಂಥ ವಿಧಾನದಲ್ಲಿ ಸತ್ಯಾಪನೆ ಮಾಡತಕ್ಕದ್ದು ಹಾಗೂ ಆಕ್ಷೇಪಿಸಲಾದ ನಿರ್ಧರಣೆಯ ಮೊತ್ತದ ಶೇಕಡ ಐದರಷ್ಟು ಮೊತ್ತಕ್ಕೆ ಸಮಾನವಾದ ವೆಚ್ಚಗಳು ಹಾಗೂ ಅಪೀಲಿನ ಅಡಿಯಲ್ಲಿ ನಿರ್ಧರಿತ ಆದೇಶದ ವಿರುದ್ಧ ಸಂದಾಯ ಮಾಡಬೇಕಾದ ವಿದ್ಯುಚ್ಛಕ್ತಿ ತೆರಿಗೆಯ ಶೇಕಡ ಇಪ್ಪತ್ತೈದಕ್ಕಿಂತ ಕಡಿಮೆಯಿರದ ಮೊತ್ತವನ್ನು ಕಟ್ಟಿದ ಚಲನ್ ಜೊತೆಗೆ ಇರತಕ್ಕದ್ದು.

**9ಬಿ. ಸದ್ಭಾವನೆಯಿಂದ ಕೈಗೊಳ್ಳಲಾದ ಕ್ರಮದ ಸಂರಕ್ಷಣೆ.–** ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ಮಾಡಲಾದ ನಿಯಮಗಳ ಅಡಿಯಲ್ಲಿ ಸದ್ಭಾವನೆಯಿಂದ ಮಾಡಲಾಗಿದೆ ಅಥವಾ ಮಾಡಲಾಗಿದೆ ಎಂದು ತಾತ್ಪರ್ಯವಾಗುವ ಯಾವುದೇ ಕಾರ್ಯಕ್ಕಾಗಿ ಅಥವಾ ರಾಜ್ಯ ಸರ್ಕಾರ ಅಥವಾ ರಾಜ್ಯ ಸರ್ಕಾರದ ಯಾವೊಬ್ಬ ಅಧಿಕಾರಿ ಅಥವಾ ಯಾವೊಬ್ಬ ಸಾರ್ವಜನಿಕ ನೌಕರರ ವಿರುದ್ಧ ಯಾವುದೇ ದಾವೆ ಪ್ರಾಸಿಕ್ಯೂಷನ್ ಅಥವಾ ಇತರ ವ್ಯವಹರಣೆಯನ್ನು ನಡೆಸಲು ಅವಕಾಶ ಇರತಕ್ಕದ್ದಲ್ಲ."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

(1) ವಿದ್ಯುಚ್ಛಕ್ತಿ ಮಾರಾಟದ ಮೇಲೆ ತೆರಿಗೆಯನ್ನು ವಿಧಿಸಲು ಮತ್ತು ಸಂಗ್ರಹಿಸಲು;

(2) ಪೂರಕ ಬಳಕೆ, ಸ್ವ–ವಿದ್ಯುಚ್ಛಕ್ತಿ (Captive) ಬಳಕೆಯನ್ನು ನಿರ್ಧರಿಸಲು ಹಾಗೂ ಅಂಥ ಬಳಕೆದಾರರ ವರ್ಗದವರಿಂದ ವಿದ್ಯುಚ್ಛಕ್ತಿ ಬಳಕೆಯ ಮೇಲೆ ಬೇರೆ ಬೇರೆ ವಿದ್ಯುಚ್ಛಕ್ತಿ ದರಗಳನ್ನು ವಿಧಿಸಲು;

(3) ನಾನ್‌ಲೈಸೆನ್ಸಿಯು ಇತರರಿಗೆ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡುವುದರ ಮೇಲೆ ವಿದ್ಯುಚ್ಛಕ್ತಿ ತೆರಿಗೆಯನ್ನು ವಿಧಿಸಲು;

(4) ಪರಿವೀಕ್ಷಣಾಧಿಕಾರಿ ಅಥವಾ ಮುಖ್ಯ ವಿದ್ಯುತ್ ಪರಿವೀಕ್ಷಕರ ಆದೇಶದಿಂದ ಬಾಧಿತನಾದ ವ್ಯಕ್ತಿಯು ಅಪೀಲು ಸಲ್ಲಿಸಲು ಉಪಬಂದ ಕಲ್ಪಿಸುವುದು; ಹಾಗೂ

(5) ಹಲವು ಇತರ ಆನುಷಂಗಿಕ ತಿದ್ದುಪಡಿಗಳನ್ನು ಮಾಡುವುದಕ್ಕಾಗಿ,–

– ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆಯ ಮೇಲೆ ತೆರಿಗೆ ನಿರ್ಧರಣೆ) ಅಧಿನಿಯಮ, 1959ನ್ನು ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನಾ ಪತ್ರ**

**ಖಂಡ 6** (i) ಈ ಖಂಡದ ಮೂಲಕ ಪ್ರತಿಯೋಜಿಸಲು ಪ್ರಸ್ತಾವಿಸಿರುವ 4ನೇ ಪ್ರಕರಣದ (1)ನೇ ಉಪಪ್ರಕರಣವು, ಲೈಸೆನ್ಸಿಯಿಂದ ವಿದ್ಯುಚ್ಛಕ್ತಿ ತೆರಿಗೆಯನ್ನು ಸಂಗ್ರಹಿಸುವ ಮತ್ತು ಪಾವತಿಸುವ ಸಮಯ ಮತ್ತು ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

(ii) ಈ ಖಂಡದ ಮೂಲಕ ಪ್ರತಿಯೋಜಿಸಲು ಪ್ರಸ್ತಾವಿಸಿರುವ 4ನೇ ಪ್ರಕರಣದ (3)ನೇ ಉಪಪ್ರಕರಣವು, ತಾನೇ ಉತ್ಪಾದಿಸಿದ ವಿದ್ಯುಚ್ಛಕ್ತಿಯನ್ನು ಬಳಸುತ್ತಿರುವ ಪ್ರತಿಯೊಬ್ಬ ವ್ಯಕ್ತಿಯು, 3ನೇ ಪ್ರಕರಣದ ಅಡಿಯಲ್ಲಿ ವಿದ್ಯುಚ್ಛಕ್ತಿ ತೆರಿಗೆಯನ್ನು ಪಾವತಿಸುವ ಸಮಯ ಮತ್ತು ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಖಂಡ 9:** ಈ ಖಂಡದ ಮೂಲಕ ಸೇರಿಸಲು ಪ್ರಸ್ತಾವಿಸಿರುವ 9ಎ ಪ್ರಕರಣದ (2)ನೇ ಉಪಪ್ರಕರಣವು ಬಾಧಿತ ವ್ಯಕ್ತಿಯಿಂದ ಅಪೀಲನ್ನು ಸಲ್ಲಿಸುವ ನಮೂನೆ ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರಿಂದ ಸರ್ಕಾರಕ್ಕೆ ಮತ್ತು ರಾಜ್ಯ ಸರ್ಕಾರದಿಂದ ಅಪೀಲಿನ ಸತ್ಯಾಪನೆಯ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರತ್ಯಾಯೋಜಿತ ಶಾಸನಾತ್ಮಕ ಅಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಜಗದೀಶ್ ಶೆಟ್ಟರ್**
ಮುಖ್ಯಮಂತ್ರಿಗಳು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

### ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆ ಮೇಲೆ ತೆರಿಗೆ ನಿರ್ಧರಣೆ) ಅಧಿನಿಯಮ, 1959ರ (1959ರ ಕರ್ನಾಟಕ ಅಧಿನಿಯಮ 14) ಉದ್ಧೃತ ಭಾಗ

XX XX XX

ಕರ್ನಾಟಕ ರಾಜ್ಯದಲ್ಲಿ ವಿದ್ಯುಚ್ಛಕ್ತಿ ಬಳಕೆ ಮೇಲೆ ತೆರಿಗೆ ವಿಧಿಸುವುದಕ್ಕೆ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ. ಕರ್ನಾಟಕ ರಾಜ್ಯದಲ್ಲಿ ವಿದ್ಯುಚ್ಛಕ್ತಿ ಬಳಕೆ ಮೇಲೆ ತೆರಿಗೆ ವಿಧಿಸುವುದಕ್ಕೆ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಇದು ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು ಮತ್ತು ಪ್ರಾರಂಭ.**- (1) ಈ ಅಧಿನಿಯಮವನ್ನು ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆ ಮೇಲೆ ತೆರಿಗೆ ನಿರ್ಧರಣೆ) ಅಧಿನಿಯಮ, 1959 ಎಂದು ಕರೆಯತಕ್ಕದ್ದು.

XX XX XX

**2. ಪರಿಭಾಷೆಗಳು.**- ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) "ಬಳಕೆದಾರ" ಎಂಬುದು, ಶುಲ್ಕವನ್ನು ಸಂದಾಯ ಮಾಡಿದುದರ ಮೇಲೆ ಅಥವಾ ಅನ್ಯಥಾ, ಒಬ್ಬ ಲೈಸೆನ್ಸ್‌ದಾರನಿಂದ ಯಾರಿಗೆ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡಲಾಗಿದೆಯೋ ಆ ಸ್ಥಳೀಯ ಪ್ರಾಧಿಕಾರ, ಕಂಪನಿ ಅಥವಾ ಇತರ ವ್ಯಕ್ತಿಯನ್ನು ಮತ್ತು ತಾನೇ ಉತ್ಪಾದಿಸಿದ ವಿದ್ಯುತ್ತನ್ನು ಬಳಸುವ ಒಬ್ಬ ಲೈಸೆನ್ಸ್‌ದಾರ ಅಥವಾ ಇತರ ವ್ಯಕ್ತಿಯನ್ನು ಒಳಗೊಳ್ಳುತ್ತದೆ, ಆದರೆ ಇದು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ಇತರರಿಗೆ ಸರಬರಾಜು ಮಾಡುವುದಕ್ಕಾಗಿ ಯಾವ ಒಬ್ಬ ಲೈಸೆನ್ಸ್‌ದಾರನಿಗೆ ವಿದ್ಯುತ್ತನ್ನು ಸರಬರಾಜು ಮಾಡುತ್ತದೆಯೋ ಆ ಲೈಸೆನ್ಸ್‌ದಾರನನ್ನು ಒಳಗೊಳ್ಳುವುದಿಲ್ಲ; ಮತ್ತು "ಬಳಕೆ" ಎಂಬ ಪದವನ್ನು ಅದರ ವ್ಯಾಕರಣ ವ್ಯತ್ಯಾಸಗಳೊಂದಿಗೆ ತದನುಸಾರವಾಗಿ ಅರ್ಥೈಸತಕ್ಕದ್ದು;

**ವಿವರಣೆ:**- ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ಇತರರಿಗೆ ಸರಬರಾಜು ಮಾಡುವುದಕ್ಕಾಗಿ ಯಾರಿಗೆ ವಿದ್ಯುತ್ತನ್ನು ಸರಬರಾಜು ಮಾಡಿರುತ್ತದೆಯೋ ಆ ಲೈಸೆನ್ಸುದಾರನು ಸ್ವತಃ ವಿದ್ಯುಚ್ಛಕ್ತಿಯ ಯಾವುದೇ ಭಾಗವನ್ನು ಬಳಸಿಕೊಂಡಲ್ಲಿ ಅವನನ್ನು ಹಾಗೆ ಬಳಸಿಕೊಂಡ ವಿದ್ಯುತ್ತಿಗೆ ಸಂಬಂಧಿಸಿದಂತೆ ಒಬ್ಬ ಬಳಕೆದಾರ ಎಂದು ಭಾವಿಸತಕ್ಕದ್ದು.

(2) "ಶಕ್ತಿ" ಎಂದರೆ ವಿದ್ಯುಚ್ಛಕ್ತಿ ;

XX XX XX

(3) " ಲೈಸೆನ್ಸುದಾರ " ಎಂದರೆ, -

XX XX XX

(ಬಿ) ಭಾರತೀಯ ವಿದ್ಯುಚ್ಛಕ್ತಿ ಅಧಿನಿಯಮ, 1910 (1910ರ ಕೇಂದ್ರ ಅಧಿನಿಯಮ IX) ರ ಭಾಗ - IIರ ಅಡಿಯಲ್ಲಿ ವಿದ್ಯುತ್ತನ್ನು ಸರಬರಾಜು ಮಾಡಲು ಲೈಸೆನ್ಸು ಪಡೆದಿರುವ ಯಾರೇ ವ್ಯಕ್ತಿ ಮತ್ತು ಇದು ಸದರಿ ಅಧಿನಿಯಮದ 28ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರದ ಮಂಜೂರಾತಿಯನ್ನು ಪಡೆದಿರುವ ಯಾರೇ ವ್ಯಕ್ತಿಯನ್ನು ಒಳಗೊಳ್ಳುತ್ತದೆ; ಮತ್ತು

(ಸಿ) ರಾಜ್ಯ ಸರ್ಕಾರವು ವಿದ್ಯುತ್ತನ್ನು ಸರಬರಾಜು ಮಾಡುವ ವ್ಯವಹಾರದಲ್ಲಿ ತೊಡಗಿರುವಾಗ ರಾಜ್ಯ ಸರ್ಕಾರ.

XX XX XX

**3. ವಿದ್ಯುಚ್ಛಕ್ತಿ ಚಾರ್ಜುಗಳು ಮುಂತಾದವುಗಳ ಮೇಲೆ ತೆರಿಗೆ ವಿಧಿಸುವುದು.**- (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಕೃಷಿ (ಹತ್ತು ಅಶ್ವ ಶಕ್ತಿಯವರೆಗಿನ ನೀರಾವರಿ ಪಂಪು ಸೆಟ್ಟುಗಳು), ಭಾಗ್ಯ ಜ್ಯೋತಿ ಮತ್ತು ಕುಟೀರ ಜ್ಯೋತಿ ಪ್ರವರ್ಗಗಳ ಅಡಿಯಲ್ಲಿನ ಬಳಕೆದಾರರನ್ನು ಹೊರತುಪಡಿಸಿ, ಎಲ್ಲ ಬಳಕೆದಾರರು ಸಂದಾಯ ಮಾಡಬೇಕಾದ (ಬಾಕಿಗಳನ್ನು ಬಿಟ್ಟು) ವಿದ್ಯುಚ್ಛಕ್ತಿ ಚಾರ್ಜುಗಳ ಮೇಲೆ ಶೇಕಡಾ ಐದರಷ್ಟು ಮೌಲ್ಯಾನುಸಾರ ತೆರಿಗೆಯನ್ನು (ಇಲ್ಲಿ ಇನ್ನು ಮುಂದೆ "ವಿದ್ಯುಚ್ಛಕ್ತಿ ತೆರಿಗೆ" ಎಂದು ಉಲ್ಲೇಖಿಸಲಾಗಿದೆ) ವಿಧಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು.

(2) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆ ಮೇಲೆ ತೆರಿಗೆ ನಿರ್ಧರಣೆ) (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕದಿಂದ ಜಾರಿಗೊಳಿಸಿ ಮತ್ತು 2004ರ ಜುಲೈ ಒಂದನೇ ದಿನಾಂಕದವರೆಗೆ,-

(i) ಅಂಥ ವಿದ್ಯುತ್‌ನ್ನು ಉತ್ಪಾದಿಸುತ್ತಿರುವ ಲೈಸೆನ್ಸುದಾರನಲ್ಲದ; ಅಥವಾ

(ii) ಅಂಥ ವಿದ್ಯುತ್‌ನ್ನು ಉತ್ಪಾದಿಸುತ್ತಿರುವ ಲೈಸೆನ್ಸುದಾರನಲ್ಲದ ವ್ಯಕ್ತಿಯು ಯಾರಿಗೆ ಅದನ್ನು ಚಾರ್ಜು ವಿಧಿಸದೆ ಉಚಿತವಾಗಿ ಸರಬರಾಜು ಮಾಡಲಾಗಿದೆಯೋ

- ಆ ಯಾರೇ ವ್ಯಕ್ತಿಯು ಬಳಸಿದ ಎಲ್ಲಾ ವಿದ್ಯುತ್ ಯೂನಿಟ್‌ಗಳ ಮೇಲೆ ಪ್ರತಿ ಯೂನಿಟ್‌ಗೆ ಇಪ್ಪತ್ತೈದು ಪೈಸೆಯ ದರದಲ್ಲಿ ವಿದ್ಯುಚ್ಛಕ್ತಿ ತೆರಿಗೆಯನ್ನು ವಿಧಿಸತಕ್ಕದ್ದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು.

**4. ವಿದ್ಯುಚ್ಛಕ್ತಿ ತೆರಿಗೆಯ ಸಂದಾಯ.**- (1) ಪ್ರತಿಯೊಬ್ಬ ಲೈಸೆನ್ಸ್‌ದಾರನು, [1][ತಾನು ಬಳಕೆದಾರನಿಗೆ ನೀಡಿದ ಬಿಲ್ಲಿನಲ್ಲಿ ಸೇರಿಸಿರುವ ವಿದ್ಯುತ್ ಚಾರ್ಜುಗಳ ಮೇಲೆ] ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾದ ವಿದ್ಯುಚ್ಛಕ್ತಿ ತೆರಿಗೆಯನ್ನು ನಿಯಮಿಸಲಾದ ಸಮಯದಲ್ಲಿ ಮತ್ತು ರೀತಿಯಲ್ಲಿ ವಸೂಲು ಮಾಡತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಅದನ್ನು ಸಂದಾಯ ಮಾಡತಕ್ಕದ್ದು. ಹಾಗೆ ಸಂದಾಯ ಮಾಡಬೇಕಾದ ತೆರಿಗೆಯು, ಸರಬರಾಜುದಾರನು ವಿದ್ಯುತ್ತನ್ನು ಸರಬರಾಜು ಮಾಡಿದುದಕ್ಕಾಗಿ ವಸೂಲು ಮಾಡಬೇಕಾದ ಮೊಬಲಗುಗಳ ಮೇಲಿನ ಒಂದು ಪ್ರಥಮ ಹೊಣೆಯಾಗಿರತಕ್ಕದ್ದು ಮತ್ತು ಅದು ರಾಜ್ಯ ಸರ್ಕಾರಕ್ಕೆ ಅವನಿಂದ ಬಾಕಿಯಿರುವ ಒಂದು ಋಣವಾಗಿರತಕ್ಕದ್ದು:

ಪರಂತು, ಲೈಸೆನ್ಸ್‌ದಾರನು ತಾನು ಸರಬರಾಜು ಮಾಡಿದ ವಿದ್ಯುತ್ತಿಗಾಗಿ ತನಗೆ ಬಾಕಿಯಿರುವ ಮೊಬಲಗನ್ನು ವಸೂಲು ಮಾಡಲು ಅಸಮರ್ಥನಾದಲ್ಲಿ, ಅವನು ಹಾಗೆ ಸರಬರಾಜು ಮಾಡಿದ ವಿದ್ಯುತ್ತಿಗೆ ಸಂಬಂಧಿಸಿದಂತೆ ತೆರಿಗೆಯನ್ನು ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದಲ್ಲ.

(2) ಒಬ್ಬ ಲೈಸೆನ್ಸುದಾರನು ಭರಿಸಿದ ವಿದ್ಯುಚ್ಛಕ್ತಿ ತೆರಿಗೆ ವಸೂಲಿ ವೆಚ್ಚವನ್ನು ಗಮನದಲ್ಲಿರಿಸಿಕೊಂಡು ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ಮೊಬಲಗಿನ ಒಂದು ಸೋಡಿಯನ್ನು ನೀಡಬಹುದು:

ಪರಂತು, ಸೋಡಿ ಮೊಬಲಗು ಲೈಸೆನ್ಸ್‌ದಾರನು ವಸೂಲಿ ಮಾಡಿದ ವಿದ್ಯುಚ್ಛಕ್ತಿ ತೆರಿಗೆಯ ಶೇಕಡಾ ಎರಡರಷ್ಟನ್ನು ಮೀರತಕ್ಕದ್ದಲ್ಲ.

(3) ತಾನೇ ಉತ್ಪಾದಿಸಿದ ವಿದ್ಯುತ್ತನ್ನು ಬಳಸುವ ಅಥವಾ ವಿದ್ಯುತ್ತನ್ನು ಯಾರೇ ಇತರ ವ್ಯಕ್ತಿಗೆ ಉಚಿತವಾಗಿ ಸರಬರಾಜು ಮಾಡುವ ಪ್ರತಿಯೊಬ್ಬ ವ್ಯಕ್ತಿಯು, 3ನೇ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ವಿದ್ಯುಚ್ಛಕ್ತಿ ತೆರಿಗೆಯನ್ನು ನಿಯಮಿಸಲಾದ ಸಮಯದಲ್ಲಿ ಮತ್ತು ರೀತಿಯಲ್ಲಿ ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು ಅಥವಾ ಸಂದರ್ಭಾನುಸಾರ ವಸೂಲು ಮಾಡಿ ಸಂದಾಯ ಮಾಡತಕ್ಕದ್ದು.

(4) ಯಾರೇ ಬಳಕೆದಾರನು ತನ್ನಿಂದ ಬಾಕಿಯಿರುವ ವಿದ್ಯುಚ್ಛಕ್ತಿ ತೆರಿಗೆಯ ಮೊಬಲಗನ್ನು, ನಿಯಮಿಸಲಾದ ಸಮಯದಲ್ಲಿ ಮತ್ತು ರೀತಿಯಲ್ಲಿ ಸಂದಾಯ ಮಾಡಲು ವಿಫಲನಾದಲ್ಲಿ ಅಥವಾ ನಿರ್ಲಕ್ಷಿಸಿದಲ್ಲಿ, ಲೈಸೆನ್ಸುದಾರ ಅಥವಾ ಸಂದರ್ಭಾನುಸಾರ, ಉಚಿತವಾಗಿ ವಿದ್ಯುತ್ತನ್ನು ಸರಬರಾಜು ಮಾಡುತ್ತಿರುವ ವ್ಯಕ್ತಿಯು, 7ನೇ ಪ್ರಕರಣದ ಅಡಿಯಲ್ಲಿ ಮೊಬಲಗನ್ನು ವಸೂಲು ಮಾಡುವ ರಾಜ್ಯ ಸರ್ಕಾರದ ಹಕ್ಕಿಗೆ ಬಾಧಕವಾಗದಂತೆ, ಅಂಥ ವ್ಯಕ್ತಿಗೆ ಏಳು ಪೂರ್ಣ ದಿನಗಳಿಗೆ ಕಡಿಮೆಯಿಲ್ಲದ ಲಿಖಿತ ನೋಟೀಸನ್ನು ನೀಡಿದ ತರುವಾಯ, ಅಂಥ ವ್ಯಕ್ತಿಗೆ ವಿದ್ಯುತ್ ಸರಬರಾಜು ಮಾಡುವುದನ್ನು ನಿಲ್ಲಿಸತಕ್ಕದ್ದು; ಮತ್ತು ಅವನು, ಆ ಉದ್ದೇಶಕ್ಕಾಗಿ, ತಾನು ಸರಬರಾಜು ಮಾಡಿದ ವಿದ್ಯುತ್ತಿಗೆ ಸಂಬಂಧಿಸಿದಂತೆ ಬಾಕಿಯಿರುವ ಯಾವುದೇ ಶುಲ್ಕ ಅಥವಾ ಮೊತ್ತದ ವಸೂಲಾತಿಗಾಗಿ, ಭಾರತೀಯ ವಿದ್ಯುಚ್ಛಕ್ತಿ ಅಧಿನಿಯಮ, 1910ರ 24ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಒಬ್ಬ ಲೈಸೆನ್ಸುದಾರನಿಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಬಹುದು.

(5) ಈ ಪ್ರಕರಣದಲ್ಲಿರುವುದು ಯಾವುದೂ,

(i) ವಾಹನಗಳು ಅಥವಾ ನೌಕೆಗಳ ಉಪಯೋಗಕ್ಕಾಗಿ ಸರಬರಾಜು ಮಾಡಲು ವಿದ್ಯುತ್ತನ್ನು ಉತ್ಪಾದಿಸುವ ಯಾರೇ ವ್ಯಕ್ತಿಗೆ ;

(ii) ಹತ್ತು ಕಿಲೋವ್ಯಾಟ್‌ಗಳ ಸಾಮರ್ಥ್ಯವನ್ನು ಮೀರದ ಜನರೇಟರ್‌ಗಳ ಮೂಲಕ ಉತ್ಪಾದಿಸಿದ ವಿದ್ಯುತ್ತಿನ ಬಳಕೆಗೆ

– ಅನ್ವಯವಾಗತಕ್ಕದ್ದಲ್ಲ.

XX XX XX

7. **ವಸೂಲಾತಿಗಳು.–** ನಿಯಮಿಸಲಾದ ಸಮಯದಲ್ಲಿ ಮತ್ತು ವಿಧಾನದಲ್ಲಿ ವಿದ್ಯುಚ್ಛಕ್ತಿ ತೆರಿಗೆಯನ್ನು ಸಂದಾಯ ಮಾಡದೇ ಇದ್ದ ಕಾರಣ ಬಾಕಿಯಿರುವ ಸಂಬಂಧದಲ್ಲಿ ಯಾವುದೇ ಮೊತ್ತವನ್ನು ಬಾಕಿ ಎಂದು ಭಾವಿಸತಕ್ಕದ್ದು ಮತ್ತು ಆ ತರುವಾಯ ಆ ಮೊತ್ತದ ಮೇಲೆ ರಾಜ್ಯ ಸರ್ಕಾರವು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿಗದಿಪಡಿಸಬಹುದಾದಂತೆ ವರ್ಷಕ್ಕೆ ಶೇಕಡ ಇಪ್ಪತ್ನಾಲ್ಕರಷ್ಟನ್ನು ಮೀರದ ಬಡ್ಡಿಯನ್ನು ಸಂದಾಯ ಮಾಡತಕ್ಕದ್ದು; ಮತ್ತು

(i) ಆ ಮೊತ್ತವು, 4ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಬಳಕೆದಾರನಿಂದಾಗಲೀ ಅಥವಾ ಸದರಿ ಉಪ ಪ್ರಕರಣದ ಪರಂತುಕಕ್ಕೊಳಪಟ್ಟು, ರಾಜ್ಯ ಸರ್ಕಾರದ ಆಯ್ಕೆಯ ಮೇರೆಗೆ ಲೈಸೆನ್ಸ್‌ದಾರನಿಂದಾಗಲೀ ಸಂದಾಯವಾಗುವಂಥದ್ದಾಗಿದ್ದರೆ ;

(ii) ಆ ಮೊತ್ತವು, 4ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಬಳಕೆದಾರನಿಂದಾಗಲೀ ಅಥವಾ ರಾಜ್ಯ ಸರ್ಕಾರದ ಆಯ್ಕೆಯ ಮೇರೆಗೆ ಉಚಿತವಾಗಿ ವಿದ್ಯುತ್ತನ್ನು ಸರಬರಾಜು ಮಾಡುತ್ತಿರುವ ವ್ಯಕ್ತಿಯಿಂದಾಗಲೀ ಅಥವಾ ತನ್ನ ಸ್ವಂತ ಬಳಕೆಗಾಗಿ ವಿದ್ಯುತ್ತನ್ನು ಉತ್ಪಾದಿಸುವ ವ್ಯಕ್ತಿಯಿಂದಾಗಲೀ ಸಂದಾಯವಾಗುವಂಥದ್ದಾಗಿದ್ದರೆ

ಆ ಮೊತ್ತವನ್ನು ಅದರ ಮೇಲಿನ ಬಡ್ಡಿಯೊಂದಿಗೆ ಒಂದು ಸಿವಿಲ್ ನ್ಯಾಯಾಲಯದ ಮೂಲಕವಾಗಲಿ ಅಥವಾ ಭೂ ಕಂದಾಯದ ಒಂದು ಬಾಕಿಯಂತಾಗಲಿ ವಸೂಲು ಮಾಡತಕ್ಕದ್ದು.

XX XX XX

9. **ದಂಡಗಳು.–** (1) 5ನೇ ಪ್ರಕರಣದ ಅಡಿಯಲ್ಲಿ ಲೆಕ್ಕದ ಪುಸ್ತಕಗಳನ್ನು ನಿರ್ವಹಿಸಲು ಅಥವಾ ಒಪ್ಪಿಸಲು ಹೊಣೆಗಾರನಾದ ಯಾರೇ ವ್ಯಕ್ತಿಯು, ನಿಯಮಿಸಲಾದ ರೀತಿಯಲ್ಲಿ ಅವುಗಳನ್ನು ನಿರ್ವಹಿಸಲು ಅಥವಾ ಒಪ್ಪಿಸಲು ವಿಫಲನಾದರೆ ಅಥವಾ ಪರಿಶೀಲಕನು ಈ ಅಧಿನಿಯಮದ ಅಡಿಯಲ್ಲಿ ತನ್ನ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಚಲಾಯಿಸುವಲ್ಲಿ ಅವನಿಗೆ ಅಡ್ಡಿಪಡಿಸಿದರೆ, ಅಥವಾ 10ನೇ ಪ್ರಕರಣದ ಅಡಿಯಲ್ಲಿ ಮಾಡಿದ ಯಾವುದೇ ನಿಯಮವನ್ನು ಉಲ್ಲಂಘಿಸಿದರೆ, ಅಪರಾಧ ನಿರ್ಣಯವಾದ ತರುವಾಯ ಅವನನ್ನು ಐದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿಸತಕ್ಕದ್ದು.

XX XX XX

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SIXTEENTH SESSION**

## THE KARNATAKA ELECTRICITY (TAXATION ON CONSUMPTION) (AMENDMENT) BILL, 2013

**(L.A. Bill No. 05 of 2013)**

A Bill further to amend the Karnataka Electricity (Taxation on Consumption) Act, 1959.

Whereas it is expedient further to amend the Karnataka Electricity (Taxation on Consumption) Act, 1959 (Karnataka Act 14 of 1959), for the purposes hereinafter appearing;

Be it enacted by the Karnataka State Legislature in the Sixty-Fourth Year of the Republic of India as follows:-

**1. Short title and commencement.-** (1) This Act may be called the Karnataka Electricity (Taxation on Consumption) (Amendment) Act, 2013.

(2) It shall come into force at once.

**2. Amendment of the title, long title and preamble.-** In the Karnataka Electricity (Taxation on Consumption) Act, 1959 (Karnataka Act 14 of 1959) (hereinafter referred to as the principal Act),-

(i) in the title, after the word "consumption", the words "or sale" shall be inserted;

(ii) in the long title and preamble after the word "consumption", the words "or sale" shall be inserted.

**3. Amendment of section 1.-** In section 1 of the principal Act, after the word "consumption", the words "or sale" shall be inserted.

**4. Amendment of section 2.-** In section 2 of the principal Act,-

(i) clause (1) shall be renumbered as clause (1C) thereof and for clause (1C) as so renumbered, the following shall be substituted, namely:-

"(1C) "consumer" includes a local Authority, company or any other person to whom electricity is supplied by a licensee or by any other person on payment of charges or otherwise, and a licensee or other person who consumes electricity generated by himself, but does not include a licensee to whom electricity is supplied for supply to others, and the word "consume" with its grammatical variations shall be construed accordingly;

**Explanation.-** Where a licensee to whom electricity is supplied for supply to others, himself consumes any part of the electricity he shall be deemed to be a consumer in respect of electricity so consumed;"

(ii) before clause (1C) so renumbered, the following shall be inserted, namely:-

"(1) 'Auxiliary consumption' means electricity consumed by any electrical apparatus situated in a generating station, for generating electricity, including Captive Generating Plant, Co-Generating Plant or any other generating plant excluding any building used for housing the operating staff of a generating station;

(1A) 'Captive consumption' means electricity consumed for own use to the extent of not less than fifty one percent of the electricity generated by a Captive Generating plant situated within the State of Karnataka determined on an annual basis.

Provided that in respect of an association the own consumption of members to the extent of fifty one percent of the electricity generated shall be proportionate to their ownership share in the power plant, within a variation of ten percent determined on an annual basis.

but does not include,-

(a) the electricity consumed in any building used for housing the operating staff; and

(b) the auxiliary consumption; and

(c) losses sustained in transformation and transmission."

(1B) 'Chief Electrical Inspector to Government' means the Chief Electrical Inspector to Government appointed by the State Government under sub section (1) of Section 162 of the Electricity Act, 2003 (Central Act 36 of 2003) who is the head of the Department of Electrical Inspectorate;"

(iii) for clause (2), the following shall be substituted, namely:-

"(2) 'electricity' means electrical energy,-

(a) generated, consumed, transmitted, supplied or traded for any purposes; or

(b) used for any purpose except the transmission of message.

(2A) 'electricity charges' means, the electricity consumption charges payable by the consumer at the prescribed rates on the units of electricity supplied to such consumer;

(2B) 'Inspecting Officer' means any officer appointed by the State Government as Inspecting Officer under section 6 of this Act".

(iv) in clause (3),-

(a) for sub-clause (a), the following shall be substituted, namely:-

"(a) any person who has been granted or deemed to have been granted a license under section 14 of the Electricity Act, 2003 (Central Act 36 of 2003) and includes any person who had obtained sanction in accordance with section 14 of the Karnataka Electricity Reforms Act, 1999 (Karnataka Act 25 of 1999);"

(b) sub-clause (b) shall be omitted.

(c) in sub-clause (c) for the word "energy" the word "electricity" shall be substituted.

(v) after clause (3), the following shall be inserted, namely:-

"(3A) 'non-licensee' means any person not being a licensee who generates electricity either for his own consumption or for supply to any other person for a charge or otherwise, where license is not required as per the provisions of the Electricity Act, 2003 (Central Act 36 of 2003), rules and regulations made thereunder;"

(vi) after clause (4), the following shall be inserted, namely:-

"(4a) 'supply' in relation to electricity includes sale of electricity to a licensee or consumer.

Provided that sale does not include where electricity supplied to licensee for supply to others"

(vii) after clause (5), the following shall be inserted, namely:-

"(6) 'unit' means one kilowatt hour of electricity being measured by means of energy meter or trivector meter or any of the methods adopted to measure electricity."

**5. Amendment of section 3.-** In section 3 of the principal Act,-

(i) for sub-section (1), the following shall be substituted, namely:-

"(1) Subject to the provisions of this Act, there shall be levied and paid to the State Government electricity tax on advolorem basis at six percent on the charges payable on electricity sold to or consumed by, any consumers (excluding arrears) when electricity is supplied by licensee or non-licensee through licensee or otherwise;

Provided that when the consumer consumes electricity at concessional rate or free of charge the consumer shall be liable to pay on the rate of charges of electricity levied by the licenses to other consumers.

except,-

(i) the consumers under agricultural (irrigation pump sets upto and inclusive of ten horse power);

(ii) Bhagya Jyothi and kutira jyothi categories upto the extent of free consumption allowed by the State Government from time to time; and

(iii) the consumers covered under sub-section (2)."

(ii) for sub-section (2), the following shall be substituted, namely:-

"(2) Subject to the provisions of this Act, there shall be levied and paid to the State Government by every non licensee electricity tax on all the units of electricity consumed by himself at such rates specified by the State Government, by notification, from time to time but not exceeding the rates specified below, namely:-

(a) electricity tax not exceeding 50 paise per unit on captive consumption;

(b) electricity tax not exceeding 25 paise per unit on auxiliary consumption in a generating station whether Captive Generating Plant or cogeneration plant or otherwise, for the auxiliary loads exceeding 50 Kilo Watts."

**6. Amendment of section 4.-** In section 4 of the principal Act,-

(i) for sub-section (1), the following shall be substituted, namely:-

"(1) Every licensee shall collect and pay to the State Government at the time and in the manner prescribed, the electricity tax payable under this Act,-

(a) on the electricity charges included in the bill issued by him to the consumer. The tax so payable shall be a first charge on the amounts recoverable by the supplier for the electricity supplied by him and shall be a debt due by him to the State Government:

Provided that where the licensee has been unable to recover the amounts due to him for the electricity supplied by him he shall not be liable to pay tax in respect of the electricity so supplied;

(b) on the units of electricity supplied to consumers by non licensee through the licensee."

(ii) for sub-section (3), the following shall be substituted, namely:-

"(3) Every person who consumes electricity generated by himself, and or who supplies electricity free of charge or otherwise to any other person through his own system, shall pay, or collect and pay, as the case may be, to the State Government, at the time and in the manner prescribed, the electricity tax payable under section 3."

(iii) in sub-section (4),-

(a) the words "free of charge" shall be omitted.

(b) for the words "sub-section (1) of section 24 of the Indian Electricity Act, 1910", the words "sub-section (1) of section 56 of the Electricity Act, 2003 (Central Act 36 of 2003)" shall be substituted.

**7. Amendment of section 7.-** In section 7 of the principal Act,-

(a) in clause (ii) the words "free of charge" shall be omitted;

(b) after clause (ii), the following shall be inserted, namely:-

"(iii) the amount received or recovered towards the arrears of tax or revenue due to government shall be adjusted first towards penalty, balance if any towards the outstanding interest on the tax or revenue. After such adjustment the balance amount be adjusted towards tax or revenue;"

**8. Amendment of section 9.-** In section 9 of the principal Act, in sub-section (1), for the words "an Inspector", the words "an Inspecting officer" shall be substituted and for the words "five hundred", the words "five thousand" shall be substituted.

**9. Insertion of sections 9A and 9B.-** After section 9 of the principal Act, the following shall be inserted, namely:-

**"9A. Appeal.-** (1) Any person aggrieved by an order,-

(i) passed by any Inspecting Officer under the provisions of this Act, may appeal to the Chief Electrical Inspector to Government; and

(ii) passed by the Chief Electrical Inspector to Government under the provisions of this Act, may appeal to the State Government.

(2) The appeal shall be, in the prescribed form within such period, shall be verified in the prescribed manner, and shall be accompanied by a charges equal to five percent of the amount of the assessment objected to and challan for having remitted not less than twenty five percent of the electricity tax to be paid against assessment order under appeal.

**9B. Protection of action taken in good faith:** No suit, prosecution or other proceeding shall lie against the State Government or any officer of the State Government or any public servant for anything done or in good faith purporting to be done or any action taken under this Act or the rules made there under."

## STATEMENT OF OBJECTS AND REASONS

It is considered necessary to amend the Karnataka Electricity (Taxation on Consumption) Act, 1959,-

(1) to levy and collect tax on sale of electricity also;

(2) to classify the auxiliary consumption, captive consumption and to levy different rates of electricity tax on consumption of electricity by such class of consumers;

(3) to levy of electricity tax on supply of electricity by non-licencee to others;

(4) to provide a provision for appeal by the aggrived person on the orders of Inspecting Officer or Chief Electrical Inspector; and

(5) certain other consequential amendments are also made.

Hence, the Bill.

## FINANCIAL MEMORANDUM

There is no extra expenditure involved in the proposed legislative measure.

## MEMORANDUM REGARDING DELEGATED LEGISLATION

**Clause 6 :** (i) Sub-section (1)of section (4), proposed to be substituted by this clause, empowers the State Government to make rules regarding time and manner of collection and payment of electricity tax by the licensee.

(ii) Sub-section (3)of section (4), proposed to be substituted by this clause, empowers the State Government to make rules regarding time and manner for payment of electricity tax under section (3),by every person who consumes electricity generated by himself.

**Clause 9 :** Sub-section (2) of section 9A proposed to be inserted by this clause, empowers the State Government to make rules regarding the form of appeal by aggrieved person and manner of verification of the appeal by chief electrical inspector to Government and by State Government.

The proposed delegation of legislative power is normal in character.

**JAGADISH SHETTAR**
CHIEF MINISTER

**P. OMPRAKASHA**
Secretary
Karnataka Legislative Assembly

**ANNEXURE**

**EXTRACT FROM THE KARNATAKA ELECTRICITY (TAXATION ON CONSUMPTION) ACT, 1959**

**(KARNATAKA ACT NO. 14 OF 1959)**

**XX XX XX**

**THE KARNATAKA ELECTRICITY (TAXATION ON CONSUMPTION) ACT, 1959.**

**XX XX XX**

An Act to provide for the levy of tax on the consumption of electrical energy in the State of Karnataka.

WHEREAS it is expedient to provide for the levy of tax on consumption of electrical energy in the State of Karnataka;

BE it enacted by the Karnataka State Legislature in the Tenth Year of the Republic of India as follows:—

**1. Short title, extent and commencement.-** (1) This Act may be called the Karnataka Electricity (Taxation on Consumption) Act, 1959.

**XX XX XX**

**2. Definitions.-** In this Act, unless the context otherwise requires,—

(1) "consumer" includes a local authority, company or other person to whom energy is supplied by a licensee on payment of charges or otherwise, and a licensee or other person who consumes energy generated by himself, but does not include a licensee to whom energy is supplied by the Karnataka Power Transmission Corporation for supply to others; and the word "consume" with its grammatical variations shall be construed accordingly;

***Explanation.***—Where a licensee to whom energy is supplied by the Karnataka Power Transmission Corporation for supply to others, himself consumes any part of the energy, he shall be deemed to be a consumer in respect of energy so consumed.

(2) "energy" means electrical energy;

**XX XX XX**

**3. Levy of tax on electricity charges etc.-** (1) Subject to the provisions of this Act, there shall be levied and paid to the State Government, advolorem tax (hereinafter referred to as "electricity tax") at five percent on the electricity charges payable (excluding arrears) by all the consumers except consumers under agricultural (irrigation pump sets upto and inclusive of Ten Horse Power), Bhagya jyothi and Kutira jyothi categories

(2) Subject to the provision of this Act, there shall be levied and paid to the State Government, with effect from the date of commencement of Karnataka Electricity (Taxation on Consumption) (Amendment) Act, 2004 and till the first day of July, 2004, an electricity tax at the rate of twenty five paise per unit on all the units of energy consumed by any person,-

(i) not being a licensee who has generated such energy; or

(ii) to whom it is supplied free of charge by a person not being a licensee who has generated such energy.

**4. Payment of electricity tax.-** (1) Every licensee shall collect and pay to the State Government at the time and in the manner prescribed, the electricity tax payable under this Act on the electricity charges included in the bill issued by him to the consumer. The tax so payable shall be a first charge on the amounts recoverable by the supplier for the energy supplied by him and shall be a debt due by him to the State Government:

Provided that where the licensee has been unable to recover the amounts due to him for the energy supplied by him he shall not be liable to pay the tax in respect of the energy so supplied.

(2) A licensee may be granted a rebate of such amount, as may from time to time be determined by the State Government regard being had to the cost of collection of the electricity tax incurred by such licensee:

Provided that the amount of rebate shall not exceed two per cent of the electricity tax collected by the licensee.

(3) Every person, who consumes energy generated by himself, or who supplies energy to any other person free of charge, shall pay, or collect and pay, as the case may be, to the State Government, at the time and in the manner prescribed, the electricity tax payable under section 3.

(4) When any consumer fails or neglects to pay at the time and in the manner prescribed, the amount of electricity tax due from him, the licensee or, as the case may be, the person supplying energy free of charge, may without prejudice to the right of the State Government to recover the amount under section 7, after giving not less than seven clear days' notice in writing to such person, cut off supply of energy to such person; and he may, for that purpose, exercise the power conferred on a licensee by sub-section (1) of section 24 of the Indian Electricity Act, 1910, for the recovery of any charge or sum due in respect of energy supplied by him.

(5) Nothing in this section shall apply,-

(i) to any person who generates energy for the purpose of supplying it for the use of vehicles or vessels;

(ii) to the consumption of energy generated by means of generators not exceeding ten kilowatts in capacity.

**XX XX XX**

**7. Recoveries.-** Any sum due on account of electricity tax, if not paid at the time and in the manner prescribed, shall be deemed to be in arrears, and thereupon such interest not exceeding [1][twenty-four per cent][1] per annum which the State Government may by general or special order fix shall be payable on such sum; and the sum, together with any interest thereon, shall be recoverable either through a civil court or as an arrear of land revenue,—

(i) if the sum was payable under sub-section (1) of section 4 either from the consumer or, subject to the proviso to the said sub-section from the licensee, at the option of the State Government;

(ii) if the sum was payable under sub-section (3) of section 4, either from the consumer or from the person supplying energy free of charge, at the option of the State Government, or from the person who generates energy for his own consumption.

**XX XX XX**

**9. Penalties.-** (1) If any person liable under section 5 to keep books of account or submit returns fails to keep or submit the same in the manner prescribed or obstructs an Inspector in the exercise of his powers and duties under this Act, or contravenes any rule made under section 10, he shall, on conviction, be punished with fine which may extend to five hundred rupees.

**XX XX XX**


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೧೩, ೨೦೧೩ (ಮಾಘ ೨೪, ಶಕ ವರ್ಷ ೧೯೩೪) | ನಂ. ೪೦೩ |
|---|---|---|
| **Part – IV-A** | **Bangalore, Wednesday, February 13, 2013 (Magha 24, Shaka Varsha 1934)** | **No. 403** |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/06/Bill/2013, Bangalore, Dated: 13-02-2013**

The following Bill was introduced in Legislative Assembly on 13-2-2013

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನಾರನೇ ಅಧಿವೇಶನ**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) (ತಿದ್ದುಪಡಿ) ವಿಧೇಯಕ, 2013**

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 06)**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ನ್ನು (1966ರ ಕರ್ನಾಟಕ ಅಧಿನಿಯಮ 27) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 17ನೇ ಪ್ರಕರಣದ ತಿದ್ದುಪಡಿ.-** ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 17ನೇ ಪ್ರಕರಣದಲ್ಲಿ,-

(i) (2)ನೇ ಉಪಪ್ರಕರಣದಲ್ಲಿ "(1)ನೇ ಉಪಪ್ರಕರಣದ ಮೇರೆಗೆ ಅನರ್ಹನಾಗಿರುವನೇ ಅಥವಾ ಅನರ್ಹತೆಗೆ ಗುರಿಯಾಗಿರುವನೇ" ಎಂಬ ಆವರಣ ಚಿಹ್ನೆಗಳು, ಅಂಕಿ ಮತ್ತು ಪದಗಳ ತರುವಾಯ "ಅಥವಾ ಆತನ ಚುನಾವಣೆಯ ದಿನಾಂಕದಂದು ಸ್ಥಾನವನ್ನು ಭರ್ತಿ ಮಾಡುವುದಕ್ಕೆ ಆಯ್ಕೆ ಮಾಡಲು ಚುನಾಯಿತ ಅಭ್ಯರ್ಥಿಯು ಅನರ್ಹನಾಗಿರುವನೇ ಅಥವಾ ಅರ್ಹನಾಗಿರುವನೇ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (3)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(4) ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ತಿದ್ದುಪಡಿ) ಅಧಿನಿಯಮ, 2012ರ ಪ್ರಾರಂಭದ ದಿನಾಂಕದಂದು ಸಿವಿಲ್ ನ್ಯಾಯಾಧೀಶರ ಮುಂದೆ ಬಾಕಿಯಿರುವ, ಅಧಿನಿಯಮದ 21ನೇ ಪ್ರಕರಣದ (ಎ) ಖಂಡದ ಅಡಿಯಲ್ಲಿ ಬರುವ ಯಾವುದೇ ಚುನಾವಣಾ ಅರ್ಜಿಗಳು ಕೃಷಿ ಮಾರುಕಟ್ಟೆ ನಿರ್ದೇಶಕರಿಗೆ ವರ್ಗಾವಣೆಯಾಗತಕ್ಕದ್ದು ಮತ್ತು ಅಂಥ ಅರ್ಜಿಗಳಿಗೆ ಕೃಷಿ ಮಾರುಕಟ್ಟೆ ನಿರ್ದೇಶಕರು, ಅಂಥ ಅರ್ಜಿಯು ತನ್ನ ಮುಂದೆ ದಾಖಲು ಮಾಡಲಾಗಿದ್ದರೆ ಹೇಗೋ ಹಾಗೆ ತೀರ್ಮಾನವನ್ನು ನೀಡತಕ್ಕದ್ದು."

**3. 21ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 21ನೇ ಪ್ರಕರಣದ (ಎ) ಖಂಡವನ್ನು ಬಿಟ್ಟುಬಿಡತಕ್ಕದ್ದು.

**4. 65ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 65ನೇ ಪ್ರಕರಣದ (5)ನೇ ಉಪ-ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(6) ಈ ಅಧಿನಿಯಮದಲ್ಲಿ ಏನೇ ಇದ್ದರೂ,-

(ಎ) ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಡಿ 172 ಎಟಿಎಫ್ 2010 ದಿನಾಂಕ: 05.03.2011 ರಲ್ಲಿ ಪ್ರಕಟಿಸಲಾದ ಸರ್ಕಾರದ ಸಂಯೋಜಿತ ಕರ್ನಾಟಕ ಕೃಷಿ-ವ್ಯಾಪಾರ ಅಭಿವೃದ್ಧಿ ಕಾರ್ಯನೀತಿ-2011ರ ಅನ್ವಯ ಅಂಥ ಸಂಸ್ಕರಣಾ ಕೈಗಾರಿಕೆಗಳು ಮಾಡಿದ ಕೃಷಿ ಉತ್ಪನ್ನದ ಖರೀದಿಗಳ ಮೇಲೆ;

(ಬಿ) ಯಾವೊಬ್ಬ ವ್ಯಕ್ತಿಯು ತನ್ನ ಪರವಾಗಿಯಾಗಲೀ ಅಥವಾ ಮತ್ತೊಬ್ಬ ವ್ಯಕ್ತಿಯ ಒಬ್ಬ ಏಜೆಂಟನಾಗಿಯಾಗಲೀ ಮಾರುಕಟ್ಟೆ ಪ್ರದೇಶದಿಂದ ರಾಷ್ಟ್ರದ ಹೊರಗೆ ರಫ್ತಾದ ಅಥವಾ ರಫ್ತಾಗುವಂತೆ ಮಾಡಲಾದ ಯಾವುದೇ ಕೃಷಿ ಉತ್ಪನ್ನದ ಮೇಲೆ,

- ಆ ವ್ಯಕ್ತಿಯು ಶುಲ್ಕ ವಿನಾಯಿತಿಗೆ ಅರ್ಹನೆಂದು ಕರ್ನಾಟಕ ಸರ್ಕಾರದ ಕೈಗಾರಿಕೆಗಳು ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರು ಪ್ರಮಾಣೀಕರಿಸಿ ನೀಡಿರುವ ಪ್ರಮಾಣಪತ್ರವನ್ನು ಹಾಜರುಪಡಿಸುವುದಕ್ಕೆ ಒಳಪಟ್ಟು, ಹೊಸ ಕೃಷಿ ಉತ್ಪನ್ನ ಸಂಸ್ಕರಣ ಕೈಗಾರಿಕೆಗಳು ಹತ್ತು ವರ್ಷಗಳ ಅವಧಿಗಾಗಿ ಯಾವುದೇ ಮಾರುಕಟ್ಟೆ ಶುಲ್ಕಗಳನ್ನು ಸಂದಾಯ ಮಾಡತಕ್ಕದ್ದಲ್ಲ."

**5. "ಮುನ್ಸೀಫ್" ಎಂಬ ಪದಕ್ಕೆ "ಸಿವಿಲ್ ನ್ಯಾಯಾಧೀಶ" ಎಂಬ ಪದಗಳನ್ನು ಪ್ರತಿಯೋಜಿಸುವುದು.-** ಮೂಲ ಅಧಿನಿಯಮದಲ್ಲಿ "ಮುನ್ಸೀಫ್" ಎಂಬ ಪದಕ್ಕೆ, ಅದು ಬರುವೆಡೆಗಳಲ್ಲೆಲ್ಲಾ, "ಸಿವಿಲ್ ನ್ಯಾಯಾಧೀಶ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ರಿಟ್ ಪಿಟಿಷನ್ ಸಂಖ್ಯೆ: 34952/2011 ರಲ್ಲಿ ಕರ್ನಾಟಕದ ಮಾನ್ಯ ಉಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಪಾಲಿಸುವುದಕ್ಕಾಗಿ ಮತ್ತು ಸರ್ಕಾರದ ಸಂಯೋಜಿತ ಕೃಷಿ ವ್ಯವಹಾರ ಅಭಿವೃದ್ಧಿ ಕಾರ್ಯನೀತಿ, 2011ನ್ನು ಜಾರಿಗೊಳಿಸುವುದಕ್ಕಾಗಿ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ನ್ನು (1966ರ ಕರ್ನಾಟಕ ಅಧಿನಿಯಮ 27) ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಹೊಸ ಕೃಷಿ ಸಂಸ್ಕರಣಾ ಘಟಕಗಳಿಂದ ಮತ್ತು ರಾಷ್ಟ್ರದಿಂದ ಹೊರಗೆ ಆಗುವ ರಫ್ತುಗಳ ಮೇಲೆಯು ಅಧಿಸೂಚಿತ ಕೃಷಿ ಉತ್ಪನ್ನದ ಖರೀದಿಯ ಮೇಲೆ ಮಾರುಕಟ್ಟೆ ಶುಲ್ಕದ ಪಾವತಿಯ ವಿನಾಯಿತಿಯಿಂದಾಗಿ ರಾಜ್ಯದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ವಾರ್ಷಿಕವಾಗಿ 20.00 ಕೋಟಿ ರೂಪಾಯಿಗಳ (ಇಪ್ಪತ್ತು ಕೋಟಿ ರೂಪಾಯಿಗಳು ಮಾತ್ರ) ಅಂದಾಜು ನಷ್ಟ ಉಂಟಾಗಬಹುದು. ಹೊಸ ಸಂಸ್ಕರಣಾ ಘಟಕಗಳ ಸ್ಥಾಪನೆಯಿಂದ ಮತ್ತು

ರಾಷ್ಟ್ರದಿಂದ ಹೊರಗೆ ರಫ್ತುಗಳನ್ನು ಮಾಡಲು ಅನುಮತಿಸುವುದರಿಂದ ರೈತರ ಆದಾಯವು ಹೆಚ್ಚಾಗುವುದಲ್ಲದೆ ಕೃಷಿ ಉತ್ಪನ್ನದ ಉತ್ತಮ ಬಳಕೆ ಮತ್ತು ಮೌಲ್ಯವೃದ್ಧಿಯಾಗಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ರಾಜಸ್ವ ನಷ್ಟವನ್ನು ಭರಿಸುವ ಅಂಶವನ್ನು ಪರಿಗಣಿಸಲಾಗಿದೆ.

**ಎಸ್.ಕೆ. ಬೆಳ್ಳುಬ್ಬಿ**
ಕೃಷಿ ಮಾರುಕಟ್ಟೆ, ಹಜ್ ಹಾಗೂ ವಕ್ಫ್ ಮತ್ತು
ಬಿಜಾಪುರ ಜಿಲ್ಲಾ ಉಸ್ತುವಾರಿ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ (1996ರ ಕರ್ನಾಟಕ ಅಧಿನಿಯಮ 27) ಉದ್ಧೃತ ಭಾಗ**

XX XX XX

**17. ಹಾಲಿ ಸದಸ್ಯರ ಅನರ್ಹತೆ.-** (1) ಮಾರುಕಟ್ಟೆ ಸಮಿತಿಯ ಯಾವನೇ ಸದಸ್ಯನು,-

(ಎ) 16ನೇ ಪ್ರಕರಣದಲ್ಲಿ ನಮೂದಿಸಿದ ಯಾವುದೇ ಅನರ್ಹತೆಗಳಿಗೆ ಒಳಪಟ್ಟರೆ; ಅಥವಾ

(ಬಿ) 14ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಚುನಾವಣಾ ಕ್ಷೇತ್ರವನ್ನು ಪ್ರತಿನಿಧಿಸುವ ಒಬ್ಬ ಸದಸ್ಯನು ಮಾರುಕಟ್ಟೆ ಸಮಿತಿಯ ಅನುಮತಿ ಪಡೆಯದೆ, ಸತತವಾಗಿ ಮೂರಕ್ಕಿಂತ ಹೆಚ್ಚು ಸಾಮಾನ್ಯ ಸಭೆಗಳಿಗೆ ಗೈರು ಹಾಜರಾದರೆ ಅವನ ಸ್ಥಾನವು ಸಂದರ್ಭಾನುಸಾರ ಖಾಲಿಯಾಗುವುದೆಂದು ಅಥವಾ ಖಾಲಿಯಾಗಿದೆ ಎಂದು ಭಾವಿಸತಕ್ಕದು ಮತ್ತು ಆ ಸಂಗತಿಯನ್ನು ಮಾರುಕಟ್ಟೆ ಸಮಿತಿಯು ಆ ಕೂಡಲೇ ಆ ಸದಸ್ಯನಿಗೆ ಲಿಖಿತದಲ್ಲಿ ತಿಳಿಸತಕ್ಕದು:

ಪರಂತು, ಸದಸ್ಯನು ತಾನು ಗೈರು ಹಾಜರಾಗಲು ಅನುಮತಿ ಕೋರಿ ಮಾರುಕಟ್ಟೆ ಸಮಿತಿಗೆ ಅರ್ಜಿಯನ್ನು ಸಲ್ಲಿಸಿದ್ದು ಮಾರುಕಟ್ಟೆ ಸಮಿತಿಯು, ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳ ಅವಧಿಯೊಳಗೆ ಆ ಬಗ್ಗೆ ತನ್ನ ನಿರ್ಣಯವನ್ನು ಅರ್ಜಿದಾರನಿಗೆ ತಿಳಿಸುವುದಕ್ಕೆ ತಪ್ಪಿದಲ್ಲಿ, ಕೋರಿರುವ ರಜೆಯನ್ನು ಮಾರುಕಟ್ಟೆ ಸಮಿತಿಯು ಮಂಜೂರು ಮಾಡಿದೆ ಎಂದು ಭಾವಿಸತಕ್ಕದು.

(2) ಯಾವನೇ ಸದಸ್ಯನು (1)ನೇ ಉಪಪ್ರಕರಣದ ಮೇರೆಗೆ ಅನರ್ಹನಾಗಿರುವನೇ ಅಥವಾ ಅನರ್ಹತೆಗೆ ಗುರಿಯಾಗಿರುವನೇ ಎಂಬ ಪ್ರಶ್ನೆ ಉದ್ಭವಿಸಿದಾಗಲೆಲ್ಲ ಕೃಷಿ ಮಾರುಕಟ್ಟೆ ನಿರ್ದೇಶಕನು ಸ್ವಪ್ರೇರಣೆಯಿಂದ ಅಥವಾ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಯ ವರದಿಯ ಮೇಲೆ ಅಥವಾ ಅನ್ಯಥಾ ಮತ್ತು ಆ ಬಗ್ಗೆ ಸಂಬಂಧಪಟ್ಟ ಸದಸ್ಯರಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ ಮತ್ತು ತಾನು ಸೂಕ್ತವೆಂದು ಭಾವಿಸುವಂತಹ ವಿಚಾರಣೆಯನ್ನು ನಡೆಸಿದ ನಂತರ ಆ ಪ್ರಶ್ನೆಯನ್ನು ತೀರ್ಮಾನಿಸತಕ್ಕದು ಮತ್ತು ಅವನ ತೀರ್ಮಾನವು ಅಂತಿಮವಾಗಿರತಕ್ಕದು.

XX XX XX

**21. ಚುನಾವಣೆ ಶೂನ್ಯವೆಂದು ಘೋಷಿಸುವುದಕ್ಕೆ ಆಧಾರಗಳು.-** ಮುನ್ಸೀಫನು,-

(ಎ) ಚುನಾಯಿತ ಅಭ್ಯರ್ಥಿಯು, ಚುನಾವಣೆಯ ದಿನಾಂಕದಂದು, ಆ ಸ್ಥಾನವನ್ನು ಭರ್ತಿ ಮಾಡುವುದಕ್ಕೆ ಆಯ್ಕೆಯಾಗಲು ಅರ್ಹನಾಗಿರಲಿಲ್ಲವೆಂದು ಅಥವಾ ಅನರ್ಹನಾಗಿದ್ದಾನೆಂದು, ಅಥವಾ

(ಬಿ) ಚುನಾಯಿತ ಅಭ್ಯರ್ಥಿಯು ಅಥವಾ ಅವನ ಚುನಾವಣಾ ಏಜೆಂಟನು ಅಥವಾ ಚುನಾಯಿತ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಯಾವನೇ ಇತರ ವ್ಯಕ್ತಿಯು ಯಾವುದೇ ಭ್ರಷ್ಟಾಚಾರ ಎಸಗಿದ್ದಾನೆಂದು, ಅಥವಾ

(ಸಿ) ಯಾವುದೇ ನಾಮಪತ್ರವನ್ನು ಅನುಚಿತವಾಗಿ ತಿರಸ್ಕರಿಸಲಾಗಿದೆ ಎಂದು, ಅಥವಾ

(ಡಿ) ಚುನಾವಣೆಯ ಫಲಿತಾಂಶವು,-

(i) ಯಾವುದೇ ನಾಮಪತ್ರವನ್ನು ಅನುಚಿತವಾಗಿ ಸ್ವೀಕರಿಸುವ, ಅಥವಾ

(ii) ಅಭ್ಯರ್ಥಿಯ ಹೊರತಾಗಿ ಯಾವನೇ ವ್ಯಕ್ತಿಯು ಅಥವಾ ಅವನ ಚುನಾವಣಾ ಏಜೆಂಟನು ಅಥವಾ ಅಂತಹ ಅಭ್ಯರ್ಥಿಯ ಅಥವಾ ಅವನ ಚುನಾವಣಾ ಏಜೆಂಟನ ಸಮ್ಮತಿಯಿಂದ ಕೆಲಸ ಮಾಡುತ್ತಿರುವ ವ್ಯಕ್ತಿಯು ಚುನಾಯಿತ ಅಭ್ಯರ್ಥಿಯ ಹಿತಾಸಕ್ತಿಯಲ್ಲಿ ಯಾವುದೇ ಭಂಚಿಷುಂಔಚಂರಂ ಮಾಡಿರುವ, ಅಥವಾ

(iii) ಯಾವುದೇ ಮತವನ್ನು ಅನುಚಿತವಾಗಿ ಸ್ವೀಕರಿಸುವ, ನಿರಾಕರಿಸುವ ಅಥವಾ ತಿರಸ್ಕರಿಸುವ ಅಥವಾ ಶೂನ್ಯವಾದ ಯಾವುದೇ ಮತವನ್ನು ಸ್ವೀಕರಿಸುವ, ಅಥವಾ

(iv) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಲಾದ ಯಾವುವೇ ನಿಯಮಗಳ ಅಥವಾ ಮಾಡಲಾದ ಯಾವುವೇ ಆದೇಶಗಳ ಉಪಬಂಧಗಳನ್ನು ಪಾಲಿಸದಿರುವ,

- ಕಾರಣದಿಂದಾಗಿ ಚುನಾಯಿತ ಅಭ್ಯರ್ಥಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಗಣನೀಯವಾಗಿ ಬಾಧಿತವಾಗಿದೆ ಎಂದು ಅಭಿಪ್ರಾಯ ಪಟ್ಟರೆ, ಚುನಾಯಿತನಾದ ಯಾವನೇ ಅಭ್ಯರ್ಥಿಯ ಅಥವಾ ಎಲ್ಲಾ ಅಭ್ಯರ್ಥಿಗಳ ಚುನಾವಣೆಯು ಶೂನ್ಯವಾಗಿದೆ ಎಂದು ಘೋಷಿಸತಕ್ಕದು.

XX XX XX

**65. ಮಾರುಕಟ್ಟೆ ಶುಲ್ಕಗಳನ್ನು ವಿಧಿಸುವುದು.–** XX XX XX

XX XX XX

(5) ಈ ಮುಂದಿನ ಷರತ್ತುಗಳಿಗೆ ಒಳಪಟ್ಟು, ಅಧಿನಿಯಮಕ್ಕೆ ಲಗತ್ತಿಸಲಾದ, ಅನುಸೂಚಿಯ II, III, IV, VI, VII, IX ಮತ್ತು X ನೇ ಕ್ರಮಸಂಖ್ಯೆಗಳಲ್ಲಿ ನಿರ್ದಿಷ್ಟಪಡಿಸಲಾದಂತೆ, ನೇರವಾಗಿ ರೈತರಿಂದ ಕೃಷಿ ಉತ್ಪನ್ನಗಳ ಖರೀದಿಯ ಮೇಲೆ ಸರ್ಕಾರಿ ಆದೇಶ ಸಂಖ್ಯೆ: ಸಿ1/223/ಎಸ್‌ಪಿಐ/2008, ದಿ:28–02–2009 ರಲ್ಲಿ ಪ್ರಕಟಿಸಿದ ಕರ್ನಾಟಕ ಹೊಸ ಕೈಗಾರಿಕಾ ಕಾರ್ಯನೀತಿ 2009–2014ರ ಅಡಿಯಲ್ಲಿ ಗುರುತಿಸಲಾದಂತೆ ವಲಯ 1, 2 ಹಾಗೂ 3ರಲ್ಲಿ ವಿಸ್ತರಣೆ ಅಥವಾ ಆಧುನೀಕರಣ ಅಥವಾ ವೈವಿಧ್ಯತೆಗಳನ್ನು ಕೈಗೊಂಡಂಥ ಹೊಸ ಕೃಷಿ ಉತ್ಪನ್ನಗಳ ಸಂಸ್ಕರಣಾ ಕೈಗಾರಿಕೆಗಳು ಹಾಗೂ ಈಗಿರುವ ಸಂಸ್ಕರಣಾ ಕೈಗಾರಿಕೆಗಳ ಸಂದರ್ಭದಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕದಿಂದ ಅನುಕ್ರಮವಾಗಿ ಐದು ವರ್ಷಗಳು, ನಾಲ್ಕು ವರ್ಷಗಳು ಮತ್ತು ಮೂರು ವರ್ಷಗಳ ಅವಧಿಗಾಗಿ ಯಾವುದೇ ಮಾರುಕಟ್ಟೆ ಶುಲ್ಕಗಳನ್ನು ಸಂದಾಯ ಮಾಡತಕ್ಕದ್ದಲ್ಲ, ಎಂದರೆ:–

(i) ವಿಸ್ತರಣೆ ಅಥವಾ ಆಧುನೀಕರಣ ಅಥವಾ ವೈವಿಧ್ಯಗೊಳಿಸುವ ಯೋಜನೆಗಳಡಿಯಲ್ಲಿ ಸ್ಥಿರಾಸ್ತಿಗಳ ಮೇಲೆ ಈ ಮೊದಲಿನ ಹೂಡಿಕೆಯ ಶೇಕಡಾ ಐವತ್ತರಷ್ಟು ಕನಿಷ್ಠ ಹೂಡಿಕೆಯನ್ನು ಮಾಡಬೇಕಾಗುತ್ತದೆ.

(ii) ಹಿಂದಿನ ಮೂರು ವರ್ಷಗಳಲ್ಲಿ ಮಾಡಿದ ಉತ್ಪನ್ನಗಳ ಸರಾಸರಿಗೆ ತುಲನೆ ಮಾಡಿದಾಗ ಉತ್ಪನ್ನದ ಹೆಚ್ಚುವರಿಯು ವಿಸ್ತರಣಾ ಕಾರ್ಯಕ್ರಮದ ಅಡಿಯಲ್ಲಿ ವಿನಾಯಿತಿಗೆ ಅರ್ಹವಾಗುತ್ತದೆ.

(iii) ಅಸ್ತಿತ್ವದಲ್ಲಿರುವುದನ್ನು ಹೊರತುಪಡಿಸಿ ಹೊಸ ಉತ್ಪನ್ನದ ಉತ್ಪಾದನೆಗಾಗಿ ಬಳಸಿದ ಕಚ್ಚಾ ವಸ್ತುವನ್ನು ವೈವಿಧ್ಯತಾ ಕಾರ್ಯಕ್ರಮಕ್ಕಾಗಿ ಪರಿಗಣಿಸತಕ್ಕದ್ದು.

(iv) ಆಧುನೀಕರಣಗೊಳಿಸುವ ಕಾರ್ಯಕ್ರಮದಡಿಯಲ್ಲಿ ಎಲ್ಲಾ ಹಳೆಯ ಯಂತ್ರೋಪಕರಣ ಗಳನ್ನು ಆಧುನಿಕ ಯಂತ್ರೋಪಕರಣಗಳಿಗೆ ಬದಲಾಯಿಸಿದಂಥ ಈಗಿರುವ ಘಟಕಗಳನ್ನು ಕೇವಲ ಸಂಸ್ಕರಣಾ ಸಾಮರ್ಥ್ಯಕ್ಕಾಗಿ ಖರೀದಿಸಿದ ಒಟ್ಟು ಕಚ್ಚಾ ಸಾಮಗ್ರಿಯ ಮೇಲೆ ಮಾತ್ರ ಮಾರುಕಟ್ಟೆ ಶುಲ್ಕದ ಸಂದಾಯದಿಂದ ವಿನಾಯಿತಿಗೊಳಿಸತಕ್ಕದ್ದು.

(v) ನಿರ್ದೇಶಕರು, ಕೈಗಾರಿಕೆಗಳು ಹಾಗೂ ವಾಣಿಜ್ಯ ಇಲಾಖೆ, ಕರ್ನಾಟಕ ಸರ್ಕಾರ ಅಥವಾ ಇವರ ನಾಮನಿರ್ದೇಶಿತರು, ಈತನು ಮೇಲಿನ ಷರತ್ತುಗಳನ್ನು ಪೂರೈಸಿರುತ್ತಾನೆ ಹಾಗೂ ಈತನು ಶುಲ್ಕದ ವಿನಾಯಿತಿಗೆ ಅರ್ಹನಾಗಿರುತ್ತಾನೆ ಎಂದು ಪ್ರಮಾಣೀಕರಿಸಿ ನೀಡಿರುವ ಪ್ರಮಾಣಪತ್ರವನ್ನು ಹಾಜರುಪಡಿಸತಕ್ಕದ್ದು."

XX XX XX

ಮೂಲ ಅಧಿನಿಯಮದಲ್ಲಿ "ಮುನ್ಸೀಫ್" ಪದವು ಬರುವೆಡೆಗಳಲ್ಲೆಲ್ಲಾ.

XX XX XX

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SIXTEENTH SESSION**

## THE KARNATAKA AGRICULTURAL PRODUCE MARKETING (REGULATION AND DEVELOPMENT) (AMENDMENT) BILL, 2013

**(L.A. Bill No. 6 of 2013)**

A Bill further to amend the Karnataka Agricultural Produce Marketing (Regulation and Development) Act, 1966.

Whereas it is expedient further to amend the Karnataka Agricultural Produce Marketing (Regulation and Development) Act, 1966 (Karnataka Act 27 of 1966) for the purposes hereinafter appearing;

Be it enacted by the Karnataka State Legislature in the Sixty Fourth Year of the Republic of India as follows:-

**1. Short title and commencement**.- (1) This Act may be called the Karnataka Agricultural Produce Marketing (Regulation and Development) (Amendment) Act, 2013.

(2) It shall come into force at once.

**2. Amendment of section 17**.- In the Karnataka Agricultural Produce Marketing (Regulation and Development) Act, 1966 (Karnataka Act 27 of 1966) (hereinafter referred to as the principal Act), in section 17,-

(i) in sub-section (2), after the words, brackets and figure "sub-section (1) arises", the words "or whether on the date of his election, the returned candidate was not qualified or was qualified to be chosen to fill the seat arises" shall be inserted.

(ii) after sub-section (3), the following shall be inserted, namely.-

"(4) Any election petitions falling under clause (a) of section 21 of the Act pending before the Civil Judge on the date of commencement of the Karnataka Agricultural Produce Marketing (Amendment)

Act, 2012 shall stand transferred to the Director of Agricultural Marketing and such petition shall be decided by the Director of Agricultural Marketing as if such petition had been filed before him."

**3. Amendment of section 21**.- In section 21 of the principal Act, clause (a) shall be omitted.

**4. Amendment of section 65.-** In section 65 of the Principal Act,after sub-section (5), the following shall be inserted, namely:-

"(6) Notwithstanding anything contained in this Act, no market fee is payable for a period of ten years by new agricultural produce processing industries,-

(a) in respect of purchases of agricultural produce by such processing industries in accordance with the Integrated Karnataka Agri-Business Development Policy-2011 of the Government published in the Governament Order No. AHD 172 AFT 2010, dated: 05.03.2011;

(b) on any agricultural produce exported or caused to be exported by any person either on his own account or as an agent for another person from the market area to outside the country;

Subject to the production of a certificate issued by the Director of industries and commerce, Government of Karnataka certifying that he is eligible for exemption of fee."

**5. Substitution of the words "Civil Judge" for the word "Munsiff".-** In the principal Act, for the word "Munsiff" wherever it occurs, the words "Civil Judge" shall be substituted.

## STATEMENT OF OBJECTS AND REASONS

In Order to comply with the directions of the Hon'ble High Court of Karnataka in W.P. 34952/2011 and to give effect to the Integrated Agriculture Business Development Policy, 2011, of the Government it is considered necessary to amend the Karnataka Agricultural Produce Marketing (Regulation and Development) Act, 1966 (Karnataka Act 27 of 1966).

Hence, the Bill.

## FINANCIAL MEMORANDUM

Exemption from payment of market fee on the purchase of notified agricultural produce from the new agricultural processing units and also on exports to outside the country may cause an estimated loss of Rs. 20.00 crores (rupees twenty crores only) annually to the APMCs in the State. Considering the fact that better utilization and value addition of agricultural produce which enhances the farmers income from the establishment of new processing units and allowing exports outside the country, the APMCs sustains the loss of revenue.

**S.K. BELLUBBI**
Minister For Agriculture Marketing, Haj & Wakf
and Bijapur District Incharge Minister

**P. OMPRAKASHA**
Secretary
Karnataka Legislative Assembly

**ANNEXURE**

## EXTRACT FROM THE KARNATAKA AGRICULTURAL PRODUCE MARKETING (REGULATION AND DEVELOPMENT) ACT, 1966

**(KARNATAKA ACT 27 OF 1966)**

**xx** **xx** **xx**

**17. Disqualification of sitting member.-** (1) If any member of the market committee,-

(a) becomes subject to any of the disqualifications mentioned in section 16; or

(b) other than an ex-officio member absents himself for more than three consecutive ordinary meetings unless leave so to absent himself has been granted by the market committee,

his seat shall be deemed to be or to have become, as the case may be, vacant and the same shall immediately be intimated to the member in writing by the market commitee:

Provided that where an application is made by a member to the market committee for leave to absent himself and the market committee fails to inform the applicant of its decision on the application within a period of two months from the date of the application, the leave applied for shall be deemed to have been granted by the market committee.

(2) Whenever thequestion whether a person is or has become subject to disqualification under sub-section (1) arises, the Director of Agricultural Marketing shall]1 either suo motu or on a report from the Secretary to the market committee or otherwise, and after giving an opportunity to the member concerned to be heard and holding such enquiry as he deems fit, decide the question and his decision shall be final.

**xx** **xx** **xx**

**21. Grounds for declaring election to be void.-** If the Munsiff is of opinion,-

(a) that on the date of his election the returned candidate was not qualified or was disqualified to be chosen to fill the seat; or

(b) that any corrupt practice has been committed by a returned candidate or his election agent or by any other person with the consent of the returned candidate or his election agent; or

(c) that any nomination has been improperly rejected; or

(d) that the result of the election in so far as it concerns a returned candidate, has been materially affected,-

(i) by the improper acceptance of any nomination; or

(ii) by any corrupt practice committed in the interest of the returned candidate by a person other than that candidate or his election agent or a person acting with the consent of such candidate or his election agent: or

(iii) by the improper reception, refusal or rejection of any vote or the reception of any vote which is void; or

(iv) by any non-compliance with the provisions of this Act or any rules or orders made under this Act,

**the Munsiff shall declare the election of any or all of the returned candidates to be void.**

**xx** **xx** **xx**

65. Levy of market fees**.- X X X**

**xx** **xx** **xx**

(5) No market fee shall be payable for a period of five years, four years and three years from the date of the commencement of the Karnataka Agricultural Produce Marketing (Regulation and Development) (Amendment) Act, 2011, in case of new agricultural produce processing industries and existing processing industries who undertake expansion/modernization/ diversification in Zone-1, 2 and 3 respectively as identified under Karnataka New Industrial Policy 2009-2014, published in Government Order No. CI/223/SPI/2008, dated 28.02.2009, on the purchases of agricultural produce as specified in Sl. No.II, III, IV, VI, VII, IX and X of the Schedule appended to the Act directly from farmers, subject to the following conditions, namely:-

(i) A minimum investment of fifty percent of the earlier investment on fixed assets has to be made under/ expansion/modernization/diversification projects.

(ii) The increased production compared to the average of the production made in the previous three years qualifies for exemption under expansion program.

(iii) Raw material used for production of new product other than the existing one shall be considered for diversification programme.

(iv) The existing units, which have replaced all the old machineries with the modern machineries under the modernization programme shall be exempted from payment of market fee on the total raw material purchases for processing capacity only.

(v) a certificate issued by the Director of Industries and commerce, Government of Karnataka or his nominee certifying that he has fulfilled the above conditions and he is eligible for exemption of fee shall be produced.

**xx** **xx** **xx**

The word **"Munsiff"** wherever it appears in the principal Act.

**xx** **xx** **xx**

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಫೆಬ್ರವರಿ ೧೩, ೨೦೧೩ (ಮಾಘ ೨೪, ಶಕ ವರ್ಷ ೧೯೩೪) | ನಂ. ೪೦೪ |
|---|---|---|
| Part – IV-A | Bangalore, Wednesday, February 13, 2013 (Magha 24, Shaka Varsha 1934) | No. 404 |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/10/Bill/2013, Bangalore, Dated: 13-02-2013**

The following Bill was introduced in Legislative Assembly on 13-2-2013

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನಾರನೇ ಅಧಿವೇಶನ**

## ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2013

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 10)**

ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಶ್ರೀ ಮಲೈ ಮಹದೇಶ್ವರಸ್ವಾಮಿ ದೇವಸ್ಥಾನ, ಮಹದೇಶ್ವರ ಬೆಟ್ಟಗಳ ಅಭಿವೃದ್ಧಿ ಮತ್ತು ನಿರ್ವಹಣೆಗೆ ಒಂದು ಪ್ರಾಧಿಕಾರವನ್ನು ಸ್ಥಾಪಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಶ್ರೀ ಮಲೈ ಮಹದೇಶ್ವರಸ್ವಾಮಿ ದೇವಸ್ಥಾನ, ಮಹದೇಶ್ವರ ಬೆಟ್ಟಗಳನ್ನು ಅಂತರರಾಷ್ಟ್ರೀಯ ಯಾತ್ರಾ ಸ್ಥಳವಾಗಿ, ಸಾಂಸ್ಕೃತಿಕ ಮತ್ತು ಪ್ರವಾಸ ಕೇಂದ್ರವಾಗಿ ಅಭಿವೃದ್ಧಿಗೊಳಿಸಲು ಮತ್ತು ಅದನ್ನು ನಿರ್ವಹಿಸಿಕೊಂಡು ಬರಲು ಒಂದು ಪ್ರಾಧಿಕಾರದ ಸ್ಥಾಪನೆಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

### ಅಧ್ಯಾಯ – I

### ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ.**– (1) ಈ ಅಧಿನಿಯಮ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು, 2ನೇ ಪ್ರಕರಣದ (ಎಫ್) ಖಂಡದಲ್ಲಿ ಪರಿಭಾಷಿಸಲಾದಂತೆ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರದ ಪ್ರದೇಶಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು. ಮತ್ತು ಈ ಅಧಿನಿಯಮದ ಬೇರೆ ಬೇರೆ ಉಪಬಂಧಗಳಿಗೆ ಬೇರೆ ಬೇರೆ ದಿನಾಂಕಗಳನ್ನು ಗೊತ್ತುಪಡಿಸಬಹುದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಸೌಕರ್ಯ" ಎಂಬುದರಲ್ಲಿ ರಸ್ತೆಗಳು, ಬೀದಿಗಳು, ಸುರಂಗ ಮಾರ್ಗಗಳು, ದೀಪವ್ಯವಸ್ಥೆ, ಚರಂಡಿ ವ್ಯವಸ್ಥೆ, ನಿರ್ಮಲೀಕರಣ, ವಿದ್ಯುಚ್ಛಕ್ತಿ ಮತ್ತು ನೀರು ಸರಬರಾಜು ಅಥವಾ ಇತರ ಅನುಕೂಲಗಳು; ಲೋಕೋಪಯೋಗಿ ಕಾಮಗಾರಿಗಳು, ಮಾರುಕಟ್ಟೆ ಸ್ಥಳಗಳು, ಅಂಚೆ ಕಚೇರಿ, ಬ್ಯಾಂಕು, ಆಸ್ಪತ್ರೆ, ಚಿಕಿತ್ಸಾಲಯ, ಪೊಲೀಸು ಠಾಣೆ, ನ್ಯಾಯಬೆಲೆ ಅಂಗಡಿ, ಹಾಲಿನ ಕೇಂದ್ರ, ಗ್ರಂಥಾಲಯ, ಮನೋರಂಜನಾ ಕೇಂದ್ರಗಳು, ಪ್ರಾಧಿಕಾರಿಯು ಪ್ರಾಧಿಕೃತಗೊಳಿಸಿದ ಜನೋಪಯೋಗಿ ಸೇವೆಯ ಯಾವುವೇ ಸೇವಾ ಕೇಂದ್ರಗಳು, ಅಥವಾ ಇತರ ಸೌಲಭ್ಯಗಳು; ಮತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಇತರ ಸೌಕರ್ಯಗಳು ಒಳಗೊಳ್ಳುತ್ತವೆ;

(ಬಿ) "ಪ್ರಾಧಿಕಾರ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ;

(ಸಿ) "ಅಧ್ಯಕ್ಷ" ಎಂದರೆ, ಪ್ರಾಧಿಕಾರದ ಅಧ್ಯಕ್ಷ;

(ಡಿ) "ನಿಧಿ" ಎಂದರೆ, ಪ್ರಾಧಿಕಾರದ ನಿಧಿ;

(ಇ) "ಕಾರ್ಯದರ್ಶಿ " ಎಂದರೆ, 10ನೇ ಪ್ರಕರಣದ ಅಡಿಯಲ್ಲಿ ನೇಮಕ ಮಾಡಲಾದ ಪ್ರಾಧಿಕಾರದ ಕಾರ್ಯದರ್ಶಿ;

(ಎಫ್) "ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ" ಎಂದರೆ, ಅದು ಶ್ರೀ ಮಲೈ ಮಹದೇಶ್ವರಸ್ವಾಮಿ ದೇವಸ್ಥಾನ ಮತ್ತು ಚಾಮರಾಜನಗರ ಜಿಲ್ಲೆಯಲ್ಲಿನ ಕೊಳ್ಳೆಗಾಲ ತಾಲ್ಲೂಕಿನ ಮಲೈ ಮಹದೇಶ್ವರ ಬೆಟ್ಟಗಳಲ್ಲಿ ಅದಕ್ಕೆ ಸೇರಿಕೊಂಡ ಎಲ್ಲಾ ಅಧೀನ ದೇವಸ್ಥಾನಗಳು, ಮಲೈ ಮಹದೇಶ್ವರ ಬೆಟ್ಟಗಳ ಇಡೀ ಪ್ರದೇಶ ಮತ್ತು ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರದ ಅಭಿವೃದ್ಧಿಗಾಗಿ ಸರ್ಕಾರವು ಕಾಲಕಾಲಕ್ಕೆ ಆರ್ಜಿಸಬಹುದಾದ ಭೂ-ಪ್ರದೇಶ ಹಾಗೂ ರಾಜ್ಯಸರ್ಕಾರವು ಅಧಿಸೂಚನೆಯ ಮೂಲಕ ಘೋಷಿಸಬಹುದಾದ ಅಂಥ ಇತರೆ ಪ್ರದೇಶಗಳು ಮತ್ತು ಅದು ಅವುಗಳನ್ನು ಒಳಗೊಳ್ಳುತ್ತದೆ;

(ಜಿ) "ಸದಸ್ಯ" ಎಂದರೆ, ಪ್ರಾಧಿಕಾರದ ಸದಸ್ಯ;

(ಎಚ್) "ವಿನಿಯಮಗಳು" ಎಂದರೆ, 38ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಪ್ರಾಧಿಕಾರದ ವಿನಿಯಮಗಳು;

## ಅಧ್ಯಾಯ – II

## ಶ್ರೀ ಮಲೈ ಮಹದೇಶ್ವರ ಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರದ ರಚನೆ ಮತ್ತು ಅದರ ಉದ್ಯೋಗಿಗಳು

**3. ಪ್ರಾಧಿಕಾರದ ರಚನೆ.**– (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೇ, ಈ ಅಧಿನಿಯಮದ ಉದ್ದೇಶಗಳಿಗಾಗಿ, ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ಸ್ಥಾಪಿಸತಕ್ಕದ್ದು.

(2) ಪ್ರಾಧಿಕಾರವು ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಮಲೈ ಮಹದೇಶ್ವರ ಬೆಟ್ಟಗಳಲ್ಲಿ ತನ್ನ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರತಕ್ಕದ್ದು.

(3) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವ, ಧಾರಣ ಮಾಡುವ ಹಾಗೂ ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(4) ಪ್ರಾಧಿಕಾರವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಮುಖ್ಯಮಂತ್ರಿಗಳು, ಇವರು ಪ್ರಾಧಿಕಾರದ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು;

(ಬಿ) ಹಿಂದು ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಇಲಾಖೆಯ ಪ್ರಭಾರದಲ್ಲಿರುವ ಸಚಿವರು, ಇವರು ಪ್ರಾಧಿಕಾರದ ಉಪಾಧ್ಯಕ್ಷರಾಗಿರತಕ್ಕದ್ದು;

(ಸಿ) ಜಿಲ್ಲೆಯ ಜಿಲ್ಲಾ ಉಸ್ತುವಾರಿ ಸಚಿವರು;

(ಡಿ) ಶ್ರೀ ಸಾಲೂರು ಮಠದ ಪೀಠಾಧಿಪತಿಗಳು, ಮಲೈ ಮಹದೇಶ್ವರ ಬೆಟ್ಟಗಳು;

(ಇ) ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರವನ್ನು ಭಾಗಶಃ ಅಥವಾ ಪೂರ್ಣವಾಗಿ ಪ್ರತಿನಿಧಿಸುವ ಹಾಗೂ ಅದರ ಎಲ್ಲೆಗಳೊಳಗೆ ತಮ್ಮ ಚುನಾವಣಾ ಕ್ಷೇತ್ರವನ್ನು ಹೊಂದಿರುವ ಸಂಸತ್ ಸದಸ್ಯರು ಮತ್ತು ರಾಜ್ಯ ವಿಧಾನಮಂಡಲದ ಸದಸ್ಯರು;

(ಎಫ್) ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಅತಿಗಣ್ಯ ವ್ಯಕ್ತಿಗಳ ಪೈಕಿ ಇಬ್ಬರನ್ನು ಮೀರದ ಸದಸ್ಯರು, ಅವರಲ್ಲಿ ಒಬ್ಬರು ಮುಖ್ಯ ಅಭಿಯಂತರರು (ಸಿವಿಲ್) ಪದವನ್ನು ಹೊಂದಿರತಕ್ಕದ್ದು;

(ಜಿ) ಸಂಪರ್ಕ ಮತ್ತು ಕಟ್ಟಡದ ಮುಖ್ಯ ಅಭಿಯಂತರರು, ಲೋಕೋಪಯೋಗಿ ಇಲಾಖೆ;

(ಎಚ್) ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ;

(ಐ) ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯದತ್ತಿಗಳು, ಕಂದಾಯ ಇಲಾಖೆ, ಇದರ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ;

(ಜೆ) ಕಾರ್ಯದರ್ಶಿಯು ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳು, ಬೆಂಗಳೂರು;

(ಕೆ) ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ;

(ಎಲ್) ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತಿ, ಚಾಮರಾಜನಗರ ಜಿಲ್ಲೆ;

(ಎಂ) ನಿರ್ದೇಶಕರು, ಪುರಾತತ್ವ ಶಾಸ್ತ್ರ ಮತ್ತು ವಸ್ತು ಸಂಗ್ರಹಾಲಗಳ ಇಲಾಖೆ, ಮೈಸೂರು;

(ಎನ್) ಪ್ರಾಧಿಕಾರದ ಕಾರ್ಯದರ್ಶಿ, ಇವರು ಸದಸ್ಯ-ಕಾರ್ಯದರ್ಶಿಯಾಗಿರತಕ್ಕದ್ದು.

**4. ಪದಾವಧಿ ಮತ್ತು ಸೇವಾ ಷರತ್ತುಗಳು.**– (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಸರ್ಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು:

ಪರಂತು, ಶ್ರೀ ಸಾಲೂರು ಮಠದ ಪೀಠಾಧಿಪತಿಗಳು ಶಾಶ್ವತ ಸದಸ್ಯರಾಗಿರತಕ್ಕದ್ದು.

(2) ಯಾವೊಬ್ಬ ಸರ್ಕಾರೇತರ ಸದಸ್ಯನು ತನ್ನ ಸಹಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಬರೆಯುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು ಆದರೆ ತನ್ನ ರಾಜೀನಾಮೆಯು ಅಂಗೀಕಾರವಾಗುವವರೆಗೂ ಪದದಲ್ಲಿ ಮುಂದುವರೆಯತಕ್ಕದ್ದು.

(3) ನಿಯಮಿಸಬಹುದಾದ ಅಂಥ ಭತ್ಯೆಗಳನ್ನು ಸರ್ಕಾರೇತರ ಸದಸ್ಯರು ಪಡೆಯತಕ್ಕದ್ದು.

**5. ಸದಸ್ಯತ್ವಕ್ಕೆ ಅನರ್ಹತೆಗಳು.**– ಒಬ್ಬ ವ್ಯಕ್ತಿಯು,–

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಬಿ) ಅಸ್ವಸ್ಥ ಚಿತ್ತದವನಾಗಿದ್ದರೆ ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ಒಂದು ನಿಕಾಯ ಅಥವಾ ನಿಗಮದ ಸೇವೆಯಿಂದ ತೆಗೆದು ಹಾಕಲಾದ ವ್ಯಕ್ತಿಯಾಗಿದ್ದರೆ ಅಥವಾ ವಜಾ ಮಾಡಲಾದ ವ್ಯಕ್ತಿಯಾಗಿದ್ದರೆ; ಅಥವಾ

(ಇ) ಪ್ರಾಧಿಕಾರದ ಆದೇಶದಿಂದ ಮಾಡಲಾದ ಯಾವುದೇ ಕಾಮಗಾರಿಯಲ್ಲಿ ಅಥವಾ ಪ್ರಾಧಿಕಾರದೊಡನೆ ಅಥವಾ ಅದರ ಅಡಿಯಲ್ಲಿ ಅಥವಾ ಅದರ ಮೂಲಕ ಅಥವಾ ಅದರ ಪರವಾಗಿ ಮಾಡಿಕೊಂಡ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವಯಂ ತಾನೇ ಅಥವಾ ಒಬ್ಬ ಪಾಲುದಾರನ ಅಥವಾ ಏಜೆಂಟನ ಮೂಲಕ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ

(ಎಫ್) ಪ್ರಾಧಿಕಾರದ ಪರವಾಗಿ, ವೇತನ ಪಡೆಯುವ ನ್ಯಾಯವಾದಿಯಾಗಿ ನಿಯೋಜಿತನಾಗಿದ್ದರೆ ಅಥವಾ ಪ್ರಾಧಿಕಾರದ ವಿರುದ್ಧವಾಗಿ ನ್ಯಾಯವಾದಿಯ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ,

-ಅವನು ಸದಸ್ಯನಾಗಿ ನೇಮಕ ಹೊಂದಲು ಅಥವಾ ಸದಸ್ಯನಾಗಿರಲು ಅನರ್ಹನಾಗತಕ್ಕದ್ದು:

ಪರಂತು, ಒಬ್ಬ ವ್ಯಕ್ತಿಯು, ಪ್ರಾಧಿಕಾರದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ಜಾಹೀರಾತನ್ನು ಪ್ರಕಟಿಸಿರುವ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂಬ ಕಾರಣ ಮಾತ್ರದಿಂದಲೇ (1)ನೇ ಉಪಪ್ರಕರಣದ (ಇ) ಖಂಡದ ಅಡಿಯಲ್ಲಿ ಅನರ್ಹನಾಗತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥ ವ್ಯಾಪ್ತಿಯಲ್ಲಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಯಾವುದೇ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆಂದು ಭಾವಿಸತಕ್ಕದ್ದಲ್ಲ.

**6. ಸದಸ್ಯನನ್ನು ತೆಗೆದು ಹಾಕುವುದು.**- (1) ರಾಜ್ಯ ಸರ್ಕಾರವು ಸದಸ್ಯರೊಬ್ಬರನ್ನು, ಆತನು,-

(ಎ) 5ನೇ ಪ್ರಕರಣದಲ್ಲಿ ಹೇಳಲಾದ ಅನರ್ಹತೆಗಳಲ್ಲಿ ಯಾವುದೇ ಅನರ್ಹತೆಗೆ ಒಳಪಟ್ಟರೆ:

ಪರಂತು ಯಾವ ಸದಸ್ಯರನ್ನೂ, ಆತ ಆ ಪ್ರಕರಣದ (1)ನೇ ಉಪ ಪ್ರಕರಣದ (ಇ) ಖಂಡದಲ್ಲಿ ಹೇಳಲಾದ ಅನರ್ಹತೆಗೆ ಒಳಗಾಗಿದ್ದಾನೆಂಬ ಕಾರಣದ ಮೇಲೆ, ಸದರಿ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಅವನಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ತೆಗೆದು ಹಾಕತಕ್ಕದ್ದಲ್ಲ; ಅಥವಾ

(ಬಿ) ಕಾರ್ಯ ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯವನ್ನು ನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಸಿ) ಗೈರು ಹಾಜರಾಗಲು ಪ್ರಾಧಿಕಾರದ ಅನುಮತಿಯನ್ನು ಪಡೆಯದೆ ಪ್ರಾಧಿಕಾರದ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ:

ಪರಂತು, ಈ ಖಂಡವು ಪದನಿಮಿತ್ತ ಸದಸ್ಯರಿಗೆ ಅನ್ವಯವಾಗತಕ್ಕದ್ದಲ್ಲ; ಅಥವಾ

(ಡಿ) ಆತನನ್ನು ಆ ಪದದಲ್ಲಿ ಮುಂದುವರಿಸಿದರೆ, ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವಂತೆ ತನ್ನ ಸ್ಥಾನವನ್ನು ಆತ ದುರುಪಯೋಗಪಡಿಸಿಕೊಳ್ಳುವನೆಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ,

- ಆತನನ್ನು ಸದಸ್ಯ ಸ್ಥಾನದಿಂದ ತೆಗೆದುಹಾಕತಕ್ಕದ್ದು:

ಪರಂತು, ಯಾವ ಸದಸ್ಯನನ್ನೂ ಆತನಿಗೆ ಸದರಿ ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ಹೊರತು, ಈ ಖಂಡದ ಅಡಿಯಲ್ಲಿ ತೆಗೆದು ಹಾಕತಕ್ಕದ್ದಲ್ಲ.

**7. ಮರು ನೇಮಕಾತಿಗೆ ಅರ್ಹತೆ.**- ಸದಸ್ಯತ್ವ ಕೊನೆಗೊಂಡ ಯಾವೊಬ್ಬ ವ್ಯಕ್ತಿಯು, 5ನೇ ಪ್ರಕರಣದಲ್ಲಿ ಹೇಳಲಾದ ಅನರ್ಹತೆಗೊಳಗಾಗಿದ್ದಾಗ ಹೊರತು, ಸದಸ್ಯನಾಗಿ ಮರುನೇಮಕ ಹೊಂದಲು ಅರ್ಹನಾಗಿರತಕ್ಕದ್ದು.

**8. ಪ್ರಾಧಿಕಾರದ ಅಧಿಕಾರಗಳು.**- (1) ಇತರ ಯಾವುದೇ ಪ್ರಾಧಿಕಾರದ ಮೂಲಕ ನೆರವೇರಿಸಬೇಕೆಂದು ಅಧಿಯಮದಲ್ಲಿ ನಿರ್ದಿಷ್ಟವಾಗಿ ತಿಳಿಸಿದ ಅಂಥ ಯಾವುದೇ ಕಾರ್ಯವನ್ನು ನೆರವೇರಿಸುವುದನ್ನು ಹೊರತುಪಡಿಸಿ, ಪ್ರಾಧಿಕಾರವು, ಈ ಅಧಿನಿಯಮದ ಆಶಯಗಳು ಮತ್ತು ಉಪಬಂಧಗಳನ್ನು ಜಾರಿಗೆ ತರಲು ತಾನು ಅವಶ್ಯವೆಂದು ಅಭಿಪ್ರಾಯ ಪಡುವಂಥ ಯಾವುವೇ ಕಾರ್ಯಗಳನ್ನು ಮಾಡಲು ಸಾಮಾನ್ಯವಾಗಿ ಅಧಿಕಾರ ಹೊಂದಿರತಕ್ಕದ್ದು.

(2) (1)ನೇ ಉಪಪ್ರಕರಣದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಪ್ರಾಧಿಕಾರವು,-

(ಎ) ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು, ಈ ಅಧಿನಿಯಮದ ಯಾವುದೇ ಉದ್ದೇಶವನ್ನು ನೆರವೇರಿಸಲು ಅವಶ್ಯಕ ಅಥವಾ ಯುಕ್ತವೆಂದು ತಾನು ಪರಿಗಣಿಸುವಂಥ ಎಲ್ಲ ಕರಾರುಗಳನ್ನು ಮಾಡಿಕೊಳ್ಳಲು ಮತ್ತು ನಿರ್ವಹಿಸಲು ಅಧಿಕಾರ ಹೊಂದಿರತಕ್ಕದ್ದು ಮತ್ತು ಪ್ರತಿಯೊಂದು ಕರಾರನ್ನು ಪ್ರಾಧಿಕಾರದ ಪರವಾಗಿ ಕಾರ್ಯದರ್ಶಿಯು ಮಾಡಿಕೊಳ್ಳತಕ್ಕದ್ದು:

ಪರಂತು, ಐದು ಲಕ್ಷ ರೂಪಾಯಿ ಅಥವಾ ಅದಕ್ಕೂ ಹೆಚ್ಚು ವೆಚ್ಚವನ್ನೊಳಗೊಳ್ಳುವ ಯಾವ ಕರಾರನ್ನೂ ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿ ಇಲ್ಲದೆ ಮಾಡಿಕೊಳ್ಳತಕ್ಕದ್ದಲ್ಲ.

(ಬಿ) ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಮತ್ತು ಈ ಸಂಬಂಧವಾಗಿ ನಿಯಮಿಸಬಹುದಾದಂಥ ಷರತ್ತುಗಳಿಗೊಳಪಟ್ಟು, ಈ ಅಧಿನಿಯಮದ ಉದ್ದೇಶಗಳಿಗಾಗಿ ಕಾಲಕಾಲಕ್ಕೆ ಅಗತ್ಯವಾಗುವ ಯಾವುದೇ ಮೊಬಲಗನ್ನು ಸಾಲವಾಗಿ ಪಡೆಯಲು;

(ಸಿ) 36ನೇ ಪ್ರಕರಣಕ್ಕೆ ಒಳಪಟ್ಟು ಮತ್ತು ನಿಯಮಿಸಬಹುದಾದ ಅಂಥ ನಿರ್ಬಂಧಗಳು, ಷರತ್ತುಗಳು ಮತ್ತು ಪರಿಮಿತಿಗಳಿಗೆ ಒಳಪಟ್ಟು ತನಗೆ ಸೇರಿದ ಚರ ಅಥವಾ ಸ್ಥಿರ ಸ್ವತ್ತನ್ನು ಗುತ್ತಿಗೆ, ಮಾರಾಟ ಅಥವಾ ಇತರ ರೀತಿಯಲ್ಲಿ ವರ್ಗಾವಣೆ ಮಾಡಲು ಮತ್ತು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಯಾವುದೇ ಅಭಿವೃದ್ಧಿ ಯೋಜನೆಯ ಉದ್ದೇಶಕ್ಕಾಗಿ ತನ್ನಲ್ಲಿ ನಿಹಿತವಾಗಿರುವ ಅಥವಾ ತಾನು ಆರ್ಜಿಸಿದ್ದ ಯಾವುದೇ ಭೂಮಿಯನ್ನು, ಮೈದಾನಗಳನ್ನು ರೂಪಿಸುವ ಅಥವಾ ಕಟ್ಟಡ ನಿರ್ಮಿಸುವ ಉದ್ದೇಶಗಳಿಗಾಗಿ ಅಥವಾ ಯಾವುದೇ ಇತರ ರೀತಿಯಲ್ಲಿ ವಿನಿಯೋಗಿಸಲು ಅಥವಾ ಬಳಸಲು,

- ಅಧಿಕಾರವನ್ನು ಹೊಂದಿರತಕ್ಕದ್ದು.

**9. ಪ್ರಾಧಿಕಾರದ ಉಪ-ಸಮಿತಿ.**- (1) ಪ್ರಾಧಿಕಾರವು, ಯಾವುದೇ ನಿರ್ದಿಷ್ಟ ಉದ್ದೇಶಕ್ಕಾಗಿ, ಕಾರ್ಯದರ್ಶಿಯು ಅಧ್ಯಕ್ಷರಾಗಿರುವ ಮತ್ತು ಪ್ರಾಧಿಕಾರದ ಸದಸ್ಯರುಗಳ ಪೈಕಿ ಐವರಿಗೆ ಮೀರದಂತೆ ಇತರ ಸದಸ್ಯರಿರುವ ಒಂದು ಉಪ-ಸಮಿತಿಯನ್ನು ರಚಿಸಬಹುದು.

(2) ಉಪ-ಸಮಿತಿಯು, ಪ್ರಾಧಿಕಾರವು ಪ್ರತ್ಯಾಯೋಜಿಸಿದಂಥ ಪ್ರಾಧಿಕಾರದ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

(3) ಉಪ-ಸಮಿತಿಯು ತಿಂಗಳಿಗೆ ಕನಿಷ್ಠಪಕ್ಷ ಒಂದು ಸಲವಾದರೂ ಸಭೆ ಸೇರತಕ್ಕದ್ದು ಮತ್ತು ವಿನಿಯಮಗಳಿಂದ ಉಪಬಂಧಿಸಬಹುದಾದಂತೆ ಅದರ ಸಭೆಯ ಕಾರ್ಯಕಲಾಪಗಳಿಗೆ ಸಂಬಂಧಿಸಿದ ಅಂಥ ಪ್ರಕ್ರಿಯಾ ನಿಯಮಗಳನ್ನು ಪಾಲಿಸತಕ್ಕದ್ದು.

**10. ಕಾರ್ಯದರ್ಶಿಯ ನೇಮಕಾತಿ.**- (1) ರಾಜ್ಯ ಸರ್ಕಾರವು, ಧರ್ಮಾದಾಯ ಇಲಾಖೆಯ ಗ್ರೂಪ್-ಎ ಹಿರಿಯ ಶ್ರೇಣಿ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯನ್ನು ಪ್ರಾಧಿಕಾರದ ಕಾರ್ಯದರ್ಶಿಯಾಗಿ ನೇಮಿಸತಕ್ಕದ್ದು.

(2) ಕಾರ್ಯದರ್ಶಿಯು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ವೇತನ ಮತ್ತು ಇತರ ಭತ್ಯೆಗಳನ್ನು ಪಡೆಯತಕ್ಕದ್ದು.

(3) ರಾಜ್ಯ ಸರ್ಕಾರವು, ಕಾಲಕಾಲಕ್ಕೆ ತಾನು ಯುಕ್ತವೆಂದು ಭಾವಿಸುವ ಅಂಥ ಅವಧಿಗೆ ಕಾರ್ಯದರ್ಶಿಗೆ ರಜೆಯನ್ನು ಮಂಜೂರು ಮಾಡಬಹುದು.

**11. ಕಾರ್ಯದರ್ಶಿಯ ಅಧಿಕಾರಗಳು ಮತ್ತು ಕರ್ತವ್ಯಗಳು.**- (1) ಕಾರ್ಯದರ್ಶಿಯು, ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಾಹಣಾ ಅಧಿಕಾರಿ ಮತ್ತು ಆಡಳಿತಾಧಿಕಾರಿಯಾಗಿರತಕ್ಕದ್ದು.

(2) ಕಾರ್ಯದರ್ಶಿಯು, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ತನಗೆ ಪ್ರದತ್ತವಾಗಿರುವಂಥ ಪ್ರಕಾರ್ಯಗಳನ್ನು ನೆರವೇರಿಸುವುದರ ಜೊತೆಗೆ,-

(ಎ) ಪ್ರಾಧಿಕಾರದ ನಿರ್ಣಯಗಳನ್ನು ಕಾರ್ಯಗತಗೊಳಿಸತಕ್ಕದ್ದು;

(ಬಿ) ಪ್ರಾಧಿಕಾರದ ವ್ಯವಹಾರಗಳನ್ನು ನಡೆಸತಕ್ಕದ್ದು ಮತ್ತು ಪತ್ರ ವ್ಯವಹಾರಗಳನ್ನು ನಿರ್ವಹಿಸಿಕೊಂಡು ಬರತಕ್ಕದ್ದು;

(ಸಿ) ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದ ಅಂಥ ಯೋಜನೆಗಳನ್ನು ಮತ್ತು ಕಾಮಗಾರಿಗಳನ್ನು ನೆರವೇರಿಸಿ ಕಾರ್ಯಗತಗೊಳಿಸತಕ್ಕದ್ದು ಮತ್ತು ಆ ಬಗ್ಗೆ ಅವಶ್ಯವಾಗುವ ವೆಚ್ಚಗಳನ್ನು ಮಾಡತಕ್ಕದ್ದು;

(ಡಿ) ಪ್ರಾಧಿಕಾರದ ಯೋಜನೆಗಳನ್ನು ಅನುಷ್ಠಾನಗೊಳಿಸತಕ್ಕದ್ದು;

(ಇ) ಪ್ರಾಧಿಕಾರದ ಲೆಕ್ಕಪತ್ರಗಳ ವ್ಯವಹಾರ ನಡೆಸತಕ್ಕದ್ದು ಮತ್ತು ಪ್ರಾಧಿಕಾರದ ಲೆಕ್ಕಪತ್ರಗಳನ್ನು ನಿರ್ವಹಿಸಲು ಜವಾಬ್ದಾರರಾಗಿರತಕ್ಕದ್ದು;

(ಎಫ್) ಪ್ರಾಧಿಕಾರದ ಅಧಿಕಾರಿಗಳು ಮತ್ತು ನೌಕರರ ಮೇಲೆ, ಕಾರ್ಯನಿರ್ವಹಣೆ, ಆಡಳಿತ ವಿಷಯಗಳ ಸಂಬಂಧದಲ್ಲಿ ಮತ್ತು ಅಂಥ ಅಧಿಕಾರಿಗಳು ಮತ್ತು ನೌಕರರ ಸೇವಾ ವಿಷಯಗಳು ಹಾಗೂ ಅವರ ವೇತನ ಮತ್ತು ಭತ್ಯೆಗಳನ್ನು ವಿನಿಯಮನಗೊಳಿಸುವ ಬಗ್ಗೆ ಮೇಲ್ವಿಚಾರಣೆ ಹಾಗೂ ನಿಯಂತ್ರಣವನ್ನು ಹೊಂದಿರತಕ್ಕದ್ದು;

(ಜಿ) ಪ್ರಾಧಿಕಾರದ ನಡವಳಿಗಳ ಸಂಕ್ಷಿಪ್ತ ಟಿಪ್ಪಣಿಗಳ ಮತ್ತು ಯಾವುದೇ ವಿವರಪತ್ರದ ಪ್ರತಿಯನ್ನು ಅಥವಾ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಕೋರಬಹುದಾದ ಇತರ ಮಾಹಿತಿಯನ್ನು ರಾಜ್ಯ ಸರ್ಕಾರಕ್ಕೆ ಒದಗಿಸತಕ್ಕದ್ದು;

(ಎಚ್) ಈ ಅಧಿನಿಯಮದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಅದರಡಿಯಲ್ಲಿ ತನಗೆ ಪ್ರದತ್ತವಾಗುವಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**12. ಪ್ರಾಧಿಕಾರದ ನೌಕರರು.**- (1) ನಿಯಮಿಸಬಹುದಾದ ಅಂಥ ನಿಯಮಗಳಿಗೊಳಪಟ್ಟು, ಪ್ರಾಧಿಕಾರವು, ಅಧಿನಿಯಮದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಅದು ಅವಶ್ಯಕವೆಂದು ಭಾವಿಸುವಂಥ ಸಂಖ್ಯೆಯ ನೌಕರರನ್ನು ನೇಮಕ ಮಾಡಿಕೊಳ್ಳಬಹುದು:

ಪರಂತು, ಶ್ರೀ ಮಲೈ ಮಹದೇಶ್ವರ ಸ್ವಾಮಿ ದೇವಸ್ಥಾನದ ಅರ್ಚಕರನ್ನು ಒಳಗೊಂಡಂತೆ ಅಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997 (2001ರ ಕರ್ನಾಟಕ ಅಧಿನಿಯಮ 3) ಮತ್ತು ಅದರಡಿಯಲ್ಲಿ ಮಾಡಲಾದ ನಿಯಮಗಳ ಉಪಬಂಧಗಳ ನಿಯಂತ್ರಣಕ್ಕೊಳಪಟ್ಟಿರತಕ್ಕದ್ದು:

ಮತ್ತು ಪರಂತು, ರಾಜ್ಯ ಸರ್ಕಾರವು ಕರ್ನಾಟಕ ರಾಜ್ಯ ಲೆಕ್ಕಪತ್ರ ಇಲಾಖೆಯಿಂದ "ಎ" ಗುಂಪಿನ ಕಿರಿಯ ವೇತನ ಶ್ರೇಣಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯನ್ನು ಪ್ರತಿನಿಯೋಜನೆಯ ಮೇಲೆ ಹಣಕಾಸು ಮತ್ತು ಲೆಕ್ಕಪತ್ರ ಸಲಹೆಗಾರರಾಗಿ ನೇಮಕ ಮಾಡತಕ್ಕದ್ದು.

(2) ಹಣಕಾಸು ಮತ್ತು ಲೆಕ್ಕಪತ್ರ ಸಲಹೆಗಾರರು ಕಾರ್ಯದರ್ಶಿಯ ಅಧೀನದಲ್ಲಿ ಕೆಲಸ ಮಾಡತಕ್ಕದ್ದು ಮತ್ತು ಅವರು ಹಣಕಾಸು ನಿಯಮಗಳನ್ನು ಪಾಲಿಸಿಕೊಂಡು ಬರುವಂತೆ ಹಾಗೂ ಪ್ರಾಧಿಕಾರದ ಹಣಕಾಸು ವ್ಯವಹಾರಗಳ ಬಗ್ಗೆ ವಾಸ್ತವಿಕವಾದ ಹಾಗೂ ನ್ಯಾಯವಾದ ಚಿತ್ರಣವನ್ನು ನೀಡುವಂತೆ ಲೆಕ್ಕಪತ್ರಗಳನ್ನು ಅಂದಂದಿನವರೆಗೆ ನಿರ್ವಹಿಸಿಕೊಂಡು ಬರುವಂತೆ ನೋಡಿಕೊಳ್ಳತಕ್ಕದ್ದು.

(3) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ನೌಕರರ ವೇತನಗಳು, ಭತ್ಯೆಗಳು ಮತ್ತು ಇತರ ಸೇವಾ ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಕಾರ್ಯದರ್ಶಿಯು, ಪ್ರಾಧಿಕಾರದ ನೌಕರರಿಗೆ ಸಂಬಂಧಿಸಿದಂತೆ ನೇಮಕಾತಿ ಮತ್ತು ಶಿಸ್ತುಪ್ರಾಧಿಕಾರಿಯಾಗಿರತಕ್ಕದ್ದು ಮತ್ತು ಪ್ರಾಧಿಕಾರದ ಸಿಬ್ಬಂದಿಯ ಮೇಲೆ ಸಾಮಾನ್ಯ ನಿಯಂತ್ರಣ ಮತ್ತು ಮೇಲ್ವಿಚಾರಣೆಯನ್ನು ಹೊಂದಿರತಕ್ಕದ್ದು.

**13. ಪ್ರಾಧಿಕಾರದ ಅಡಿಯಲ್ಲಿನ ಸೇವೆಗೆ ಸಾಮಾನ್ಯ ಅನರ್ಹತೆಗಳು.**- ಯಾವೊಬ್ಬ ವ್ಯಕ್ತಿಯೂ, ಪ್ರಾಧಿಕಾರದ ಅಧಿಕಾರಿ ಅಥವಾ ನೌಕರನಾಗಿ ಅಲ್ಲದೆ, ಖುದ್ದಾಗಿ ಅಥವಾ ತನ್ನ ಪಾಲುದಾರನ ಮೂಲಕ ಅಥವಾ ತನ್ನ ಏಜಂಟನ ಮೂಲಕ ಪ್ರಾಧಿಕಾರದ ಯಾವುದೇ ಷೇರನ್ನು ಅಥವಾ ಪ್ರಾಧಿಕಾರವು ಮಾಡಿಕೊಂಡ ಇಲ್ಲವೇ ಅದರ ಪರವಾಗಿ ಮಾಡಿಕೊಂಡ ಯಾವುದೇ ಕರಾರಿನಲ್ಲಿ ಅಥವಾ ಪ್ರಾಧಿಕಾರದ ಅಡಿಯಲ್ಲಿನ ಯಾವುದೇ ನಿಯೋಜನೆಯಲ್ಲಿ ಹಿತಾಸಕ್ತಿಯನ್ನು ಹೊಂದಿದ್ದರೆ ಆತನು ಪ್ರಾಧಿಕಾರದ ಅಧಿಕಾರಿ ಅಥವಾ ನೌಕರನಾಗತಕ್ಕದ್ದಲ್ಲ ಅಥವಾ ಹಾಗೆ ಉಳಿಯತಕ್ಕದ್ದಲ್ಲ.

**14. ಪ್ರಾಧಿಕಾರದ ಸಭೆಗಳು.-** (1) ಕಾರ್ಯದರ್ಶಿಯು, ಅಧ್ಯಕ್ಷರ ಪೂರ್ವಾನುಮತಿಯೊಂದಿಗೆ ಮತ್ತು ಅಧ್ಯಕ್ಷರು ಯುಕ್ತವೆಂದು ಭಾವಿಸಬಹುದಾದ ಅಂಥ ಅವಧಿಗಳ ಅಂತರದಲ್ಲಿ ಮತ್ತು ಅಧ್ಯಕ್ಷರು ನಿರ್ಧರಿಸಬಹುದಾದಂಥ ಸ್ಥಳದಲ್ಲಿ ಪ್ರಾಧಿಕಾರದ ಸಭೆಗಳನ್ನು ನಡೆಸತಕ್ಕದ್ದು:

ಪರಂತು, ಪ್ರಾಧಿಕಾರವು ಒಂದು ಕ್ಯಾಲೆಂಡರ್ ವರ್ಷದಲ್ಲಿ ಕನಿಷ್ಠ ಪಕ್ಷ ಎರಡು ಬಾರಿಯಾದರೂ ಸಭೆ ಸೇರತಕ್ಕದ್ದು.

(2) ಪ್ರತಿಯೊಂದು ಸಭೆಯಲ್ಲೂ ಅಧ್ಯಕ್ಷರು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಯಾವುದೇ ಕಾರಣದಿಂದಾಗಿ ಅಧ್ಯಕ್ಷರಿಗೆ ಯಾವುದೇ ಸಭೆಗೆ ಹಾಜರಾಗಲು ಸಾಧ್ಯವಾಗದಿದ್ದರೆ, ಉಪಾಧ್ಯಕ್ಷರು ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು. ಅಧ್ಯಕ್ಷರನ್ನು ಒಳಗೊಂಡಂತೆ ಒಟ್ಟು ಸದಸ್ಯರ ಮೂರನೇ ಒಂದರಷ್ಟು ಸಭೆಯ ಕೋರಂ ಆಗಿರತಕ್ಕದ್ದು.

(3) ಪ್ರಾಧಿಕಾರದ ತೀರ್ಮಾನಗಳನ್ನು, ಹಾಜರಿದ್ದು ಮತ ಹಾಕುವ ಸದಸ್ಯರ ಅವಿರೋಧ ಸಮ್ಮತಿಸೂಚಕ ಮತದ ಮೂಲಕ ಕೈಗೊಳ್ಳತಕ್ಕದ್ದು. ಪ್ರಾಧಿಕಾರದ ಮುಂದೆ ತೀರ್ಮಾನಕ್ಕಾಗಿ ಬಂದ, ಯಾವುದೇ ನಿರ್ದಿಷ್ಟ ವಿಷಯದ ಬಗ್ಗೆ ಯಾವುವೇ ಭಿನ್ನಾಭಿಪ್ರಾಯಗಳಿದ್ದಲ್ಲಿ, ಕಾರ್ಯದರ್ಶಿಯು ಆ ವಿಷಯವನ್ನು ರಾಜ್ಯಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಅಂಥ ವಿಷಯಗಳ ಬಗ್ಗೆ ರಾಜ್ಯಸರ್ಕಾರದ ತೀರ್ಮಾನವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು.

(4) ಕಾರ್ಯದರ್ಶಿಯು ಪ್ರಾಧಿಕಾರದ ತೀರ್ಮಾನಗಳನ್ನು ಕಾರ್ಯಗತಗೊಳಿಸತಕ್ಕದ್ದು:

ಪರಂತು, ಪ್ರಾಧಿಕಾರದ ಯಾವುದೇ ನಿರ್ಣಯವು ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಉಪಬಂಧವನ್ನು ಅಥವಾ ಈ ಅಧಿನಿಯಮದ ಅಥವಾ ಇತರ ಯಾವುದೇ ಕಾನೂನಿನ ಅಡಿಯಲ್ಲಿ ರಚಿಸಲಾದ ಅಥವಾ ಹೊರಡಿಸಿದ ಯಾವುದೇ ನಿಯಮ ಅಥವಾ ಅಧಿಸೂಚನೆ ಅಥವಾ ವಿನಿಯಮಗಳ ಉಪಬಂಧಗಳನ್ನು ಅಥವಾ ರಾಜ್ಯಸರ್ಕಾರವು ಹೊರಡಿಸಿದ ಯಾವುದೇ ಆದೇಶವನ್ನು ಉಲ್ಲಂಘಿಸುತ್ತದೆಯೆಂದು ಅಥವಾ ಪ್ರಾಧಿಕರದ ಹಿತಾಸಕ್ತಿಗೆ ಅಥವಾ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರದ ಅಭಿವೃದ್ಧಿ ಮತ್ತು ನಿರ್ವಹಣೆಗೆ ಧಕ್ಕೆ ಉಂಟುಮಾಡುತ್ತದೆ ಅಥವಾ ಹಾನಿಕರವಾಗುತ್ತದೆಂದು ಕಾರ್ಯದರ್ಶಿಯು ಭಾವಿಸಿದರೆ, ಅವರು ನಿರ್ಣಯವನ್ನು ಅನುಮೋದಿಸಲಾದ ಹದಿನೈದು ದಿನಗಳ ಒಳಗಾಗಿ, ವಿಷಯದ ಬಗ್ಗೆ ಆದೇಶಗಳನ್ನು ಕೋರಿ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು ಮತ್ತು ಪ್ರಾಧಿಕಾರದ ಮುಂದಿನ ಸಭೆಯಲ್ಲಿ ತಾನು ಕೈಗೊಂಡ ಕ್ರಮದ ಬಗ್ಗೆ ಪ್ರಾಧಿಕಾರಕ್ಕೆ ತಿಳಿಸತಕ್ಕದ್ದು ಮತ್ತು ಕಾರ್ಯದರ್ಶಿರು ಕಳುಹಿಸಿಕೊಟ್ಟ ಅಂಥ ವಿಷಯದ ಬಗ್ಗೆ ರಾಜ್ಯ ಸರ್ಕಾರವು ಆದೇಶವನ್ನು ನೀಡುವವರೆಗೆ, ಕಾರ್ಯದರ್ಶಿಯು ಆ ನಿರ್ಣಯವನ್ನು ಜಾರಿಗೆ ತರಲು ಬದ್ಧರಲ್ಲ.

(5) ಪ್ರಾಧಿಕಾರವು, ಈ ಅಧಿನಿಯಮದ ಮತ್ತು ಕರ್ನಾಟಕ ಹಿಂದು ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001ರ ಕರ್ನಾಟಕ ಅಧಿನಿಯಮ 33) ಮತ್ತು ಕರ್ನಾಟಕ ಹಿಂದು ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಗಳು, 2002ರ ಉಪಬಂಧಗಳಿಗೆ ಅಸಂಗತವಾಗದಂತೆ, ವಿನಿಯಮಗಳ ಮೂಲಕ ತನ್ನ ಸಭೆಗಳ ಕಾರ್ಯಕಲಾಪಗಳಿಗೆ ಸಂಬಂಧಪಟ್ಟಂತೆ, ಕಾರ್ಯವಿಧಾನಗಳನ್ನು ಗೊತ್ತುಪಡಿಸಬಹುದು.

**15. ವ್ಯವಹರಣೆಗಳು ಸರಿಯಾದುದೆಂದು ಮತ್ತು ಊರ್ಜಿತವಾದುದೆಂದು ಪೂರ್ವಭಾವನೆ ಮಾಡುವುದು.-** ಸದಸ್ಯರಾಗಿ ಕಾರ್ಯನಿರ್ವಹಿಸುವ ಯಾವೊಬ್ಬ ವ್ಯಕ್ತಿಯ ಅನರ್ಹತೆ ಅಥವಾ ನೇಮಕಾತಿಯಲ್ಲಿನ ನ್ಯೂನತೆಯು, ಪ್ರಾಧಿಕಾರದ ಯಾವುದೇ ಕೃತ್ಯ ಅಥವಾ ನಡವಳಿಯು ಅನ್ಯಥಾ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿದ್ದರೆ, ಅಂಥ ಕೃತ್ಯ ಅಥವಾ ವ್ಯವಹರಣೆಯನ್ನು ದೂಷಿತಗೊಳಿಸುತ್ತದೆಯೆಂದು ಭಾವಿಸತಕ್ಕದ್ದಲ್ಲ.

**16. ಸುತ್ತೋಲೆಯ ಮೂಲಕ ಪ್ರಾಧಿಕಾರದ ತೀರ್ಮಾನಗಳನ್ನು ಸೂಚಿಸುವುದು.- (1)** ಅಧ್ಯಕ್ಷನು, ಯಾವುದೇ ಪ್ರಕರಣವನ್ನು ಪ್ರಾಧಿಕಾರದ ಒಂದು ಸಭೆಯಲ್ಲಿ ಚರ್ಚೆಗೆ ತರುವುದಕ್ಕೆ ಬದಲಾಗಿ, ಆ ಬಗ್ಗೆ ಅವರ ಅಭಿಪ್ರಾಯ ಕೋರಿ ಒಂದು ಟಿಪ್ಪಣಿಯನ್ನು ಪ್ರಾಧಿಕಾರದ ಸದಸ್ಯರ ನಡುವೆ ಪರಿಚಲನೆ ಮಾಡಿಸಲು ನಿರ್ದೇಶಿಸಬಹುದು. ಹಾಗೆ ಪರಿಚಲನೆ ಮಾಡಲಾದ ಟಿಪ್ಪಣಿಯಲ್ಲಿರುವ ಪ್ರಸ್ತಾವವನ್ನು ಎಲ್ಲ ಸದಸ್ಯರು ಅವಿರೋಧವಾಗಿ ಅನುಮೋದಿಸಿದರೆ ಅದನ್ನು ಪ್ರಾಧಿಕಾರದ ಸಮ್ಮತಿಸೂಚಕ ನಿರ್ಣಯವೆಂಬುದಾಗಿ ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಮುಂದಿನ ಕ್ರಮ ಕೈಗೊಳ್ಳತಕ್ಕದ್ದು. ಪ್ರಾಧಿಕಾರದ ತೀರ್ಮಾನಕ್ಕಾಗಿ ಪರಿಚಲನೆ ಮಾಡಲಾದ ಯಾವುದೇ ನಿರ್ದಿಷ್ಟ ವಿಷಯದ ಬಗ್ಗೆ ಯಾವುದೇ ಭಿನ್ನಾಭಿಪ್ರಾಯ ವ್ಯಕ್ತವಾದರೆ, ಕಾರ್ಯದರ್ಶಿಯು, ಆ ವಿಷಯವನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಆ ಬಗ್ಗೆ ರಾಜ್ಯಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಅಭಿಪ್ರಾಯಕ್ಕಾಗಿ ಪರಿಚಲನೆ ಮಾಡಲಾದ ಸಂದರ್ಭಗಳಲ್ಲಿ ಯಾವೊಬ್ಬ ಸದಸ್ಯರು, ಟಿಪ್ಪಣಿಯಲ್ಲಿ ನಿರ್ದಿಷ್ಟಪಡಿಸಿರುವ ದಿನಾಂಕದೊಳಗೆ ತಮ್ಮ ಅಭಿಪ್ರಾಯವನ್ನು ತಿಳಿಸಲು ತಪ್ಪಿದರೆ, ಅಂಥ ಸದಸ್ಯರು ಸುತ್ತೋಲೆ ಕಳುಹಿಸಲಾದ ಟಿಪ್ಪಣಿಯಲ್ಲಿ ಒಳಗೊಂಡ ಪ್ರಸ್ತಾವವನ್ನು ಒಪ್ಪಿಕೊಂಡಿದ್ದಾರೆಂದು ಭಾವಿಸತಕ್ಕದ್ದು.

(3) 14ನೇ ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಈ ಪ್ರಕರಣದ ಅಡಿಯಲ್ಲಿ ಪರಿಚಲನೆ ಮೂಲಕ ಕೈಗೊಂಡ, ಪ್ರಾಧಿಕಾರದ ತೀರ್ಮಾನಗಳಿಗೆ ಅನ್ವಯವಾಗತಕ್ಕದ್ದು.

(4) (1)ನೇ ಉಪಪ್ರಕರಣದ ಅಡಿಯಲ್ಲಿ ಸುತ್ತೋಲೆಗಾಗಿನ ಟಿಪ್ಪಣಿಯ ಅಂಶಗಳು. ನಿಯಮಿಸಬಹುದಾದಂತೆ ಇರತಕ್ಕದ್ದು.

**17. ಕೆಲವೊಂದು ತೀರ್ಮಾನಗಳನ್ನು ಕೈಗೊಳ್ಳಲು ಅಧ್ಯಕ್ಷರ ಅಧಿಕಾರ.-** (1) ಯಾವೊಂದು ವಿಷಯವು, 14ನೇ ಪ್ರಕರಣದ ಅಡಿಯಲ್ಲಿ ಪ್ರಾಧಿಕಾರದ ಸಭೆ ಕರೆಯಲು ಅಗತ್ಯಪಡಿಸುವಷ್ಟು ಅಥವಾ 16ನೇ ಪ್ರಕರಣದ ಅಡಿಯಲ್ಲಿ ಸುತ್ತೋಲೆಯ ಮೂಲಕ ಪ್ರಾಧಿಕಾರವು ತೀರ್ಮಾನಿಸುವವರೆಗೂ ಕಾಯಲು ಸಾಧ್ಯವಾಗದಷ್ಟು ತುರ್ತು ಸ್ವರೂಪದ್ದಾಗಿದೆಯೆಂದು ಅಧ್ಯಕ್ಷರು ಅಭಿಪ್ರಾಯಪಟ್ಟಲ್ಲಿ ಅವರು, ತಾವು ಯುಕ್ತವೆಂದು ಭಾವಿಸುವಂಥ ಆದೇಶಗಳನ್ನು ನೀಡಬಹುದು ಹಾಗೂ 14 ಮತ್ತು 16ನೇ ಪ್ರಕರಣದ ಅಡಿಯಲ್ಲಿ ಅದನ್ನು ಪ್ರಾಧಿಕಾರದ ತೀರ್ಮಾನಗಳ ರೀತಿಯಲ್ಲಿಯೇ ಅನುಷ್ಠಾನಗೊಳಿಸತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿ ಅಧ್ಯಕ್ಷನು ತೆಗೆದುಕೊಂಡ ಪ್ರತಿಯೊಂದು ತೀರ್ಮಾನವನ್ನು ಪ್ರಾಧಿಕಾರಕ್ಕೆ, ಅದರ ಮುಂದಿನ ಸಭೆಯಲ್ಲಿ ಅನುಸಮರ್ಥನೆಗಾಗಿ ವರದಿ ಮಾಡತಕ್ಕದ್ದು.

(3) ಅಧ್ಯಕ್ಷರ ತೀರ್ಮಾನವನ್ನು ಪ್ರಾಧಿಕಾರವು ಒಪ್ಪದಿದ್ದಲ್ಲಿ, ಅದನ್ನು ಸೂಕ್ತ ಆದೇಶಕ್ಕಾಗಿ, ಕಾರ್ಯದರ್ಶಿಯು ಸರ್ಕಾರಕ್ಕೆ ಕಳುಹಿಸತಕ್ಕದ್ದು.

## ಅಧ್ಯಾಯ – III

## ಕ್ಷೇತ್ರದ ಅಭಿವೃದ್ಧಿ ಮತ್ತು ನಿರ್ವಹಣೆ

**18. ದೇವಸ್ಥಾನದ ಚರ ಮತ್ತು ಸ್ಥಿರ ಸ್ವತ್ತುಗಳಿಗೆ ಸಂಬಂಧಿಸಿದ ಉಪಬಂಧ.–** (1) ದೇವಸ್ಥಾನದ ಆಭರಣಗಳೂ ಒಳಗೊಂಡಂತೆ ಚರ ಮತ್ತು ಸ್ಥಿರ ಸ್ವತ್ತುಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001ರ ಕರ್ನಾಟಕ ಅಧಿನಿಯಮ 33) ಮತ್ತು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಗಳು, 2002ರ ಉಪಬಂಧಗಳ ಅಡಿಯಲ್ಲಿ ನಿರ್ವಹಿಸುವುದನ್ನು ಮುಂದುವರೆಸತಕ್ಕದ್ದು;

(2) ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001ರ ಕರ್ನಾಟಕ ಅಧಿನಿಯಮ 33) ಮತ್ತು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಗಳು, 2002ರ ಉಪಬಂಧಗಳಿಂದ ನಿಯಂತ್ರಣವನ್ನು ಮುಂದುವರಿಸಬೇಕಾದ ಶ್ರೀ ಮಲೈ ಮಹದೇಶ್ವರ ದೇವಸ್ಥಾನ ಮತ್ತು ಅದರ ಅಧೀನ ದೇವಸ್ಥಾನಗಳ ಆಡಳಿತದಲ್ಲಿ ಪ್ರಾಧಿಕಾರವು ಹಸ್ತಕ್ಷೇಪ ಮಾಡತಕ್ಕದ್ದಲ್ಲ;

(3) ರಾಜ್ಯ ಸರ್ಕಾರವು ತಾತ್ಕಾಲಿಕ ಉಪಬಂಧಗಳನ್ನು ಮಾಡುವುದು ಯುಕ್ತವೆಂದು ಅಭಿಪ್ರಾಯಪಟ್ಟಲ್ಲಿ, ಆದೇಶದ ಮೂಲಕ ಹಾಗೆ ಮಾಡಲು ರಾಜ್ಯ ಸರ್ಕಾರವು ಸಕ್ಷಮವಾಗಿರತಕ್ಕದ್ದು.

**19. ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವುದು, ಅದರ ಅನುಮೋದನೆ ಹಾಗೂ ಅದನ್ನು ಕಾರ್ಯಗತಗೊಳಿಸುವುದು.–** (1) ಪ್ರಾಧಿಕಾರವು, ಅದರ ರಚನೆಯಾದ ಮೇಲೆ, ಆದಷ್ಟು ಬೇಗನೆ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರವನ್ನು ಅಂತಾರಾಷ್ಟ್ರೀಯ ಯಾತ್ರಾ ಸ್ಥಳವನ್ನಾಗಿ ಮತ್ತು ಸಾಂಸ್ಕೃತಿಕ ಹಾಗೂ ಪ್ರವಾಸಿ ಕೇಂದ್ರವನ್ನಾಗಿ ಮತ್ತು ಶ್ರೀ ಮಲೈ ಮಹದೇಶ್ವರಸ್ವಾಮಿ ಮತ್ತು ಇತರ ಅಧೀನ ದೇವತೆಗಳ ಪ್ರಚಾರದ ಕೇಂದ್ರವನ್ನಾಗಿ ಮಾಡಿ ಅಭಿವೃದ್ಧಿಗೊಳಿಸಲು ಯೋಜನೆಯನ್ನು ಸಿದ್ಧಪಡಿಸತಕ್ಕದ್ದು. ಅಭಿವೃದ್ಧಿ ಯೋಜನೆಯು ಈ ಮುಂದಿನವುಗಳನ್ನು ಒಳಗೊಂಡಿರಬಹುದು, ಎಂದರೆ:–

(ಎ) ಶ್ರೀ ಮಲೈ ಮಹದೇಶ್ವರಸ್ವಾಮಿ ದೇವಸ್ಥಾನದ ಮತ್ತು ಪ್ರಧಾನ ದೇವತೆಗೆ ಸಂಬಂಧಪಟ್ಟ ಇತರ ದೇವಸ್ಥಾನಗಳ ನಿರ್ವಹಣೆಗಾಗಿ ಮರುಹೊದಿಕೆ (remantling) ಕಾರ್ಯಕ್ರಮಗಳು;

(ಬಿ) ಪ್ರಾಧಿಕಾರದ ಅಭಿಪ್ರಾಯದಲ್ಲಿ ಅಭಿವೃದ್ಧಿ ಯೋಜನೆಯನ್ನು ಕಾರ್ಯಗತಗೊಳಿಸಲು ಅವಶ್ಯವಾದ ಭೂಮಿಯನ್ನು, ಭೂಸ್ವಾಧೀನ ಅಥವಾ ಖರೀದಿ, ವಿನಿಮಯದ ಮೂಲಕ ಅಥವಾ ಅನ್ಯಥಾ ಆರ್ಜಿಸುವುದಕ್ಕಾಗಿ ಪ್ರಸ್ತಾವಗಳು;

(ಸಿ) ಸಾರ್ವಜನಿಕ ಉದ್ಯಾನವನಗಳು, ಫಲಪುಷ್ಪ ತೋಟಗಳು ಅಥವಾ ಮೃಗಾಲಯಗಳು, ಕಾರಂಜಿ ಬನಗಳು, ಕೃತಕ ಜಲಪಾತಗಳು, ಕ್ರೀಡಾ ಉದ್ಯಾನವನಗಳು, ದೋಣಿ ವಿಹಾರ ಅಥವಾ ಇತರ ಜಲ ಕ್ರೀಡಾ ಸೌಲಭ್ಯವಿರುವ ಸರೋವರಗಳನ್ನು ಅಥವಾ ಇಂಥವೇ ಪ್ರವಾಸಿಗಳಿಗೆ ಆಕರ್ಷಣೆಯನ್ನುಂಟುಮಾಡುವಂಥ ಇತರ ಕೇಂದ್ರಗಳನ್ನು ನಿರ್ಮಿಸುವುದು;

(ಡಿ) ವಿವಿಧ ವರ್ಗದ ಪ್ರವಾಸಿಗರ ಅವಶ್ಯಕತೆ ಪೂರೈಸಲು ಛತ್ರಗಳು, ವಸತಿ–ಗೃಹಗಳು, ಕಾಟೇಜುಗಳು, ಹೋಟೆಲುಗಳು, ರೆಸ್ಟೋರೆಂಟುಗಳು ಮತ್ತು ಭೋಜನಾಲಯಗಳನ್ನು ನಿರ್ಮಿಸುವುದು;

(ಇ) ಅವಶ್ಯಕ ಸಾಲು ಅಂಗಡಿಗಳನ್ನು ಅಥವಾ ವಾಣಿಜ್ಯ–ಸಂಕೀರ್ಣಗಳನ್ನು ನಿರ್ಮಿಸುವುದು;

(ಎಫ್) ಆಯಕಟ್ಟಿನ ಸ್ಥಳಗಳಲ್ಲಿ ಪ್ರಾರ್ಥನಾ ಮಂದಿರಗಳ ಮತ್ತು ಧ್ಯಾನ ಮಂದಿರಗಳ ನಿರ್ಮಾಣ;

(ಜಿ) 2ನೇ ಪ್ರಕರಣದಲ್ಲಿ ಪರಿಭಾಷಿಸಲಾದಂತೆ ಸೌಕರ್ಯಗಳನ್ನು ಕಲ್ಪಿಸುವುದು;

(ಎಚ್) ಕಟ್ಟಡಗಳ ನಿರ್ಮಾಣ ಹಾಗೂ ಪುನರ್‌–ನಿರ್ಮಾಣವೂ ಸೇರಿದಂತೆ ಎಲ್ಲಾ ಅಥವಾ ಯಾವುದೇ ಭೂಮಿಯ ವಿನ್ಯಾಸ ಮತ್ತು ಮರು ವಿನ್ಯಾಸ;

(ಐ) ಚರಂಡಿ ವ್ಯವಸ್ಥೆ, ವಿದ್ಯುಚ್ಛಕ್ತಿ ಮತ್ತು ನೀರು ಪೂರೈಕೆ ಹಾಗೂ ನೈರ್ಮಲ್ಯ ವ್ಯವಸ್ಥೆಯನ್ನು ಒದಗಿಸುವುದು;

(ಜೆ) ಪ್ರಾಧಿಕಾರವು, ಸಾಧಾರಣವಾಗಿ ತನ್ನ ಯೋಜನಾ ಕಾರ್ಯಕ್ಕೆ ಅನುಕೂಲವಾಗುವಂತೆ ಮತ್ತು ಮುಖ್ಯವಾಗಿ ಉತ್ತಮ ನೀರು ಹರಿವಿನ ವ್ಯವಸ್ಥೆಯನ್ನು ಒದಗಿಸಲು, ಯಾವುದೇ ಭೂಮಿಯನ್ನು ಎತ್ತರಿಸುವುದು ಸೂಕ್ತವೆಂದು ಭಾವಿಸಿದರೆ ಅಂಥ ಭೂಮಿಯನ್ನು ಎತ್ತರಿಸುವುದು;

(ಕೆ) ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಥವಾ ಅದಕ್ಕೆ ಲಗತ್ತಾಗಿರುವ ಪ್ರದೇಶದಲ್ಲಿ ಉತ್ತಮ ಗಾಳಿ–ಬೆಳಕು ದೊರಕುವಂತೆ ಖಾಲಿ ಜಾಗಗಳನ್ನು ಬಿಡುವುದು;

(ಎಲ್) ಜನರ ವಾಸಕ್ಕೆ ಯೋಗ್ಯವಲ್ಲದ ಹಾಗೂ ಅಭಿವೃದ್ಧಿ ಯೋಜನೆಗೆ ತಕ್ಕದಲ್ಲದ ಎಲ್ಲ ಕಟ್ಟಡಗಳನ್ನು ಕೆಡವುವುದು;

(ಎಂ) ಅಡಚಣೆಯನ್ನುಂಟುಮಾಡುವ ಕಟ್ಟಡಗಳನ್ನು ಅಥವಾ ಕಟ್ಟಡಗಳ ಭಾಗಗಳನ್ನು ಕೆಡವುವುದು;

(ಎನ್) ಕಟ್ಟಡಗಳ ನಿರ್ಮಾಣ ಮತ್ತು ಪುನರ್‌ನಿರ್ಮಾಣ, ಅವುಗಳ ನಿರ್ವಹಣೆ ಮತ್ತು ಸಂರಕ್ಷಣೆ;

(ಒ) 29ನೇ ಪ್ರಕರಣದಲ್ಲಿನ ಉಪಬಂಧಗಳಿಗೆ ಒಳಪಟ್ಟು, ಯೋಜನೆಯಲ್ಲಿ ಸೇರಿರುವ ಯಾವುದೇ ಸ್ವತ್ತನ್ನು ಮಾರಾಟ ಮಾಡುವುದು, ಬಾಡಿಗೆಗೆ ಕೊಡುವುದು, ಅಥವಾ ವಿನಿಮಯ ಮಾಡಿಕೊಳ್ಳುವುದು;

(ಪಿ) ಪ್ರಾಧಿಕಾರದ ನೌಕರರಿಗೆ ವಸತಿ ಸೌಲಭ್ಯವನ್ನು ಒದಗಿಸುವುದು;

(ಕ್ಯು) ನಿಲ್ದಾಣ ಸೌಲಭ್ಯಗಳೊಂದಿಗೆ ಸಂಪರ್ಕ ಮತ್ತು ಸಾಗಣೆ ಸೌಲಭ್ಯಗಳನ್ನು ಒದಗಿಸುವುದು;

(ಆರ್) ಅಭಿವೃದ್ಧಿ ಯೋಜನೆಯ ಭೌಗೋಳಿಕ ಪ್ರದೇಶದಲ್ಲಿ ಈಗಿರುವ ಮತ್ತು ಮುಂದುವರಿಸಲು ಅನುಮತಿಸಬಹುದಾದಂಥ ಮತೀಯ ಸಂಸ್ಥೆಗಳೊಂದಿಗೆ, ಅವು ಅಭಿವೃದ್ಧಿ ಯೋಜನೆಯ ಪರಿಕಲ್ಪನೆಗೆ ಸರಿಹೊಂದುತ್ತಿರುವವರೆಗೆ ಹೊಂದಾಣಿಕೆಗಳು ಮತ್ತು ಒಪ್ಪಂದಗಳನ್ನು ಮಾಡಿಕೊಳ್ಳುವುದು;

(ಎಸ್) ಶ್ರೀ ಮಲೈ ಮಹದೇಶ್ವರ ಸ್ವಾಮಿ ಕ್ಷೇತ್ರವನ್ನು ಸಾಂಸ್ಕೃತಿಕ ಕೇಂದ್ರವಾಗಿ, ಯಾತ್ರಾ ಸ್ಥಳವಾಗಿ ಮತ್ತು ಅಂತರರಾಷ್ಟ್ರೀಯ ಪ್ರವಾಸಿ ಕೇಂದ್ರವಾಗಿ ಹಾಗೂ ಚರ್ಚಾ ಕೇಂದ್ರವಾಗಿ ಮಾಡುವ ದೃಷ್ಟಿಯಿಂದ ಹಾಗೂ ಶ್ರೀ ಮಲೈ ಮಹದೇಶ್ವರ ಸ್ವಾಮಿಗೆ ಸಂಬಂಧಪಟ್ಟ ಇತರ ಪ್ರಮುಖ ಸ್ಥಳಗಳನ್ನು ರಕ್ಷಿಸಲು ಮತ್ತು ಅಭಿವೃದ್ಧಿಪಡಿಸಲು ಉಪಬಂಧ ಕಲ್ಪಿಸುವುದು ಯುಕ್ತ ಮತ್ತು ಆನುಷಂಗಿಕವೆಂದು ಪ್ರಾಧಿಕಾರವು ಅಭಿಪ್ರಾಯ ಪಡುವ ಯಾವುದೇ ಇತರ ವಿಷಯ.

(2) (1)ನೇ ಉಪ-ಪ್ರಕರಣದ ಅಡಿಯಲ್ಲಿ ಸಿದ್ಧಪಡಿಸಲಾದ ಅಭಿವೃದ್ಧಿ ಯೋಜನೆಯನ್ನು ಕಾರ್ಯದರ್ಶಿಯು ಅನುಮೋದನೆಗಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. ರಾಜ್ಯ ಸರ್ಕಾರವು, ಮಾರ್ಪಾಟುಗಳ ಸಹಿತವಾಗಿ ಅಥವಾ ಯಾವುವೇ ಮಾರ್ಪಾಟುಗಳಿಲ್ಲದೆ ಯೋಜನೆಯನ್ನು ಅನುಮೋದಿಸಬಹುದು.

(3) (2)ನೇ ಉಪ-ಪ್ರಕರಣದ ಅಡಿಯಲ್ಲಿ ಅಭಿವೃದ್ಧಿ ಯೋಜನೆಯನ್ನು ಅನುಮೋದಿಸಿದ ತರುವಾಯ, ರಾಜ್ಯ ಸರ್ಕಾರವು, ಪ್ರಾಧಿಕಾರದ ಶಿಫಾರಸುಗಳ ಮೇಲೆ ಕಾಲ ಕಾಲಕ್ಕೆ ತಾನು ಅವಶ್ಯಕವೆಂದು ಭಾವಿಸುವಂಥ ಮಾರ್ಪಾಟುಗಳನ್ನು ಯೋಜನೆಯಲ್ಲಿ ಮಾಡಬಹುದು.

(4) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ (2000ರ ಕರ್ನಾಟಕ ಅಧಿನಿಯಮ 29) ಉಪಬಂಧಗಳಿಗೆ ಅನುಸಾರವಾಗಿ, ರಾಜ್ಯ ಸರ್ಕಾರವು ಅನುಮೋದಿಸಿದ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತ ಗೊಳಿಸುವುದಕ್ಕಾಗಿ ಕಾಮಗಾರಿಗಳನ್ನು ಕೈಗೊಳ್ಳುವ ಮತ್ತು ವೆಚ್ಚವನ್ನು ಮಾಡುವ ಅಧಿಕಾರವನ್ನು ಪ್ರಾಧಿಕಾರವು ಹೊಂದಿರತಕ್ಕದ್ದು.

**20. ಪೂರಕ ಅಭಿವೃದ್ಧಿ ಕಾರ್ಯಗಳು.–** 19ನೇ ಪ್ರಕರಣದ ಅಡಿಯಲ್ಲಿ ಅಭಿವೃದ್ಧಿ ಯೋಜನೆಯನ್ನು ಕಾರ್ಯಗತಗೊಳಿಸಿದ ತರುವಾಯ, ಪ್ರಾಧಿಕಾರವು, ಕಾಲಕಾಲಕ್ಕೆ, ತನ್ನದೇ ಆದ ಅಥವಾ ಸಾಲ ಪಡೆದ ಹಣಕಾಸಿನ ಸಂಪನ್ಮೂಲಗಳಿಂದ ಅಥವಾ ರಾಜ್ಯ ಸರ್ಕಾರದ ನಿಧಿಗಳಿಂದ ಯಾವುದೇ ಹೊಸ ಹೆಚ್ಚುವರಿ ಅಭಿವೃದ್ಧಿ ಯೋಜನೆಗಳನ್ನು ಮಾಡಬಹುದು ಅಥವಾ ಕೈಗೊಳ್ಳಬಹುದು.

**21. ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರದ ನಿರ್ವಹಣೆ.–** ರಾಜ್ಯ ಸರ್ಕಾರವು, ಪ್ರಾಧಿಕಾರದ ಶಿಫಾರಸ್ಸಿನ ಮೇಲೆ ಅಥವಾ ಅನ್ಯಥಾ, ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರದ ನಿರ್ವಹಣೆಗಾಗಿ ನಿಯಮಗಳ ಮೂಲಕ ಉಪಬಂಧಗಳನ್ನು ರಚಿಸತಕ್ಕದ್ದು. ಈ ಉಪಬಂಧಗಳಲ್ಲಿ, ಶ್ರೀ ಮಲೈ ಮಹದೇಶ್ವರ ಸ್ವಾಮಿ ದೇವಸ್ಥಾನದ ನಿರ್ವಹಣೆಯು ಸೇರಿದಂತೆ, ಶ್ರೀ ಮಲೈ ಮಹದೇಶ್ವರ ಸ್ವಾಮಿ ಕ್ಷೇತ್ರಕ್ಕೆ ಬರುವ ಭಕ್ತರು, ಯಾತ್ರಿಕರು, ಪ್ರವಾಸಿಗರು ಮತ್ತು ಇತರ ಸಂದರ್ಶಕರು ಬಳಸಿಕೊಳ್ಳಬಹುದಾದ ವಿವಿಧ ಸೌಲಭ್ಯಗಳಿಗಾಗಿ ಅವರಿಂದ ವಸೂಲು ಮಾಡಬಹುದಾದ ದರಗಳು, ಶುಲ್ಕಗಳು ಅಥವಾ ಇತರ ವೆಚ್ಚಗಳ ಸಂಗ್ರಹಣೆ ಮತ್ತು ಪ್ರಾಧಿಕಾರವು ನಿರ್ಧರಿಸಬಹುದಾದಂತೆ ಶ್ರೀ ಮಲೈ ಮಹದೇಶ್ವರ ಸ್ವಾಮಿ ಕ್ಷೇತ್ರದ ಸ್ವತ್ತಿನ ಒಡೆತನದಲ್ಲಿರುವ ವ್ಯಕ್ತಿಗಳ ಅಥವಾ ಲೈಸನ್ಸುದಾರರಿಂದ ಲೈಸನ್ಸು ಶುಲ್ಕವನ್ನು ವಿಧಿಸುವ ಮತ್ತು ಯುಕ್ತವಾದಂಥ ಅಧಿಕಾರಗಳು ವಸೂಲು ಮಾಡುವ ಅಧಿಕಾರ ಮುಂತಾದ ಇತರ ವಿಷಯಗಳನ್ನು ಒಳಗೊಂಡಿರತಕ್ಕದ್ದು.

**22. ಅಧಿಕಾರಗಳ ಪ್ರತ್ಯಾಯೋಜನೆ.–** (1) 37ನೇ ಪ್ರಕರಣದಡಿ ನಿಯಮಗಳನ್ನು ರಚಿಸುವ ಅಧಿಕಾರವನ್ನು ಹೊರತುಪಡಿಸಿ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಮೂಲಕ ಅದಕ್ಕೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು, ಯಾವುದೇ ಇತರ ಪ್ರಾಧಿಕಾರಕ್ಕೆ ಪ್ರತ್ಯಾಯೋಜಿಸಬಹುದು.

(2) 38ನೇ ಪ್ರಕರಣದಡಿಯ ವಿನಿಯಮಗಳ ರಚನಾಧಿಕಾರವನ್ನು ಹೊರತುಪಡಿಸಿ, ಪ್ರಾಧಿಕಾರವು ವಿನಿಯಮಗಳ ಮೂಲಕ, ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಮೂಲಕ ಅದಕ್ಕೆ ಪ್ರದತ್ತವಾದ ಯಾವುವೇ ಅಧಿಕಾರಗಳನ್ನು ಕಾರ್ಯದರ್ಶಿಗೆ ಅಥವಾ ಪ್ರಾಧಿಕಾರದ ಇತರ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಬಹುದು.

**23. ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ನ್ನು ಪ್ರಾಧಿಕಾರದ ಆವರಣಕ್ಕೆ ಅನ್ವಯಿಸುವುದು.–** (1) ರಾಜ್ಯ ಸರ್ಕಾರವು, (2)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಅಧಿಸೂಚನೆಯ ಮೂಲಕ, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ, ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974 (1974ರ ಕರ್ನಾಟಕ ಅಧಿನಿಯಮ 32) ಆ ಅಧಿನಿಯಮವು ಸಾರ್ವಜನಿಕ ಆವರಣಗಳಿಗೆ ಸಂಬಂಧಿಸಿ ಅನ್ವಯಿಸುವಂತೆ ಪ್ರಾಧಿಕಾರಕ್ಕೆ ಸೇರಿದ, ಅದರಲ್ಲಿ ನಿಹಿತವಾದ ಅಥವಾ ಅದು ಗುತ್ತಿಗೆಗೆ ತೆಗೆದುಕೊಂಡ ಆವರಣಕ್ಕೆ, ಅನ್ವಯಿಸತಕ್ಕದ್ದೆಂದು ಉಪಬಂಧ ಕಲ್ಪಿಸಬಹುದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಅಧಿಸೂಚನೆಯನ್ನು ಹೊರಡಿಸಿದ ತರುವಾಯ, ಮೇಲ್ಕಂಡ ಅಧಿನಿಯಮವು ಮತ್ತು ಅದರಡಿ ರಚಿಸಿದ ನಿಯಮಗಳು ಈ ಮುಂದಿನ ಮಾರ್ಪಾಡುಗಳೊಡನೆ ಪ್ರಾಧಿಕಾರಕ್ಕೆ ಸೇರಿದ ಆವರಣಗಳಿಗೆ ಅನ್ವಯವಾಗತಕ್ಕದ್ದು, ಎಂದರೆ,–

(ಎ) ರಾಜ್ಯ ಸರ್ಕಾರವು, ತಾನು ಸೂಕ್ತವೆಂದು ಭಾವಿಸುವಂತೆ ರಾಜ್ಯ ಸರ್ಕಾರದ ಅಥವಾ ಪ್ರಾಧಿಕಾರದ ಒಬ್ಬ ಅಧಿಕಾರಿಯನ್ನು ಮೇಲ್ಕಂಡ ಅಧಿನಿಯಮದ ಉದ್ದೇಶಗಳಿಗಾಗಿ ಸಕ್ಷಮ ಅಧಿಕಾರಿ ಎಂದು ನೇಮಿಸಬಹುದು;

(ಬಿ) ಆ ಅಧಿನಿಯಮದಲ್ಲಿ ಮತ್ತು ಆ ನಿಯಮಗಳಲ್ಲಿ "ಸಾರ್ವಜನಿಕ ಆವರಣ" ಕ್ಕೆ ಮಾಡಿದ ಉಲ್ಲೇಖಗಳು ಪ್ರಾಧಿಕಾರದ ಆವರಣಗಳಿಗೆ ಮಾಡಿದ ಉಲ್ಲೇಖಗಳೆಂದು ಭಾವಿಸತಕ್ಕದ್ದು.

## ಅಧ್ಯಾಯ – IV

## ಹಣಕಾಸು ಮತ್ತು ಸ್ವತ್ತು

**24. ಪ್ರಾಧಿಕಾರದ ನಿಧಿ.–** (1) ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ ನಿಧಿಯೆಂದು ಕರೆಯಲಾಗುವ ಒಂದು ನಿಧಿಯು ಇರತಕ್ಕದ್ದು.

(2) ಸದರಿ ನಿಧಿಗೆ,–

(i) ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ನಿಗಮಿತವಾದ ಇಲ್ಲವೇ ನಿಗಮಿತವಲ್ಲದ ಯಾವುದೇ ನಿಕಾಯ ಅಥವಾ ಯಾವೊಬ್ಬ ವ್ಯಕ್ತಿಯು ನೀಡಿದ ಎಲ್ಲ ಅನುದಾನಗಳು, ಧನ ಸಹಾಯ, ದೇಣಿಗೆಗಳು ಮತ್ತು ದಾನಗಳನ್ನು;

2001) and the Karnataka Hindu Religious Institutions and Charitable Endowments Rules 2002, shall prevail in so far as they relate to administration and religious practices of Sri Malai Mahadeswaraswamy temple, Malai Mahadeswara Hills, which will remain as notified institutions under the provision of the Karnataka Hindu Religious Institutions and Charitable Endowments Act, 1997 (Karnataka Act 33 of 2001) even after the commencement of this Act.

**40. Consequences of constitution of the Authority.-** Notwithstanding anything contained in this Act with effect from the date the Authority is constituted under Sri Malai Mahadeswaraswamy Kshethra Development Authority Act, 2013 such authority shall be the local planning authority for the local planning area comprising the Sri Malai Mahadeswaraswamy Kshethra and it shall exercise the powers, discharge the functions and perform the duties under this Act as if it were a local planning authority constituted for the Sri Malai Mahadeswaraswamy Kshethra.

## STATEMENT OF OBJECTS AND REASONS

It is considered necessary to enact a legislation to provide for constitution of an independent statutory Authority to undertake the work of development and maintenance of Sri Malai Mahadeswaraswamy Kshethra. The salient features of the said Bill are as follows,-

(1) Constitution of an Authority under the Chairmanship of the Chief Minister with the concerned Ministers, Members of Parliament, Legislators, non-officials and officials as members.

(2) Appointment of a Secretary who shall be the Chief Executive and Adminsitrative Officer of the Authority.

(3) Preparation of development plan for the development of Sri Malai Mahadeswaraswamy Kshethra by the Authority and its maintenance by it.

(4) Constitution of a Fund called Sri Malai Mahadeshwaraswamy Kshethra Development Authority Fund.

(5) Application of the Fund.

(6) Other incidental matters.

Hence the Bill.

## FINANCIAL MEMORANDUM

There will be an approximate additional recurring expenditure of Rs.36,20,000/- and non-recurring expenditure of Rs.20,00,000/- from the proposed legislative measure.

## MEMORANDUM REGARDING DELEGATED LEGISLATION

| | | |
|---|---|---|
| Clause 4: | Sub-clause (3), empowers the State Government to make rules regarding the allowances payable to the non-official members of the Authority. | |
| Clause 8: | Sub-clause (2), empowers the State Government to prescribe to make rules regarding,- | |
| | (1) | The manner of entering into and performing contracts by the Authority. |
| | (2) | the conditions subject to which the authority shall borrow any sum required for the purposes of the Act; |
| | (3) | the restrictions and conditions subject to which the Authority can lease, sell or otherwise transfer movable or immovable property for the formation of open spaces or for building purposes or in any other manner for the purpose of a development scheme. |
| Clause 12: | Sub-clause (1) and (3) empowers the State Government to make rules regarding number of employees to be appointed by the authority, their salaries, allowances and other conditions of service. | |
| Clause 16: | Sub-clause (4) empowers the State Government to make rules regarding contents of the note circulated for decision of the Authority. | |
| Clause 21: | Empowers the State Government to make rules regarding the maintenance of Sri. Malai Mahadeswaraswamy Kshethra in respect of properties, rates, fees and other charges. | |
| Clause 27: | Empowers the State Government to make rules regarding date, the form of preparation of the budget estimates. | |

| | |
|---|---|
| Clause 28: | Empowers the State Government to make rules regarding the maintenance of books of accounts and other registers and also manner of preparation of annual statement of accounts. |
| Clause 29: | Empowers the State Government to make rules regarding the date, form and intervals at which the submission of the reports to the State Government. |
| Clause 37: | Empowers the State Government to make rules generally for carrying out the purposes of the Act. |

The Proposed delegation of legislative power is normal in character.

**KOTA SRINIVASA PUJARI**
Minister for Muzarai, Ports and Inland Water Transport

**P. OMPRAKASHA**
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ – IV-A | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪) | ನಂ. ೪೦೫ |
| **Part – IV-A** | **Bangalore, Thursday, February 14, 2013 (Magha 25, Shaka Varsha 1934)** | **No. 405** |



## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 64 ಎಂಆರ್‌ಇ 2013, ಬೆಂಗಳೂರು, ದಿನಾಂಕ: 13.02.2013**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 10 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಗುಲ್ಬರ್ಗಾ** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸರ್ಕಾರದ ಆಧಿಸೂಚನೆ ಸಂಖ್ಯೆ:ಸಇ 56 ಎಂಆರ್‌ಇ(3) 2010 ದಿನಾಂಕ:16.12.2011 ರಲ್ಲಿನ ಕ್ರಮ ಸಂಖ್ಯೆ:11ರಲ್ಲಿರುವ ಶ್ರೀ ನಾಗರಾಜ ದಂಡಪ್ಪ ಗುಂಡಗುರ್ತಿ, ಹೌಸ್ ನಂ.122, ಇ.ಡಬ್ಲ್ಯು.ಎಸ್., ಕೆ.ಹೆಚ್.ಬಿ. ಕಾಲೋನಿ, ಶಾಂತಿನಗರ, ಗುಲ್ಬರ್ಗಾ ತಾಲ್ಲೂಕು ಮತ್ತು ಜಿಲ್ಲೆ, ಇವರ ನಾಮನಿರ್ದೇಶನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 10 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಹದೇವ ಬಿನ್ ಶ್ಯಾಮರಾವ್ ಪೂಜಾರಿ, ಕೋಟನೂರು ಡಿ. ಗುಲ್ಬರ್ಗಾ, ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರನ್ನು **ಗುಲ್ಬರ್ಗಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ** ಸಮಿತಿಯ ಅವಧಿಯವರೆಗೆ ಅಥವಾ ಸರ್ಕಾರದ ಇಚ್ಛಾನುಸಾರದವರೆಗೆ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿದೆ:–

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ – III | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪) | ನಂ. ೪೦೬ |
| **Part – III** | **Bangalore, Thursday, February 14, 2013 (Magha 25, Shaka Varsha 1934)** | **No. 406** |



## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 108 ಸೇಸಕಿ 12, ಬೆಂಗಳೂರು ದಿನಾಂಕ: 13ನೇ ಫೆಬ್ರವರಿ, 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಶ್ರೀ ಎಂ.ಎನ್. ನಾಗರಾಜ, ಸಹಾಯಕ ಇಂಜಿನಿಯರ್, ಇವರು ದಿನಾಂಕ 02–05–86 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು 10 ವರ್ಷಗಳ ಸೇವೆ ಪೂರೈಸಿದ ನಂತರ ಅವರ ಸೇವೆಯನ್ನು ಸಂಖ್ಯೆ: ನೀಇ:936:ಪಿಡಬ್ಲ್ಯೂಸಿ:2000 ದಿನಾಂಕ 3–2–2001ರ ಆದೇಶದಲ್ಲಿ 2–5–1996 ರಿಂದ ಸಹಾಯಕ

ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು ದಿನಾಂಕ: 3–2–2001ರಿಂದ ಅನ್ವಯವಾಗುವಂತೆ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನ ನೀಡಲಾಗಿದೆ. ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08 ದಿನಾಂಕ: 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಠತೆಯ ಕ್ರಮ ಸಂಖ್ಯೆ 3859–A ರಲ್ಲಿ ನಿಗದಿಪಡಿಸಲು ಉದ್ದೇಶಿಸಿ ಸೇರ್ಪಡೆ ಮಾಡಿ ತಿದ್ದುಪಡಿಯ ಕರಡು ಅಧಿಸೂಚನೆಯನ್ನು ಸಂಖ್ಯೆ: ಲೋಇ:108:ಸೇಸಕಿ:12 ದಿನಾಂಕ: 19–1–2013ರಲ್ಲಿ ಹೊರಡಿಸಿ ಬಾದಿತರಾಗಬಹುದಾದ ಅಧಿಕಾರಿ / ನೌಕರರುಗಳಿಂದ ಆಕ್ಷೇಪಣೆ ಸಲಹೆ / ಮನವಿಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ಸಲ್ಲಿಸಲು 15 ದಿವಸಗಳ ಅವಕಾಶ ಕಲ್ಪಿಸಲಾಗಿತ್ತು.

ಸದರಿ ಅಧಿಸೂಚನೆಯು ದಿನಾಂಕ 19–1–2013ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಗೊಂಡಿದ್ದು ಈ ಸಂಬಂಧ ನಿಗದಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆ/ಸಲಹೆ/ಮನವಿಗಳು ಸ್ವೀಕೃತವಾಗಿರುವುದಿಲ್ಲ.

ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ: 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎಂ.ಎನ್. ನಾಗರಾಜ, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3859–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಿ ಅಂತಿಮಗೊಳಿಸಿ ಹೊರಡಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of Entry into service | Date of Regular Appointment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3859-A | - | M.N. Nagaraja | - | 01-06-1960 | 02-05-1986 | 2-5-1996<br>3-02-2001<br>* | DWR |

* He shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಸದರಿ ಸೇರ್ಪಡೆಯು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯ ಪ್ರಕರಣಗಳು ಬಾಕಿ ಇದ್ದಲ್ಲಿ ನ್ಯಾಯಾಲಯವು ನೀಡುವ ತೀರ್ಪಿನ ಮೇರೆಗೆ ಪುನರ್ ಪರಿಷ್ಕರಣೆಗೆ ಒಳಪಟಿರುತ್ತದೆ ಎಂಬ ಷರತ್ತು ಈ ಪ್ರಕರಣಕ್ಕೆ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ರಾಜ್ಯ ಪತ್ರಿಕೆ


| ಭಾಗ – III<br>Part – III | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪)<br>Bangalore, Thursday, February 14, 2013 (Magha 25, Shaka Varsha 1934) | ನಂ. ೪೦೭<br>No. 407 |
|---|---|---|


## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ
### ಅಧಿಸೂಚನೆ

**ಸಂಖ್ಯೆ: ಲೋಇ 312 ಸೇಸಕಿ 12, ಬೆಂಗಳೂರು ದಿನಾಂಕ: 13ನೇ ಫೆಬ್ರವರಿ, 2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಶ್ರೀ ಕೆ. ಪ್ರಭಾಕರ, ಸಹಾಯಕ ಇಂಜಿನಿಯರ್, ಇವರು ದಿನಾಂಕ 26–5–1987 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು 10 ವರ್ಷಗಳ ಸೇವೆ ಪೂರೈಸಿದ ನಂತರ ಅವರ ಸೇವೆಯನ್ನು ಸಂಖ್ಯೆ: ಲೋಇ:121:ಪಿಡಬ್ಲ್ಯೂಸಿ:97 ದಿನಾಂಕ 22–11–97ರ ಆದೇಶದಲ್ಲಿ 26–5–1997 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ: 15–11–2010ರ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ 3623–A ರಲ್ಲಿ ನಿಗದಿಪಡಿಸಲು ಉದ್ದೇಶಿಸಿ ಸೇರ್ಪಡೆ ಮಾಡಿ ತಿದ್ದುಪಡಿಯ ಕರಡು ಅಧಿಸೂಚನೆಯನ್ನು ಸಂಖ್ಯೆ: ಲೋಇ:312:ಸೇಸಕಿ:12 ದಿನಾಂಕ: 19–1–2013ರಲ್ಲಿ ಹೊರಡಿಸಿ ಬಾದಿತರಾಗಬಹುದಾದ ಅಧಿಕಾರಿ / ನೌಕರರುಗಳಿಂದ ಆಕ್ಷೇಪಣೆ ಸಲಹೆ / ಮನವಿಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ಸಲ್ಲಿಸಲು 15 ದಿವಸಗಳ ಅವಕಾಶ ಕಲ್ಪಿಸಲಾಗಿತ್ತು.

ಸದರಿ ಅಧಿಸೂಚನೆಯು ದಿನಾಂಕ 19–1–2013ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಗೊಂಡಿದ್ದು ಈ ಸಂಬಂಧ ನಿಗದಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆ/ಸಲಹೆ/ಮನವಿಗಳು ಸ್ವೀಕೃತವಾಗಿರುವುದಿಲ್ಲ.

ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ: 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಕೆ. ಪ್ರಭಾಕರ, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3623–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಿ ಅಂತಿಮಗೊಳಿಸಿ ಹೊರಡಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of Entry into service | Date of Regular Appoint ment to the cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3623-A | - | K. PRABHAKARA | - | 28-09-1962 | 26-05-1987 | 26-05-1997 | DWR |

ಸದರಿ ಸೇರ್ಪಡೆಯು ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯ ಪ್ರಕರಣಗಳು ಬಾಕಿ ಇದ್ದಲ್ಲಿ ನ್ಯಾಯಾಲಯವು ನೀಡುವ ತೀರ್ಪಿನ ಮೇರೆಗೆ ಪುನರ್ ಪರಿಷ್ಕರಣೆಗೆ ಒಳಪಟಿರುತ್ತದೆ ಎಂಬ ಷರತ್ತು ಈ ಪ್ರಕರಣಕ್ಕೆ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV<br>Part – IV | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪)<br>Bangalore, Thursday, February 14, 2013 (Magha 25, Shaka Varsha 1934) | ನಂ. ೪೦೮<br>No. 408 |
|---|---|---|


## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

### ಆದೇಶ

**ಸಂಖ್ಯೆ: ರಾಚುಆ.18.ಇಯುಬಿ.2013, ಬೆಂಗಳೂರು, ದಿನಾಂಕ: 14.02.2013**

ಮಾನ್ಯ ಸರ್ವೋಚ್ಚ ನ್ಯಾಯಾಲಯವು ಪ್ರಕರಣ ಸಂಖ್ಯೆ: ಎಸ್.ಎಲ್.ಪಿ.ನಂ.(ಸಿವಿಲ್) 3909–3910/877/ 109/2013 ದಿನಾಂಕ: 01–02–2013 ರಂತೆ ನೀಡಿರುವ ತೀರ್ಪಿನಲ್ಲಿ ರಾಜ್ಯ ಸರ್ಕಾರವು 04–02–2013 ರೊಳಗಾಗಿ ಆಯೋಗಕ್ಕೆ ನಗರ ಸ್ಥಳೀಯ ಸಂಸ್ಥೆಗಳ ವಾರ್ಡುವಾರು ಮೀಸಲಾತಿ ಪಟ್ಟಿಯನ್ನು ಸಲ್ಲಿಸತಕ್ಕದೆಂದು ತಪ್ಪಿದಲ್ಲಿ ಆಯೋಗವು 2001 ರ ಜನಗಣತಿ ಆಧರಿಸಿ 2007 ನೇ ಸಾಲಿನ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಾಗಿ ಸರ್ಕಾರವು ಪ್ರಕಟಿಸಿರುವ ಮೀಸಲಾತಿಯನ್ನೇ ಅನುಸರಿಸಿ ಪ್ರಸಕ್ತ ಚುನಾವಣೆ ನಡೆಸಬಹುದಾಗಿ ತೀರ್ಪು ನೀಡಿದೆ. ಆದರೆ ಮಾನ್ಯ ಸರ್ವೋಚ್ಚ ನ್ಯಾಯಾಲಯ ನೀಡಿದ ದಿನಾಂಕ: 04–02–2013 ರ ಗಡುವಿನೊಳಗೆ ನಗರ ಸ್ಥಳೀಯ ಸಂಸ್ಥೆಗಳ ಮೀಸಲಾತಿಯನ್ನು ಆಯೋಗಕ್ಕೆ ಸರ್ಕಾರವು ಸಲ್ಲಿಸದೆ ಇದ್ದುದರಿಂದ 2007 ರಲ್ಲಿ ಸರ್ಕಾರವು ನಗರ ಸ್ಥಳೀಯ ಸಂಸ್ಥೆಗಳಿಗೆ ನಿಗದಿಪಡಿಸಿ ಅಧಿಸೂಚಿಸಿರುವ ವಾರ್ಡುವಾರು ಮೀಸಲಾತಿಯನ್ನೇ 2013 ರ ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆಗೆ ಅಳವಡಿಸಿಕೊಳ್ಳಲಾಗುತ್ತಿದೆ. ಈ ಬಗ್ಗೆ ಜಿಲ್ಲಾಧಿಕಾರಿಗಳಿಗೆ ದಿನಾಂಕ: 05–02–2013 ರಂದು ಸೂಚನೆಗಳನ್ನು ಆಯೋಗದಿಂದ ನೀಡಲಾಗಿದ್ದು, ಎಲ್ಲಾ ಜಿಲ್ಲಾಧಿಕಾರಿಗಳು ದಿನಾಂಕ: 07–02–2013 ರ ಒಳಗೆ 2007 ರ ವಾರ್ಡುವಾರು ಮೀಸಲಾತಿಯನ್ನು ಪ್ರಕಟಿಸಿರುವುದಾಗಿಯೂ, ಚುನಾವಣಾ ಸಿದ್ಧತೆಗಳು ಪೂರ್ಣಗೊಂಡಿರುವುದಾಗಿ ವರದಿ ಸಲ್ಲಿಸಿರುತ್ತಾರೆ. ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ: 13–02–2013 ರ ತೀರ್ಪಿನಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸುವ ಸಂಬಂಧ ನಿರ್ದಿಷ್ಟವಾದ ಸೂಚನೆಗಳನ್ನು ಪ್ರಕರಣ ಸಂಖ್ಯೆ WP(ಸಿವಿಲ್) 89/2013 ರಲ್ಲಿ ನೀಡಿರುತ್ತದೆ. ಮೇಲ್ಕಂಡ ತೀರ್ಪುಗಳಿಗನುಗುಣವಾಗಿ ರಾಜ್ಯ ಚುನಾವಣಾ ಆಯೋಗವು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಗಳು, 1979 ರ ನಿಯಮ 10 ರ ಅನ್ವಯ ಈ ಕೆಳಕಂಡ 07 ಮಹಾನಗರಪಾಲಿಕೆಗಳಿಗೆ ಈ ಕೆಳಗೆ ನಮೂದಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಸಾರ್ವತ್ರಿಕ ಚುನಾವಣೆಯನ್ನು ನಡೆಸಲು ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ನಗರ ಸ್ಥಳೀಯ ಸಂಸ್ಥೆಯ ಹೆಸರು |
|---|---|---|
| 1 | ದಾವಣಗೆರೆ | ದಾವಣಗೆರೆ ಮಹಾನಗರ ಪಾಲಿಕೆ |
| 2 | ಬಳ್ಳಾರಿ | ಬಳ್ಳಾರಿ ಮಹಾನಗರ ಪಾಲಿಕೆ |
| 3 | ಗುಲ್ಬರ್ಗಾ | ಗುಲ್ಬರ್ಗಾ ಮಹಾನಗರ ಪಾಲಿಕೆ |
| 4 | ಮೈಸೂರು | ಮೈಸೂರು ಮಹಾನಗರ ಪಾಲಿಕೆ |
| 5 | ದಕ್ಷಿಣ ಕನ್ನಡ | ಮಂಗಳೂರು ಮಹಾನಗರ ಪಾಲಿಕೆ |
| 6 | ಬೆಳಗಾಂ | ಬೆಳಗಾಂ ಮಹಾನಗರ ಪಾಲಿಕೆ |
| 7 | ಧಾರವಾಡ | ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ |

**ಚುನಾವಣಾ ವೇಳಾ ಪಟ್ಟಿ**

| ಕ್ರ.ಸಂ | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1 | ಜಿಲ್ಲಾಧಿಕಾರಿಗಳು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | **16–02–2013 ಶನಿವಾರ** |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **23–02–2013 ಶನಿವಾರ** |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **25–02–2013 ಸೋಮವಾರ** |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **27–02–2013 ಬುಧವಾರ** |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | **07–03–2013 ಗುರುವಾರ** |
| 6 | ಮತದಾನದ ಸಮಯ ಬೆಳಿಗ್ಗೆ 7–00 ಗಂಟೆಯಿಂದ ಸಂಜೆ 5–00 ಗಂಟೆಯವರೆಗೆ | |
| 7 | ಮರುಮತದಾನ ಅವಶ್ಯಕವಿದ್ದಲ್ಲಿ ಮತದಾನ ನಡೆಯುವ ದಿನಾಂಕ ಮತ್ತು ದಿನ | **09–03–2013 ಶನಿವಾರ** |
| 8 | ಮತಗಳ ಎಣಿಕೆ ಬೆಳಿಗ್ಗೆ 8.00 ಘಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | **11–03–2013 ಸೋಮವಾರ** |
| 9 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **11–03–2013 ಸೋಮವಾರ** |

ಜಿಲ್ಲಾಧಿಕಾರಿಗಳು ಆಯೋಗವು ಆದೇಶಿಸಿದ ಚುನಾವಣಾ ವೇಳಾಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಗಳು 1979 ನಿಯಮ 10 ರಡಿಯಲ್ಲಿ ಕಾರ್ಪೋರೇಷನ್‌ಗಳಿಗೆ ಸಂಬಂಧಿಸಿದ ಚುನಾವಣಾ ಅಧಿಸೂಚನೆಗಳನ್ನು ಹೊರಡಿಸತಕ್ಕದ್ದು. ಹಾಗೆ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯ ಪ್ರತಿಗಳನ್ನು ಜಿಲ್ಲಾಧಿಕಾರಿ ಕಛೇರಿ, ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಕಛೇರಿ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲಿಯೂ ಸಹಾ ಪ್ರದರ್ಶಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ–1ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

ಸದಾಚಾರ ಸಂಹಿತೆಯು ದಿನಾಂಕ: **15–02–2013** ರ ಬೆಳಿಗ್ಗೆಯಿಂದಲೇ ಜಾರಿಗೆ ಬರಲಿದ್ದು, ಚುನಾವಣಾ ಪ್ರಕ್ರಿಯೆಯು ಮುಕ್ತಾಯಗೊಳ್ಳುವವರೆಗೆ ಅಂದರೆ ದಿನಾಂಕ: **11–03–2013** ವರೆಗೆ ಜಾರಿಯಲ್ಲಿರುತ್ತದೆ. ನೀತಿ ಸಂಹಿತೆಯು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಗೆ ಮಾತ್ರ ಅನ್ವಯವಾಗುತ್ತದೆ. ಜಿಲ್ಲಾಧಿಕಾರಿಗಳು ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ನೋಡಿಕೊಳ್ಳತಕ್ಕದ್ದು.

ಆದೇಶಾನುಸಾರ

**ಹೊನ್ನಾಂಬ ಎಸ್**
ಉಪ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ, ಕರ್ನಾಟಕ


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪) | ನಂ. ೪೦೯ |
|---|---|---|
| **Part – IV** | **Bangalore, Thursday, February 14, 2013 (Magha 25, Shaka Varsha 1934)** | **No. 409** |


## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

**ಆದೇಶ**

**ಸಂಖ್ಯೆ: ರಾಚುಆ.18.ಇಯುಬಿ.2013, ಬೆಂಗಳೂರು, ದಿನಾಂಕ: 14.02.2013**

ಮಾನ್ಯ ಸರ್ವೋಚ್ಛ ನ್ಯಾಯಾಲಯವು ಪ್ರಕರಣ ಸಂಖ್ಯೆ: ಎಸ್.ಎಲ್.ಪಿ.ನಂ.(ಸಿವಿಲ್) 3909–3910/877/ 109/2013 ದಿನಾಂಕ: 01–02–2013 ರಂತೆ ನೀಡಿರುವ ತೀರ್ಪಿನಲ್ಲಿ ರಾಜ್ಯ ಸರ್ಕಾರವು 04–02–2013 ರೊಳಗಾಗಿ ಆಯೋಗಕ್ಕೆ ನಗರ ಸ್ಥಳೀಯ ಸಂಸ್ಥೆಗಳ ವಾರ್ಡುವಾರು ಮೀಸಲಾತಿ ಪಟ್ಟಿಯನ್ನು ಸಲ್ಲಿಸತಕ್ಕದೆಂದು ತಪ್ಪಿದಲ್ಲಿ ಆಯೋಗವು 2001 ರ ಜನಗಣತಿ ಆಧರಿಸಿ 2007 ನೇ ಸಾಲಿನ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಾಗಿ ಸರ್ಕಾರವು ಪ್ರಕಟಿಸಿರುವ ಮೀಸಲಾತಿಯನ್ನೇ ಅನುಸರಿಸಿ ಪ್ರಸಕ್ತ ಚುನಾವಣೆ ನಡೆಸಬಹುದಾಗಿ ತೀರ್ಪು ನೀಡಿದೆ. ಆದರೆ ಮಾನ್ಯ ಸರ್ವೋಚ್ಛ ನ್ಯಾಯಾಲಯ ನೀಡಿದ ದಿನಾಂಕ: 04–02–2013 ರ ಗಡುವಿನೊಳಗೆ ನಗರ ಸ್ಥಳೀಯ ಸಂಸ್ಥೆಗಳ ಮೀಸಲಾತಿಯನ್ನು ಆಯೋಗಕ್ಕೆ ಸರ್ಕಾರವು ಸಲ್ಲಿಸದೆ ಇದ್ದುದರಿಂದ 2007 ರಲ್ಲಿ ಸರ್ಕಾರವು ನಗರ ಸ್ಥಳೀಯ ಸಂಸ್ಥೆಗಳಿಗೆ ನಿಗದಿಪಡಿಸಿ ಅಧಿಸೂಚಿಸಿರುವ ವಾರ್ಡುವಾರು ಮೀಸಲಾತಿಯನ್ನೇ 2013 ರ ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆಗೆ ಅಳವಡಿಸಿಕೊಳ್ಳಲಾಗುತ್ತಿದೆ. ಈ ಬಗ್ಗೆ ಜಿಲ್ಲಾಧಿಕಾರಿಗಳಿಗೆ ದಿನಾಂಕ: 05–02–2013 ರಂದು ಸೂಚನೆಗಳನ್ನು ಆಯೋಗದಿಂದ ನೀಡಲಾಗಿದ್ದು, ಎಲ್ಲಾ ಜಿಲ್ಲಾಧಿಕಾರಿಗಳು ದಿನಾಂಕ: 07–02–2013 ರ ಒಳಗೆ 2007 ರ ವಾರ್ಡುವಾರು ಮೀಸಲಾತಿಯನ್ನು ಪ್ರಕಟಿಸಿರುವುದಾಗಿಯೂ, ಚುನಾವಣಾ ಸಿದ್ಧತೆಗಳು ಪೂರ್ಣಗೊಂಡಿರುವುದಾಗಿ ವರದಿ ಸಲ್ಲಿಸಿರುತ್ತಾರೆ. ಮಾನ್ಯ ಸರ್ವೋಚ್ಛ ನ್ಯಾಯಾಲಯವು ದಿನಾಂಕ: 13–02–2013ರ ತೀರ್ಪಿನಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸುವ ಸಂಬಂಧ ನಿರ್ದಿಷ್ಟವಾದ ಸೂಚನೆಗಳನ್ನು ಪ್ರಕರಣ ಸಂಖ್ಯೆ WP (ಸಿವಿಲ್) 89/2013 ರಲ್ಲಿ ನೀಡಿರುತ್ತದೆ. ಮೇಲ್ಕಂಡ ತೀರ್ಪುಗಳಿಗನುಗುಣವಾಗಿ ರಾಜ್ಯ ಚುನಾವಣಾ ಆಯೋಗವು ಕರ್ನಾಟಕ ಮುನಿಸಿಪಾಲಿಟಿಗಳ (ಕೌನ್ಸಿಲರ್‌ಗಳ

ಚುನಾವಣೆ) ನಿಯಮಗಳು, 1977 ರ ನಿಯಮ 8 ರ ಅನ್ವಯ ಈ ಆದೇಶದ ಅನುಬಂಧದಲ್ಲಿರುವ 201 ನಗರ ಸ್ಥಳೀಯ ಸಂಸ್ಥೆಗಳಿಗೆ ಈ ಕೆಳಗೆ ನಮೂದಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಅನುಬಂಧದಲ್ಲಿ ನೀಡಲಾಗಿರುವ ವಿವರಗಳಂತೆ ಸಾರ್ವತ್ರಿಕ ಚುನಾವಣೆಯನ್ನು ನಡೆಸಲು ಆದೇಶಿಸಿದೆ.

**ಚುನಾವಣಾ ವೇಳಾಪಟ್ಟಿ**

| ಕ್ರ.ಸಂ | ಚುನಾವಣಾ ಚಟುವಟಿಕೆ | ದಿನಾಂಕ: |
|---|---|---|
| 1 | ಜಿಲ್ಲಾಧಿಕಾರಿಗಳು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | **16–02–2013 ಶನಿವಾರ** |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **23–02–2013 ಶನಿವಾರ** |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **25–02–2013 ಸೋಮವಾರ** |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **27–02–2013 ಬುಧವಾರ** |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | **07–03–2013 ಗುರುವಾರ** |
| 6 | ಮತದಾನದ ಸಮಯ ಬೆಳಿಗ್ಗೆ 7–00 ಗಂಟೆಯಿಂದ ಸಂಜೆ 5–00 ಗಂಟೆಯವರೆಗೆ | |
| 7 | ಮರು ಮತದಾನ ಅವಶ್ಯಕವಿದ್ದಲ್ಲಿ ಮತದಾನ ನಡೆಯುವ ದಿನಾಂಕ ಮತ್ತು ದಿನ | **09–03–2013 ಶನಿವಾರ** |
| 8 | ಮತಗಳ ಎಣಿಕೆ ಬೆಳಿಗ್ಗೆ 8.00 ಘಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | **11–03–2013 ಸೋಮವಾರ** |
| 9 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **11–03–2013 ಸೋಮವಾರ** |

ಜಿಲ್ಲಾಧಿಕಾರಿಗಳು ಆಯೋಗವು ಆದೇಶಿಸಿದ ಚುನಾವಣಾ ವೇಳಾಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಾಲಿಟಿಸ್ (ಎಲೆಕ್ಷನ್ ಆಫ್ ಕೌನ್ಸಿಲರ್ಸ್) ನಿಯಮಗಳು 1977 ರ ನಿಯಮ 8 ರ ಪ್ರಕಾರ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯತಿಗಳಿಗೆ ಸಂಬಂಧಿಸಿದ ಚುನಾವಣಾ ಅಧಿಸೂಚನೆಯನ್ನು ಹೊರಡಿಸತಕ್ಕದ್ದು. ಹಾಗೆ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯ ಪ್ರತಿಗಳನ್ನು ಜಿಲ್ಲಾಧಿಕಾರಿ ಕಛೇರಿ, ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಕಛೇರಿ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲಿಯೂ ಸಹಾ ಪ್ರದರ್ಶಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ–1ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

ಸದಾಚಾರ ಸಂಹಿತೆಯು ದಿನಾಂಕ: **15–02–2013** ರ ಬೆಳಿಗ್ಗೆಯಿಂದಲೇ ಜಾರಿಗೆ ಬರಲಿದ್ದು, ಚುನಾವಣಾ ಪ್ರಕ್ರಿಯೆಯು ಮುಕ್ತಾಯಗೊಳ್ಳುವವರೆಗೆ ಅಂದರೆ ದಿನಾಂಕ: **11–03–2013** ವರೆಗೆ ಜಾರಿಯಲ್ಲಿರುತ್ತದೆ. ನೀತಿ ಸಂಹಿತೆಯು ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಗೆ ಮಾತ್ರ ಅನ್ವಯವಾಗುತ್ತದೆ. ಜಿಲ್ಲಾಧಿಕಾರಿಗಳು ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ನೋಡಿಕೊಳ್ಳತಕ್ಕದ್ದು.

ಆದೇಶಾನುಸಾರ

**ಹೊನ್ನಾಂಬ ಎಸ್**
ಉಪ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

## ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ
## ರಾಚುಆ.18.ಇಯುಬಿ.2013 ಬೆಂಗಳೂರು, ದಿನಾಂಕ: 14–02–2013 ರ ಅನುಬಂಧ

| ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ –2013 | | | | |
|---|---|---|---|---|
| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಕ್ರಮ ಸಂಖ್ಯೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | |
| 1 | 2 | 3 | 4 | |
| 1 | ಬೆಂಗಳೂರು ನಗರ | 1 | ಆನೇಕಲ್ | ಪುರಸಭೆ |
| 2 | ಬೆಂಗಳೂರು ಗ್ರಾಮಾಂತರ | 2 | ದೊಡ್ಡಬಳ್ಳಾಪುರ | ನಗರಸಭೆ |
| | | 3 | ದೇವನಹಳ್ಳಿ | ಪುರಸಭೆ |
| | | 4 | ವಿಜಯಪುರ | ಪುರಸಭೆ |
| | | 5 | ಹೊಸಕೋಟೆ | ಪುರಸಭೆ |
| | | 6 | ನೆಲಮಂಗಲ | ಪುರಸಭೆ |
| 3 | ರಾಮನಗರ | 7 | ರಾಮನಗರ | ನಗರಸಭೆ |

| ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ –2013 | | | | |
|---|---|---|---|---|
| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಕ್ರಮ ಸಂಖ್ಯೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | |
| | | 8 | ಚನ್ನಪಟ್ಟಣ | ನಗರಸಭೆ |
| | | 9 | ಕನಕಪುರ | ಪುರಸಭೆ |
| | | 10 | ಮಾಗಡಿ | ಪುರಸಭೆ |
| 4 | ಚಿತ್ರದುರ್ಗ | 11 | ಚಿತ್ರದುರ್ಗ | ನಗರಸಭೆ |
| | | 12 | ಚಳ್ಳಕೆರೆ | ಪುರಸಭೆ |
| | | 13 | ಹಿರಿಯೂರು | ಪುರಸಭೆ |
| | | 14 | ಹೊಸದುರ್ಗ | ಪುರಸಭೆ |
| | | 15 | ಹೊಳಲ್ಕೆರೆ | ಪಟ್ಟಣ ಪಂಚಾಯತಿ |
| | | 16 | ಮೊಳಕಾಲ್ಮೂರು | ಪಟ್ಟಣ ಪಂಚಾಯತಿ |
| 5 | ದಾವಣಗೆರೆ | 17 | ಹರಿಹರ | ನಗರಸಭೆ |
| | | 18 | ಹರಪನಹಳ್ಳಿ | ಪುರಸಭೆ |
| | | 19 | ಹೊನ್ನಾಳಿ | ಪಟ್ಟಣ ಪಂಚಾಯತಿ |
| | | 20 | ಚನ್ನಗಿರಿ | ಪಟ್ಟಣ ಪಂಚಾಯತಿ |
| | | 21 | ಜಗಳೂರು | ಪಟ್ಟಣ ಪಂಚಾಯತಿ |
| 6 | ಕೋಲಾರ | 22 | ಕೋಲಾರ | ನಗರಸಭೆ |
| | | 23 | ರಾಬರ್ಟ್‌ಸನ್‌ಪೇಟ್ | ನಗರಸಭೆ |
| | | 24 | ಬಂಗಾರಪೇಟೆ | ಪುರಸಭೆ |
| | | 25 | ಮುಳಬಾಗಿಲು | ಪುರಸಭೆ |
| | | 26 | ಮಾಲೂರು | ಪುರಸಭೆ |
| | | 27 | ಶ್ರೀನಿವಾಸಪುರ | ಪುರಸಭೆ |
| 7 | ಚಿಕ್ಕಬಳ್ಳಾಪುರ | 28 | ಚಿಕ್ಕಬಳ್ಳಾಪುರ | ನಗರಸಭೆ |
| | | 29 | ಚಿಂತಾಮಣಿ | ನಗರಸಭೆ |
| | | 30 | ಗೌರಿಬಿದನೂರು | ಪುರಸಭೆ |
| | | 31 | ಶಿಡ್ಲಘಟ್ಟ | ಪುರಸಭೆ |
| | | 32 | ಬಾಗೇಪಲ್ಲಿ | ಪುರಸಭೆ |
| | | 33 | ಗುಡಿಬಂಡೆ | ಪಟ್ಟಣ ಪಂಚಾಯತಿ |
| 8 | ಶಿವಮೊಗ್ಗ | 34 | ಶಿವಮೊಗ್ಗ | ನಗರಸಭೆ |
| | | 35 | ಭದ್ರಾವತಿ | ನಗರಸಭೆ |
| | | 36 | ಸಾಗರ | ನಗರಸಭೆ |
| | | 37 | ಶಿಕಾರಿಪುರ | ಪುರಸಭೆ |
| | | 38 | ಶಿರಾಳಕೊಪ್ಪ | ಪಟ್ಟಣ ಪಂಚಾಯತಿ |
| | | 39 | ತೀರ್ಥಹಳ್ಳಿ | ಪಟ್ಟಣ ಪಂಚಾಯತಿ |
| | | 40 | ಸೊರಬ | ಪಟ್ಟಣ ಪಂಚಾಯತಿ |
| | | 41 | ಹೊಸನಗರ | ಪಟ್ಟಣ ಪಂಚಾಯತಿ |
| 9 | ತುಮಕೂರು | 42 | ತುಮಕೂರು | ನಗರಸಭೆ |
| | | 43 | ತಿಪಟೂರು | ನಗರಸಭೆ |
| | | 44 | ಸಿರಾ | ನಗರಸಭೆ |
| | | 45 | ಕುಣಿಗಲ್ | ಪುರಸಭೆ |

| ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ –2013 | | | | |
|---|---|---|---|---|
| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಕ್ರಮ ಸಂಖ್ಯೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | |
| | | 46 | ಚಿಕ್ಕನಾಯಕನಹಳ್ಳಿ | ಪುರಸಭೆ |
| | | 47 | ಮಧುಗಿರಿ | ಪುರಸಭೆ |
| | | 48 | ಪಾವಗಡ | ಪುರಸಭೆ |
| | | 49 | ತುರುವೇಕೆರೆ | ಪಟ್ಟಣ ಪಂಚಾಯತಿ |
| | | 50 | ಕೊರಟಗೆರೆ | ಪಟ್ಟಣ ಪಂಚಾಯತಿ |
| | | 51 | ಗುಬ್ಬಿ | ಪಟ್ಟಣ ಪಂಚಾಯತಿ |
| 10 | ಬಳ್ಳಾರಿ | 52 | ಹೊಸಪೇಟೆ | ನಗರಸಭೆ |
| | | 53 | ಕಂಪ್ಲಿ | ಪುರಸಭೆ |
| | | 54 | ಸಿರಗುಪ್ಪ | ಪುರಸಭೆ |
| | | 55 | ಹೆಚ್.ಹಡಗಲಿ | ಪುರಸಭೆ |
| | | 56 | ಸಂಡೂರು | ಪುರಸಭೆ |
| | | 57 | ತೆಕ್ಕಲಕೋಟೆ | ಪಟ್ಟಣ ಪಂಚಾಯತಿ |
| | | 58 | ಕಮಲಾಪುರ | ಪಟ್ಟಣ ಪಂಚಾಯತಿ |
| | | 59 | ಕೊಟ್ಟೂರು | ಪಟ್ಟಣ ಪಂಚಾಯತಿ |
| | | 60 | ಕೂಡಲಗಿ | ಪಟ್ಟಣ ಪಂಚಾಯತಿ |
| 11 | ಬೀದರ್ | 61 | ಬೀದರ್ | ನಗರಸಭೆ |
| | | 62 | ಬಸವಕಲ್ಯಾಣ | ನಗರಸಭೆ |
| | | 63 | ಹುಮ್ನಾಬಾದ್ | ಪುರಸಭೆ |
| | | 64 | ಚಿಟಗುಪ್ಪ | ಪುರಸಭೆ |
| | | 65 | ಭಾಲ್ಕಿ | ಪುರಸಭೆ |
| | | 66 | ಔರಾದ್ | ಪಟ್ಟಣ ಪಂಚಾಯತಿ |
| 12 | ಗುಲ್ಬರ್ಗಾ | 67 | ಶಹಾಬಾದ್ | ನಗರಸಭೆ |
| | | 68 | ಆಳಂದ | ಪುರಸಭೆ |
| | | 69 | ಸೇಡಂ | ಪುರಸಭೆ |
| | | 70 | ಅಫಜಲ್‌ಪುರ | ಪಟ್ಟಣ ಪಂಚಾಯತಿ |
| | | 71 | ಚಿಂಚೋಳಿ | ಪಟ್ಟಣ ಪಂಚಾಯತಿ |
| | | 72 | ಜೇವರ್ಗಿ | ಪಟ್ಟಣ ಪಂಚಾಯತಿ |
| | | 73 | ಚಿತ್ತಾಪುರ | ಪುರಸಭೆ |
| 13 | ಯಾದಗಿರಿ | 74 | ಶೋರಾಪುರ್ | ಪುರಸಭೆ |
| | | 75 | ಯಾದಗಿರಿ | ನಗರಸಭೆ |
| | | 76 | ಗುರುಮಿಟ್ಕಲ್ | ಪಟ್ಟಣ ಪಂಚಾಯತಿ |
| | | 77 | ಶಹಾಪುರ | ಪುರಸಭೆ |
| 14 | ರಾಯಚೂರು | 78 | ರಾಯಚೂರು | ನಗರಸಭೆ |
| | | 79 | ಸಿಂಧನೂರು | ನಗರಸಭೆ |
| | | 80 | ಮಾನ್ವಿ | ಪುರಸಭೆ |
| | | 81 | ಲಿಂಗಸುಗೂರು | ಪುರಸಭೆ |
| | | 82 | ದೇವದುರ್ಗ | ಪುರಸಭೆ |
| | | 83 | ಮುದಗಲ್ | ಪಟ್ಟಣ ಪಂಚಾಯತಿ |

| ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ –2013 | | | | |
|---|---|---|---|---|
| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಕ್ರಮ ಸಂಖ್ಯೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | |
| 15 | ಕೊಪ್ಪಳ | 84 | ಕೊಪ್ಪಳ | ನಗರಸಭೆ |
| | | 85 | ಗಂಗಾವತಿ | ನಗರಸಭೆ |
| | | 86 | ಕುಷ್ಟಗಿ | ಪುರಸಭೆ |
| | | 87 | ಯಲಬುರ್ಗಾ | ಪಟ್ಟಣ ಪಂಚಾಯತಿ |
| 16 | ಮೈಸೂರು | 88 | ಕೆ.ಆರ್.ನಗರ | ಪುರಸಭೆ |
| | | 89 | ನಂಜನಗೂಡು | ಪುರಸಭೆ |
| | | 90 | ಹುಣಸೂರು | ಪುರಸಭೆ |
| | | 91 | ಬನ್ನೂರು | ಪುರಸಭೆ |
| | | 92 | ಟಿ.ನರಸೀಪುರ | ಪಟ್ಟಣ ಪಂಚಾಯತಿ |
| | | 93 | ಹೆಚ್.ಡಿ.ಕೋಟೆ | ಪಟ್ಟಣ ಪಂಚಾಯತಿ |
| | | 94 | ಪಿರಿಯಾಪಟ್ಟಣ | ಪಟ್ಟಣ ಪಂಚಾಯತಿ |
| 17 | ಚಾಮರಾಜನಗರ | 95 | ಚಾಮರಾಜನಗರ | ನಗರಸಭೆ |
| | | 96 | ಕೊಳ್ಳೇಗಾಲ | ನಗರಸಭೆ |
| | | 97 | ಗುಂಡ್ಲುಪೇಟೆ | ಪುರಸಭೆ |
| | | 98 | ಯಳಂದೂರು | ಪಟ್ಟಣ ಪಂಚಾಯತಿ |
| | | 99 | ಹನೂರು | ಪಟ್ಟಣ ಪಂಚಾಯತಿ |
| 18 | ಚಿಕ್ಕಮಗಳೂರು | 100 | ಚಿಕ್ಕಮಗಳೂರು | ನಗರಸಭೆ |
| | | 101 | ಕಡೂರು | ಪುರಸಭೆ |
| | | 102 | ಬೀರೂರು | ಪುರಸಭೆ |
| | | 103 | ತರೀಕೆರೆ | ಪುರಸಭೆ |
| | | 104 | ಮೂಡಿಗೆರೆ | ಪಟ್ಟಣ ಪಂಚಾಯತಿ |
| | | 105 | ನರಸಿಂಹರಾಜಪುರ | ಪಟ್ಟಣ ಪಂಚಾಯತಿ |
| | | 106 | ಕೊಪ್ಪ | ಪಟ್ಟಣ ಪಂಚಾಯತಿ |
| | | 107 | ಶೃಂಗೇರಿ | ಪಟ್ಟಣ ಪಂಚಾಯತಿ |
| 19 | ದಕ್ಷಿಣ ಕನ್ನಡ | 108 | ಪುತ್ತೂರು | ಪುರಸಭೆ |
| | | 109 | ಮೂಡಬಿದ್ರೆ | ಪುರಸಭೆ |
| | | 110 | ಬಂಟ್ವಾಳ | ಪುರಸಭೆ |
| | | 111 | ಉಲ್ಲಾಳ | ಪುರಸಭೆ |
| | | 112 | ಸುಳ್ಯ | ಪಟ್ಟಣ ಪಂಚಾಯತಿ |
| | | 113 | ಬೆಳ್ತಂಗಡಿ | ಪಟ್ಟಣ ಪಂಚಾಯತಿ |
| 20 | ಉಡುಪಿ | 114 | ಉಡುಪಿ | ನಗರಸಭೆ |
| | | 115 | ಕುಂದಾಪುರ | ಪುರಸಭೆ |
| | | 116 | ಕಾರ್ಕಳ | ಪುರಸಭೆ |
| | | 117 | ಸಾಲಿಗ್ರಾಮ | ಪಟ್ಟಣ ಪಂಚಾಯತಿ |
| 21 | ಹಾಸನ | 118 | ಹಾಸನ | ನಗರಸಭೆ |
| | | 119 | ಅರಸೀಕೆರೆ | ಪುರಸಭೆ |
| | | 120 | ಹೊಳೆನರಸೀಪುರ | ಪುರಸಭೆ |
| | | 121 | ಸಕಲೇಶಪುರ | ಪುರಸಭೆ |

| ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ –2013 | | | | |
|---|---|---|---|---|
| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಕ್ರಮ ಸಂಖ್ಯೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | |
| | | 122 | ಬೇಲೂರು | ಪುರಸಭೆ |
| | | 123 | ಚನ್ನರಾಯಪಟ್ಟಣ | ಪುರಸಭೆ |
| | | 124 | ಆಲೂರು | ಪಟ್ಟಣ ಪಂಚಾಯತಿ |
| | | 125 | ಅರಕಲಗೂಡು | ಪಟ್ಟಣ ಪಂಚಾಯತಿ |
| 22 | ಮಂಡ್ಯ | 126 | ಮಂಡ್ಯ | ನಗರಸಭೆ |
| | | 127 | ಮದ್ದೂರು | ಪುರಸಭೆ |
| | | 128 | ಮಳವಳ್ಳಿ | ಪುರಸಭೆ |
| | | 129 | ಶ್ರೀರಂಗಪಟ್ಟಣ | ಪುರಸಭೆ |
| | | 130 | ಕೆ.ಆರ್.ಪೇಟೆ | ಪುರಸಭೆ |
| | | 131 | ಪಾಂಡವಪುರ | ಪಟ್ಟಣ ಪಂಚಾಯತಿ |
| | | 132 | ನಾಗಮಂಗಲ | ಪಟ್ಟಣ ಪಂಚಾಯತಿ |
| 23 | ಕೊಡಗು | 133 | ಕುಶಾಲನಗರ | ಪಟ್ಟಣ ಪಂಚಾಯತಿ |
| | | 134 | ವಿರಾಜಪೇಟೆ | ಪಟ್ಟಣ ಪಂಚಾಯತಿ |
| | | 135 | ಸೋಮವಾರಪೇಟೆ | ಪಟ್ಟಣ ಪಂಚಾಯತಿ |
| 24 | ಬೆಳಗಾಂ | 136 | ಗೋಕಾಕ್ | ನಗರಸಭೆ |
| | | 137 | ನಿಪ್ಪಾಣಿ | ನಗರಸಭೆ |
| | | 138 | ರಾಮದುರ್ಗ | ಪುರಸಭೆ |
| | | 139 | ಸಂಕೇಶ್ವರ | ಪುರಸಭೆ |
| | | 140 | ಬೈಲಹೊಂಗಲ | ಪುರಸಭೆ |
| | | 141 | ಚಿಕ್ಕೋಡಿ | ಪುರಸಭೆ |
| | | 142 | ಅಥಣಿ | ಪುರಸಭೆ |
| | | 143 | ಮೂಡಲಗಿ | ಪುರಸಭೆ |
| | | 144 | ಸವದತ್ತಿ | ಪುರಸಭೆ |
| | | 145 | ಹುಕ್ಕೇರಿ | ಪಟ್ಟಣ ಪಂಚಾಯತಿ |
| | | 146 | ಖಾನಪುರ | ಪಟ್ಟಣ ಪಂಚಾಯತಿ |
| | | 147 | ಸದಲಗಾ | ಪಟ್ಟಣ ಪಂಚಾಯತಿ |
| | | 148 | ರಾಯಬಾಗ್ | ಪಟ್ಟಣ ಪಂಚಾಯತಿ |
| | | 149 | ಕುಡಚಿ | ಪಟ್ಟಣ ಪಂಚಾಯತಿ |
| | | 150 | ಕೊಣ್ಣೂರು | ಪಟ್ಟಣ ಪಂಚಾಯತಿ |
| 25 | ಬಿಜಾಪುರ | 151 | ಬಿಜಾಪುರ | ನಗರಸಭೆ |
| | | 152 | ಮುದ್ದೇಬಿಹಾಳ | ಪುರಸಭೆ |
| | | 153 | ತಾಳಿಕೋಟೆ | ಪುರಸಭೆ |
| | | 154 | ಇಂಡಿ | ಪುರಸಭೆ |
| | | 155 | ಸಿಂಧಗಿ | ಪುರಸಭೆ |
| | | 156 | ಬಸವನ ಬಾಗೇವಾಡಿ | ಪುರಸಭೆ |
| 26 | ಬಾಗಲಕೋಟೆ | 157 | ಬಾಗಲಕೋಟೆ | ನಗರಸಭೆ |
| | | 158 | ಜಮಖಂಡಿ | ನಗರಸಭೆ |
| | | 159 | ಆರ್.ಬನಹಟ್ಟಿ | ನಗರಸಭೆ |

| ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ –2013 | | | | |
|---|---|---|---|---|
| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಕ್ರಮ ಸಂಖ್ಯೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | |
| | | 160 | ಇಳಕಲ್ | ನಗರಸಭೆ |
| | | 161 | ಮುದೋಳ | ಪುರಸಭೆ |
| | | 162 | ಮಹಾಲಿಂಗಪುರ | ಪುರಸಭೆ |
| | | 163 | ಗುಳೇದಗುಡ್ಡ | ಪುರಸಭೆ |
| | | 164 | ಬಾದಾಮಿ | ಪುರಸಭೆ |
| | | 165 | ತೇರದಾಳ | ಪುರಸಭೆ |
| | | 166 | ಹುನಗುಂದ | ಪಟ್ಟಣ ಪಂಚಾಯತಿ |
| | | 167 | ಕೆರೂರು | ಪಟ್ಟಣ ಪಂಚಾಯತಿ |
| | | 168 | ಬೀಳಗಿ | ಪಟ್ಟಣ ಪಂಚಾಯತಿ |
| 27 | ಧಾರವಾಡ | 169 | ಅಣ್ಣಿಗೇರಿ | ಪುರಸಭೆ |
| | | 170 | ನವಲಗುಂದ | ಪುರಸಭೆ |
| | | 171 | ಕುಂದಗೋಳ | ಪಟ್ಟಣ ಪಂಚಾಯತಿ |
| | | 172 | ಅಳ್ನಾವರ | ಪಟ್ಟಣ ಪಂಚಾಯತಿ |
| | | 173 | ಕಲಘಟಗಿ | ಪಟ್ಟಣ ಪಂಚಾಯತಿ |
| 28 | ಗದಗ | 174 | ಗದಗ ಬೆಟಗೇರಿ | ನಗರಸಭೆ |
| | | 175 | ಮುಂಡರಗಿ | ಪುರಸಭೆ |
| | | 176 | ರೋಣ | ಪುರಸಭೆ |
| | | 177 | ನರಗುಂದ | ಪುರಸಭೆ |
| | | 178 | ಗಜೇಂದ್ರಗಢ | ಪುರಸಭೆ |
| | | 179 | ಲಕ್ಷ್ಮೇಶ್ವರ | ಪುರಸಭೆ |
| | | 180 | ಮುಳಗುಂದ | ಪಟ್ಟಣ ಪಂಚಾಯತಿ |
| | | 181 | ನರೇಗಲ್ | ಪಟ್ಟಣ ಪಂಚಾಯತಿ |
| | | 182 | ಶಿರಹಟ್ಟಿ | ಪಟ್ಟಣ ಪಂಚಾಯತಿ |
| 29 | ಹಾವೇರಿ | 183 | ರಾಣೇಬೆನ್ನೂರು | ನಗರಸಭೆ |
| | | 184 | ಹಾವೇರಿ | ನಗರಸಭೆ |
| | | 185 | ಬ್ಯಾಡಗಿ | ಪುರಸಭೆ |
| | | 186 | ಹಾನಗಲ್ | ಪುರಸಭೆ |
| | | 187 | ಸವಣೂರು | ಪುರಸಭೆ |
| | | 188 | ಬಂಕಾಪುರ | ಪುರಸಭೆ |
| | | 189 | ಶಿಗ್ಗಾಂವ್ | ಪುರಸಭೆ |
| | | 190 | ಹಿರೇಕೆರೂರು | ಪಟ್ಟಣ ಪಂಚಾಯತಿ |
| 30 | ಉತ್ತರ ಕನ್ನಡ | 191 | ದಾಂಡೇಲಿ | ನಗರಸಭೆ |
| | | 192 | ಕಾರವಾರ | ನಗರಸಭೆ |
| | | 193 | ಶಿರಸಿ | ನಗರಸಭೆ |
| | | 194 | ಕುಮಟಾ | ಪುರಸಭೆ |
| | | 195 | ಭಟ್ಕಳ | ಪುರಸಭೆ |

| ನಗರ ಸ್ಥಳೀಯ ಸಂಸ್ಥೆಗಳ ಸಾರ್ವತ್ರಿಕ ಚುನಾವಣೆ –2013 | | | | |
|---|---|---|---|---|
| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಕ್ರಮ ಸಂಖ್ಯೆ | ನಗರ ಸ್ಥಳೀಯ ಸಂಸ್ಥೆಯ ಹೆಸರು | |
| | | 196 | ಹೊನ್ನಾವರ | ಪಟ್ಟಣ ಪಂಚಾಯತಿ |
| | | 197 | ಅಂಕೋಲ | ಪಟ್ಟಣ ಪಂಚಾಯತಿ |
| | | 198 | ಹಳಿಯಾಳ | ಪಟ್ಟಣ ಪಂಚಾಯತಿ |
| | | 199 | ಸಿದ್ದಾಪುರ | ಪಟ್ಟಣ ಪಂಚಾಯತಿ |
| | | 200 | ಯಲ್ಲಾಪುರ | ಪಟ್ಟಣ ಪಂಚಾಯತಿ |
| | | 201 | ಮುಂಡಗೋಡ | ಪಟ್ಟಣ ಪಂಚಾಯತಿ |

**ಹೊನ್ನಾಂಬ ಎಸ್**
ಉಪ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – IV-A | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪) | ನಂ. ೪೧೦ |
|---|---|---|
| Part – IV-A | Bangalore, Thursday, February 14, 2013 (Magha 25, Shaka Varsha 1934) | No. 410 |



## KARNATAKA LEGISLATIVE ASSEMBLY SECRETARIAT

**NOTIFICATION**

**No. KLA/LGA/07/Bill/2013, Bangalore, Dated: 14-02-2013**

The following Bill was introduced in Legislative Assembly on 14-2-2013

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನಾರನೇ ಅಧಿವೇಶನ**

**ಕರ್ನಾಟಕ ಧನವಿನಿಯೋಗ (ಲೇಖಾನುದಾನ) ವಿಧೇಯಕ, 2013**

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 07)**

2013–14ನೇ ಹಣಕಾಸು ಭಾಗ ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಮೊತ್ತ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2013–14ನೇ ಹಣಕಾಸು ಭಾಗ ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳಸಂದಾಯ ಮತ್ತು ವಿನಿಯೋಗಕ್ಕಾಗಿಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ:

ಇದುಭಾರತಗಣರಾಜ್ಯದಅರವತ್ತನಾಲ್ಕನೇ ವರ್ಷದಲ್ಲಿಕರ್ನಾಟಕರಾಜ್ಯವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮವಾಗಲಿ.

**1. ಸಂಕ್ಷಿಪ್ತ ಹೆಸರು**: ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಲೇಖಾನುದಾನ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ** 2013–14ನೇ ಹಣಕಾಸುಭಾಗವರ್ಷಕ್ಕಾಗಿ **4041371.72** ಲಕ್ಷ ರೂಪಾಯಿಗಳ ನೀಡಿಕೆ: ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ 2013–14ನೇ ಹಣಕಾಸು ಭಾಗ ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ **ನಲವತ್ತು ಸಾವಿರದ ನಾಲ್ಕು ನೂರಾ ಹದಿಮೂರು ಕೋಟಿ ಎಪ್ಪತ್ತೊಂದು ಲಕ್ಷದ ಎಪ್ಪತ್ತೆರಡು ಸಾವಿರ** ರೂಪಾಯಿಗಳಿಗೆ ಮೀರದಷ್ಟು ಮೊಬಲಗನ್ನು ಮಾತ್ರ ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು.

**3. ಧನವಿನಿಯೋಗ :** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**
**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

(`. ಲಕ್ಷಗಳಲ್ಲಿ)

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 1,43,085.90 | 9.18 | 1,43,095.08 |
| | | ಬಂಡವಾಳ | 3,636.30 | ... | 3,636.30 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 40,481.78 | 3.33 | 40,485.11 |
| | | ಬಂಡವಾಳ | 4,766.19 | ... | 4,766.19 |
| 03 | ಆರ್ಥಿಕ | ರಾಜಸ್ವ | 3,65,343.23 | 14.42 | 3,65,357.65 |
| | | ಬಂಡವಾಳ | 675.29 | ... | 675.29 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 27,025.78 | 5,435.63 | 32,461.41 |
| | | ಬಂಡವಾಳ | 366.63 | ... | 366.63 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 1,41,593.77 | ... | 1,41,593.77 |
| | | ಬಂಡವಾಳ | 8,560.15 | ... | 8,560.15 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ರಾಜಸ್ವ | 554.94 | ... | 554.94 |
| | | ಬಂಡವಾಳ | 23,137.69 | ... | 23,137.69 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 1,72,783.42 | 533.28 | 1,73,316.70 |
| | | ಬಂಡವಾಳ | 74,520.88 | ... | 74,520.88 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 34,416.31 | 14,003.93 | 48,420.24 |
| | | ಬಂಡವಾಳ | 674.93 | ... | 674.93 |
| 09 | ಸಹಕಾರ | ರಾಜಸ್ವ | 46,161.67 | ... | 46,161.67 |
| | | ಬಂಡವಾಳ | 1,441.52 | ... | 1,441.52 |
| 10 | ಸಮಾಜ ಕಲ್ಯಾಣ | ರಾಜಸ್ವ | 1,42,043.62 | ... | 1,42,043.62 |
| | | ಬಂಡವಾಳ | 14,553.83 | ... | 14,553.83 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 1,07,277.68 | ... | 1,07,277.68 |
| | | ಬಂಡವಾಳ | 4,387.89 | ... | 4,387.89 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 10,510.93 | ... | 10,510.93 |
| | | ಬಂಡವಾಳ | 8,391.83 | ... | 8,391.83 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 43,301.72 | 0.97 | 43,302.69 |
| | | ಬಂಡವಾಳ | 26.66 | ... | 26.66 |
| 14 | ಕಂದಾಯ | ರಾಜಸ್ವ | 1,19,862.63 | 999.90 | 1,20,862.53 |
| | | ಬಂಡವಾಳ | 45.42 | ... | 45.42 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 6,070.31 | ... | 6,070.31 |
| | | ಬಂಡವಾಳ | 416.63 | ... | 416.63 |
| 16 | ವಸತಿ | ರಾಜಸ್ವ | 39,859.74 | ... | 39,859.74 |
| | | ಬಂಡವಾಳ | ... | ... | ... |
| 17 | ಶಿಕ್ಷಣ | ರಾಜಸ್ವ | 6,08,651.62 | ... | 6,08,651.62 |
| | | ಬಂಡವಾಳ | 16,843.92 | ... | 16,843.92 |

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 22,006.51 | ... | 22,006.51 |
| | | ಬಂಡವಾಳ | 9,195.53 | ... | 9,195.53 |
| 19 | ನಗರಾಭಿವೃದ್ಧಿ | ರಾಜಸ್ವ | 2,46,343.67 | ... | 2,46,343.67 |
| | | ಬಂಡವಾಳ | 42,762.39 | ... | 42,762.39 |
| 20 | ಲೋಕೋಪಯೋಗಿ | ರಾಜಸ್ವ | 79,906.41 | ... | 79,906.41 |
| | | ಬಂಡವಾಳ | 1,24,669.52 | ... | 1,24,669.52 |
| 21 | ಜಲಸಂಪನ್ಮೂಲ | ರಾಜಸ್ವ | 41,048.21 | ... | 41,048.21 |
| | | ಬಂಡವಾಳ | 2,43,794.26 | ... | 2,43,794.26 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 1,64,781.51 | ... | 1,64,781.51 |
| | | ಬಂಡವಾಳ | 12,845.05 | ... | 12,845.05 |
| 23 | ಕಾರ್ಮಿಕ | ರಾಜಸ್ವ | 20,108.91 | ... | 20,108.91 |
| | | ಬಂಡವಾಳ | 1,133.22 | ... | 1,133.22 |
| 24 | ಇಂಧನ | ರಾಜಸ್ವ | 1,93,185.11 | 99.99 | 1,93,285.10 |
| | | ಬಂಡವಾಳ | 38,942.77 | ... | 38,942.77 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 9,492.25 | ... | 9,492.25 |
| | | ಬಂಡವಾಳ | 183.32 | ... | 183.32 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 7,454.47 | ... | 7,454.47 |
| | | ಬಂಡವಾಳ | 15,221.81 | ... | 15,221.81 |
| 27 | ಕಾನೂನು | ರಾಜಸ್ವ | 19,146.73 | .... | 19,146.73 |
| | | ಬಂಡವಾಳ | ... | ... | ... |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 5,122.60 | 159.83 | 5,282.43 |
| | | | | | |
| 29 | ಋಣ ಮೇಲುಸ್ತುವಾರಿ | ರಾಜಸ್ವ | ... | 3,16,635.00 | 3,16,635.00 |
| | | ಬಂಡವಾಳ | ... | 1,94,661.20 | 1,94,661.20 |
| | **ಜುಮ್ಲಾ** | | **3,508,815.06** | **532,556.66** | **4,041,371.72** |

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

2013–14ನೇ ಹಣಕಾಸು ಭಾಗ ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 204ನೇ ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಜಗದೀಶ್ ಶೆಟ್ಟರ್**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SIXTEENTH SESSION**

# THE KARNATAKA APPROPRIATION (VOTE ON ACCOUNT) BILL, 2013

**(L.A. Bill No. 7 of 2013)**

A Bill to authorise payment and appropriation of certain sums from and out of the Consolidated Fund of the State of Karnataka for the Services of the part of the Financial Year 2013-14.

Whereas it is expedient to authorize payment and appropriation of certain sums from and out of the Consolidated fund of the State for the services of the part of the Financial Year 2013-14.

Be it enacted by the Karnataka State Legislature in the Sixty Fourth Year of the Republic of India as follows :-

**1. Short Title :** This Act may be called the Karnataka Appropriation (Vote on Account) Act, 2013.

**2. Issue of Rupees 4041371.72** Lakhs out of the Consolidated Fund of the State of Karnataka for the part of the Financial year 2013-14 : From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of Forty thousand Four hundred thirteen crores seventy one lakhs seventy two thousand rupees only towards defraying the several charges which will come in the course of payment during the part the Financial Year 2013-14 in respect of the services specified in column 2 of the Schedule.

**3. Appropriation :-** The sums authorised to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**
**(See Section 2 and 3)**

(`. in Lakhs)

| Demand No. | Service & Purpose | | Sums not exceeding voted by the Legislative Assembly | Sums not exceeding Charged on the consolidated Fund | Total |
|---|---|---|---|---|---|
| 1 | 2 | | 3 | 4 | 5 |
| 01 | Agriculture & Horticulture | Revenue | 1,43,085.90 | 9.18 | 1,43,095.08 |
| | | Capital | 3,636.30 | ... | 3,636.30 |
| 02 | Animal Husbandry & Fisheries | Revenue | 40,481.78 | 3.33 | 40,485.11 |
| | | Capital | 4,766.19 | ... | 4,766.19 |
| 03 | Finance | Revenue | 3,65,343.23 | 14.42 | 3,65,357.65 |
| | | Capital | 675.29 | ... | 675.29 |
| 04 | Department of Personnel & Administrative Reforms | Revenue | 27,025.78 | 5,435.63 | 32,461.41 |
| | | Capital | 366.63 | ... | 366.63 |
| 05 | Home & Transport | Revenue | 1,41,593.77 | ... | 1,41,593.77 |
| | | Capital | 8,560.15 | ... | 8,560.15 |
| 06 | Infrastructure Development | Revenue | 554.94 | ... | 554.94 |
| | | Capital | 23,137.69 | ... | 23,137.69 |
| 07 | Rural Development & Panchayath Raj | Revenue | 1,72,783.42 | 533.28 | 1,73,316.70 |
| | | Capital | 74,520.88 | ... | 74,520.88 |
| 08 | Forest, Ecology & Environment | Revenue | 34,416.31 | 14,003.93 | 48,420.24 |
| | | Capital | 674.93 | ... | 674.93 |
| 09 | Co-operation | Revenue | 46,161.67 | ... | 46,161.67 |
| | | Capital | 1,441.52 | ... | 1,441.52 |
| 10 | Social Welfare | Revenue | 1,42,043.62 | ... | 1,42,043.62 |
| | | Capital | 14,553.83 | ... | 14,553.83 |

| Demand No. | Service & Purpose | | Sums not exceeding voted by the Legislative Assembly | Charged on the consolidated Fund | Total |
|---|---|---|---|---|---|
| 1 | 2 | | 3 | 4 | 5 |
| 11 | Women & Child Development | Revenue | 1,07,277.68 | ... | 1,07,277.68 |
| | | Capital | 4,387.89 | ... | 4,387.89 |
| 12 | Information, Tourism & Youth Services | Revenue | 10,510.93 | ... | 10,510.93 |
| | | Capital | 8,391.83 | ... | 8,391.83 |
| 13 | Food & Civil Supplies | Revenue | 43,301.72 | 0.97 | 43,302.69 |
| | | Capital | 26.66 | ... | 26.66 |
| 14 | Revenue | Revenue | 1,19,862.63 | 999.90 | 1,20,862.53 |
| | | Capital | 45.42 | ... | 45.42 |
| 15 | Information Technology | Revenue | 6,070.31 | ... | 6,070.31 |
| | | Capital | 416.63 | ... | 416.63 |
| 16 | Housing | Revenue | 39,859.74 | ... | 39,859.74 |
| | | Capital | ... | ... | ... |
| 17 | Education | Revenue | 6,08,651.62 | ... | 6,08,651.62 |
| | | Capital | 16,843.92 | ... | 16,843.92 |
| 18 | Commerce and Industries | Revenue | 22,006.51 | ... | 22,006.51 |
| | | Capital | 9,195.53 | ... | 9,195.53 |
| 19 | Urban Development | Revenue | 2,46,343.67 | ... | 2,46,343.67 |
| | | Capital | 42,762.39 | ... | 42,762.39 |
| 20 | Public Works | Revenue | 79,906.41 | ... | 79,906.41 |
| | | Capital | 1,24,669.52 | ... | 1,24,669.52 |
| 21 | Water Resources | Revenue | 41,048.21 | ... | 41,048.21 |
| | | Capital | 2,43,794.26 | ... | 2,43,794.26 |
| 22 | Health and Family Welfare | Revenue | 1,64,781.51 | ... | 1,64,781.51 |
| | | Capital | 12,845.05 | ... | 12,845.05 |
| 23 | Labour | Revenue | 20,108.91 | ... | 20,108.91 |
| | | Capital | 1,133.22 | ... | 1,133.22 |
| 24 | Energy | Revenue | 1,93,185.11 | 99.99 | 1,93,285.10 |
| | | Capital | 38,942.77 | ... | 38,942.77 |
| 25 | Kannada and Culture | Revenue | 9,492.25 | ... | 9,492.25 |
| | | Capital | 183.32 | ... | 183.32 |
| 26 | Planning, Statistics, Science and Technology | Revenue | 7,454.47 | ... | 7,454.47 |
| | | Capital | 15,221.81 | ... | 15,221.81 |
| 27 | Law | Revenue | 19,146.73 | .... | 19,146.73 |
| | | Capital | ... | ... | ... |
| 28 | Parliamentary Affairs and Legislation | Revenue | 5,122.60 | 159.83 | 5,282.43 |
| | | | | | |
| 29 | Debt Servicing | Revenue | ... | 3,16,635.00 | 3,16,635.00 |
| | | Capital | ... | 1,94,661.20 | 1,94,661.20 |
| | **GRAND TOTAL** | | **3,508,815.06** | **532,556.66** | **4,041,371.72** |

**STATEMENT OF OBJECTS AND REASONS**

This Bill is introduced in pursuance of the provisions of Article 204 of the Constitution of India to provide for the appropriation out of the Consolidated Fund of the State towards defraying the several charges which will come in course of payment during the part of the Financial Year 2013-14.

**JAGADISH SHETTAR**
Chief Minister &
Minister for Finance

**P. OMPRAKASHA**
Secretary
Karnataka Legislative Assembly


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪) | ನಂ. ೪೧೧ |
|---|---|---|
| **Part – IV-A** | **Bangalore, Thursday, February 14, 2013 (Magha 25, Shaka Varsha 1934)** | **No. 411** |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/08/Bill/2013, Bangalore, Dated: 14-02-2013**

The following Bill was introduced in Legislative Assembly on 14-2-2013

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನಾರನೇ ಅಧಿವೇಶನ**

**ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ವಿಧೇಯಕ, 2013**

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 08)**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು 2013ರ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **10ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32)(ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 10ನೇ ಪ್ರಕರಣದ (4)ನೇ ಉಪಪ್ರಕರಣದಲ್ಲಿ "29ನೇ ಪ್ರಕರಣ ಅಥವಾ 30ನೇ ಪ್ರಕರಣಕ್ಕೆ" ಎಂಬ ಪದಗಳಿಗೆ "29ನೇ ಪ್ರಕರಣಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

3. **38ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 38ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ "ಹತ್ತು ದಿನಗಳೊಳಗಾಗಿ" ಎಂಬ ಪದಗಳಿಗೆ "ಮೂವತ್ತು ದಿನಗಳೊಳಗಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

4. **39ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 39ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ "ಹತ್ತು ದಿನಗಳೊಳಗಾಗಿ" ಎಂಬ ಪದಗಳಿಗೆ "ಮೂವತ್ತು ದಿನಗಳೊಳಗಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(j) (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಈ ಪ್ರಕರಣದ ಅಡಿಯಲ್ಲಿ ಮರು ನಿರ್ಧರಣೆಯನ್ನು ಮಾಡಿದ ತರುವಾಯ,–

(ಎ) ಯಾವುದೇ ಹೆಚ್ಚಿನ ಸಾಕ್ಷ್ಯವು ನಿಯಮಿಸಲಾದ ಪ್ರಾಧಿಕಾರದ ಗಮನಕ್ಕೆ ಬಂದಲ್ಲಿ, ಅಥವಾ

(ಬಿ) ನಿಯಮಿಸಲಾದ ಪ್ರಾಧಿಕಾರಕ್ಕೆ, ಯಾವುದೇ ತೆರಿಗೆ ಅವಧಿಯ ಸಂಬಂಧದಲ್ಲಿ ವ್ಯಾಪಾರಿಯ ವಹಿವಾಟಿನ ಸಂಪೂರ್ಣ ಅಥವಾ ಯಾವುದೇ ಭಾಗವು ತೆರಿಗೆಯ ಮರು ನಿರ್ಧರಣೆಯಿಂದ ತಪ್ಪಿ ಹೋಗಿದೆ ಎಂಬುದನ್ನು ನಂಬಲು ಕಾರಣವಿದ್ದರೆ; ಅಥವಾ

(ಸಿ) ತೆರಿಗೆಯು ಕಡಿಮೆಯಾಗಿ ಮರು ನಿರ್ಧರಣೆಯಾಗಿದ್ದಲ್ಲಿ; ಅಥವಾ

(ಡಿ) ಈ ಅಧಿನಿಯಮದ ಅಡಿಯಲ್ಲಿ ಯಾವ ದರದಲ್ಲಿ ತೆರಿಗೆಯನ್ನು ನಿರ್ಧರಿಸಬಹುದಾಗಿತ್ತೋ ಆ ದರಕ್ಕಿಂತ ಕಡಿಮೆ ದರದಲ್ಲಿ ಮರು ನಿರ್ಧರಿಸಿದ್ದರೆ; ಅಥವಾ

(ಇ) ಅದರ ಸಂಬಂಧದಲ್ಲಿ ಯಾವುವೇ ಕಡಿತಗಳು ಅಥವಾ ವಿನಾಯಿತಿಗಳಿಗೆ ತಪ್ಪಾಗಿ ಅವಕಾಶ ನೀಡಲಾಗಿದ್ದರೆ,

– ನಿಯಮಿಸಲಾದ ಪ್ರಾಧಿಕಾರವು, ವಹಿವಾಟಿನ ಅಂಥ ತಪ್ಪಿ ಹೋದ ಸಂಪೂರ್ಣ ಅಥವಾ ಅದರ ಭಾಗವು ಮರು ನಿರ್ಧರಣೆಯ ಕಾಲದಲ್ಲಿ ಸದರಿ ಪ್ರಾಧಿಕಾರದ ಮುಂದೆ ಈಗಾಗಲೇ ಬಂದಿತ್ತೆಂಬ ವಾಸ್ತವಾಂಶ ಏನೇ ಇದ್ದರೂ, ಅಂಥ ಮೊದಲಿನ ಮರು ನಿರ್ಧರಣೆಗೆ ಹೆಚ್ಚುವರಿಯಾಗಿ ಯಾವುದೇ ಮತ್ತಷ್ಟು ಮರು ನಿರ್ಧರಣೆ ಮಾಡಬಹುದು."

**5. 47ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 47ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ "30ನೇ ಪ್ರಕರಣಕ್ಕೆ ಒಳಪಟ್ಟು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**6. 62ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 62ನೇ ಪ್ರಕರಣದ (4)ನೇ ಉಪಪ್ರಕರಣದ (ಸಿ) ಖಂಡದಲ್ಲಿ,–

(i) (i) ನೇ ಉಪಖಂಡದಲ್ಲಿ,

(ಎ) "ಮೊಬಲಗಿನ ಅರ್ಧದಷ್ಟನ್ನು" ಎಂಬ ಪದಗಳಿಗೆ "ಮೊಬಲಗಿನ ಶೇಕಡಾ ಮೂವತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) "ಇನ್ನುಳಿದ ಅರ್ಧದಷ್ಟು" ಎಂಬ ಪದಗಳಿಗೆ "ಇನ್ನುಳಿದ ಶೇಕಡಾ ಎಪ್ಪತ್ತರಷ್ಟು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (ii) ನೇ ಉಪಖಂಡದಲ್ಲಿ,

(ಎ) "ಮೊಬಲಗಿನ ಅರ್ಧದಷ್ಟನ್ನು" ಎಂಬ ಪದಗಳಿಗೆ "ಮೊಬಲಗಿನ ಶೇಕಡಾ ಮೂವತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) "ತೆರಿಗೆಯ ಇನ್ನುಳಿದ ಅರ್ಧದಷ್ಟನ್ನು ಅಥವಾ ಇತರ ಮೊಬಲಗನ್ನು" ಎಂಬ ಪದಗಳಿಗೆ "ತೆರಿಗೆಯ ಅಥವಾ ಇತರ ಮೊಬಲಗಿನ ಇನ್ನುಳಿದ ಶೇಕಡಾ ಎಪ್ಪತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದಲ್ಲಿ,–

(1) (4)ನೇ ಉಪಪ್ರಕರಣದಲ್ಲಿ "ಮೊಬಲಗಿನ ಅರ್ಧದಷ್ಟನ್ನು" ಎಂಬ ಪದಗಳಿಗೆ "ಮೊಬಲಗಿನ ಶೇಕಡಾ ಮೂವತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(2) (7)ನೇ ಉಪಪ್ರಕರಣದಲ್ಲಿ,–

(ಎ) (ಎ) ಖಂಡದಲ್ಲಿ,

(i) "ಮೊಬಲಗಿನ ಅರ್ಧವನ್ನು" ಎಂಬ ಪದಗಳಿಗೆ "ಮೊಬಲಗಿನ ಶೇಕಡಾ ಮೂವತ್ತರಷ್ಟನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) "ಇನ್ನುಳಿದ ಅರ್ಧ ಭಾಗದ ಸಂದಾಯಕ್ಕೆ" ಎಂಬ ಪದಗಳಿಗೆ "ಇನ್ನುಳಿದ ಶೇಕಡಾ ಎಪ್ಪತ್ತರಷ್ಟು ಸಂದಾಯಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) (ಬಿ) ಖಂಡದಲ್ಲಿ "ಇತರ ಮೊಬಲಗಿನ ಅರ್ಧದ ವಸೂಲಿಯ" ಎಂಬ ಪದಗಳಿಗೆ "ಇತರ ಮೊಬಲಗಿನ ಶೇಕಡಾ ಎಪ್ಪತ್ತರಷ್ಟು ವಸೂಲಿಯ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**8. 63ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ಎ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ತೆರಿಗೆಯ ನಿರ್ಧರಣೆಯನ್ನು ರದ್ದುಗೊಳಿಸುವ ಅಥವಾ ಹೊಸದಾಗಿ ತೆರಿಗೆ ನಿರ್ಧರಣೆಯನ್ನು ನಿರ್ದೇಶಿಸುವ" ಎಂಬ ಪದಗಳಿಗೆ "ತೆರಿಗೆಯ ನಿರ್ಧರಣೆಯನ್ನು ರದ್ದುಗೊಳಿಸುವ ಮತ್ತು ಹೊಸದಾಗಿ ತೆರಿಗೆಯ ನಿರ್ಧರಣೆಯನ್ನು ನಿರ್ದೇಶಿಸುವ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**9. 74ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 74ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ಅಥವಾ ಸಿವಿಲ್ ಕಾಮಗಾರಿ ಕರಾರನ್ನು ಕೈಗೊಳ್ಳಲು ಮಾಡಿಕೊಂಡ ಒಪ್ಪಂದದ ಪ್ರತಿಯನ್ನು ಸಲ್ಲಿಸಲು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**10. 76ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 76ನೇ ಪ್ರಕರಣದ (1)ನೇ ಉಪಪ್ರಕರಣದ,–

(i) (ಎ) ಖಂಡದಲ್ಲಿ "ಅಥವಾ 30ನೇ ಪ್ರಕರಣದ (1)ನೇ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಒಂದು ಜಮಾ ಅಥವಾ ಖರ್ಚು ಚೀಟಿಯನ್ನು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು; ಮತ್ತು

(ii) (ಬಿ) ಖಂಡದಲ್ಲಿ "ಅಥವಾ 30ನೇ ಪ್ರಕರಣದಲ್ಲಿ ಉಪಬಂಧಿಸಲಾದುದಕ್ಕೆ ಹೊರತಾಗಿ ಒಂದು ಜಮಾ ಅಥವಾ ಖರ್ಚು ಚೀಟಿಯನ್ನು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**11. ಒಂದನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಒಂದನೇ ಅನುಸೂಚಿಯಲ್ಲಿ 5ನೇ ಕ್ರಮ ಸಂಖ್ಯೆಗೆ ಸಂಬಂಧಿಸಿದ ನಮೂದುಗಳಲ್ಲಿ, (ii)ನೇ ಬಾಬಿನಲ್ಲಿ "ಹಿಂಡಿ ಮತ್ತು ಬೂಸ" ಎಂಬ ಪದಗಳಿಗೆ "ಗೋಧಿ ಬೂಸ ಮತ್ತು ಸೋಯಾಬೀನ್‍ನ ಎಣ್ಣೆ ತೆಗೆದ ಹಿಂಡಿಯನ್ನು ಹೊರತುಪಡಿಸಿ ಎಣ್ಣೆ ತೆಗೆದ ಹಿಂಡಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಇತರ ವಿಷಯಗಳನ್ನು ಜಾರಿಗೊಳಿಸುವುದಕ್ಕಾಗಿ ಮತ್ತು ಸಂಬಂಧಿಸಿದ ಇತರೆ ವಿಷಯಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆಗಳ ಅಧಿನಿಯಮ 2003ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಕೆಲವು ಆನುಷಂಗಿಕ ಮತ್ತು ಪ್ರಾಸಂಗಿಕ ತಿದ್ದುಪಡಿಗಳನ್ನು ಹಾಗೂ ಕೆಲವು ಪ್ರಸ್ತುತ ಉಪಬಂಧಗಳನ್ನು ಸರಳಗೊಳಿಸುವುದಕ್ಕಾಗಿಯೂ ಕೆಲವು ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಜಗದೀಶ್ ಶೆಟ್ಟರ್**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

### ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) ಉದ್ಧೃತ ಭಾಗ

XX XX XX

**10. ಹುಟ್ಟುವಳಿ ತೆರಿಗೆ, ಹೂಡುವಳಿ ತೆರಿಗೆ ಮತ್ತು ನಿವ್ವಳ ತೆರಿಗೆ.–** (1) ಯಾವೊಬ್ಬ ನೋಂದಾಯಿತ ವ್ಯಾಪಾರಿಯ ಸಂಬಂಧದಲ್ಲಿ ಹುಟ್ಟುವಳಿ ತೆರಿಗೆ ಎಂದರೆ, ಆ ವ್ಯಾಪಾರಿಯು, ತನ್ನ ವ್ಯಾಪಾರದ ಕ್ರಮದಲ್ಲಿ ತೆರಿಗೆಗೆ ಗುರಿಯಾಗತಕ್ಕ ಯಾವುವೇ ಸರಕುಗಳ ಮಾರಾಟದ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾದ ತೆರಿಗೆ ಮತ್ತು ಇದು ಅಂಥ ವ್ಯಾಪಾರಿಯ ಪರವಾಗಿ ಒಬ್ಬ ಕಮಿಷನ್ ಏಜೆಂಟನು, ತೆರಿಗೆಗೆ ಗುರಿಯಾಗತಕ್ಕ ಯಾವುವೇ ಸರಕುಗಳ ಮಾರಾಟದ ಸಂಬಂಧದಲ್ಲಿ ನಿಯಮಿಸಲಾದ ಘೋಷಣೆಯನ್ನು ನೀಡುವ ಷರತ್ತಿಗೆ ಒಳಪಟ್ಟು, ಅಂಥ ಏಜೆಂಟನು ಸಂದಾಯ ಮಾಡುವ ತೆರಿಗೆಯನ್ನು ಒಳಗೊಳ್ಳುತ್ತದೆ.

(2) 11, 12, 14, 17 ಮತ್ತು 18ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಲಾದ ಹೂಡುವಳಿ ತೆರಿಗೆಯ ನಿರ್ಬಂಧಗಳಿಗೆ ಒಳಪಟ್ಟು, ಯಾವೊಬ್ಬ ನೋಂದಾಯಿತ ವ್ಯಾಪಾರಿಯ ಸಂಬಂಧದಲ್ಲಿ ಹೂಡುವಳಿ ತೆರಿಗೆ ಎಂದರೆ, ತನ್ನ ವ್ಯಾಪಾರದ ಕ್ರಮದಲ್ಲಿ ಉಪಯೋಗಕ್ಕಾಗಿ ಯಾವುವೇ ಸರಕುಗಳನ್ನು ತನಗೆ ಮಾರಾಟ ಮಾಡಿದಾಗ ಈ ಅಧಿನಿಯಮದ ಅಡಿಯಲ್ಲಿ ಸಂಗ್ರಹಿಸಲಾದ ಅಥವಾ ಸಂದಾಯಮಾಡತಕ್ಕ ತೆರಿಗೆ ಮತ್ತು ಇದು, ಅಂಥ ಪ್ರಕರಣಗಳಲ್ಲಿ ಹೂಡುವಳಿ ತೆರಿಗೆಯನ್ನು ಕ್ಲೇಮು ಮಾಡಲು ನಿಯಮಿಸಬಹುದಾದ ವಿಧಾನಕ್ಕೆ ಒಳಪಟ್ಟು ತನ್ನ ಪರವಾಗಿ ಅಂಥ ಸರಕುಗಳನ್ನು ಖರೀದಿಸುವ ತನ್ನ ಏಜೆಂಟನಿಗೆ ಮಾಡಿದ ಸರಕುಗಳ ಮಾರಾಟದ ಮೇಲಿನ ತೆರಿಗೆಯನ್ನು ಒಳಗೊಳ್ಳುತ್ತದೆ.

(3) 11, 12, 14, 17, 18 ಮತ್ತು 19ನೇ ಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಲಾದ ಹೂಡುವಳಿ ತೆರಿಗೆಯ ನಿರ್ಬಂಧಗಳಿಗೆ ಒಳಪಟ್ಟು, ಪ್ರತಿಯೊಂದು ತೆರಿಗೆ ಅವಧಿಯ ಸಂಬಂಧದಲ್ಲಿ ನೋಂದಾಯಿತ ವ್ಯಾಪಾರಿಯು ಸಂದಾಯಮಾಡಬೇಕಾದ ನಿವ್ವಳ ತೆರಿಗೆಯು, ನಿಯಮಿಸಬಹುದಾದಂತೆ ಆ ಅವಧಿಯಲ್ಲಿ ಆತನು ಸಂದಾಯಮಾಡಬೇಕಾದ ಹುಟ್ಟುವಳಿ ತೆರಿಗೆಯಿಂದ, ಆ ಅವಧಿಯಲ್ಲಿ ಆತನು ವಜಾ ಮಾಡತಕ್ಕ ಹೂಡುವಳಿ ತೆರಿಗೆಯನ್ನು ಕಳೆದು, ಆ ಅವಧಿಯಲ್ಲಿ ಆತನು ಸಂದಾಯಮಾಡಬೇಕಾದ ಹುಟ್ಟುವಳಿ ತೆರಿಗೆಯ ಮೊತ್ತವಾಗಿರತಕ್ಕದ್ದು ಮತ್ತು ಆ ಬಗ್ಗೆ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಲೆಕ್ಕವನ್ನು ಇಡತಕ್ಕದ್ದು.

(4) ಸಂದಾಯ ಮಾಡಬೇಕಾದ ಅಥವಾ ಮರುಸಂದಾಯ ಮಾಡಬೇಕಾದ ನಿವ್ವಳ ತೆರಿಗೆಯ ಮೊತ್ತವನ್ನು ಲೆಕ್ಕಹಾಕುವ ಉದ್ದೇಶಕ್ಕಾಗಿ, 29ನೇ ಪ್ರಕರಣ ಅಥವಾ 30ನೇ ಪ್ರಕರಣಕ್ಕೆ ಅನುಸಾರವಾಗಿ ಮಾರಾಟಕ್ಕೆ ಸಂಬಂಧಿಸಿದಂತೆ ತೆರಿಗೆ ಬೆಲೆಪಟ್ಟಿ, ಖರ್ಚು ಚೀಟಿ ಅಥವಾ ಜಮಾಚೀಟಿಗಳನ್ನು ನೀಡಿದ್ದ ಹೊರತಾಗಿ ಮತ್ತು 3ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಸಂದಾಯ ಮಾಡಿದ ಅಂಥ ತೆರಿಗೆಯ ಹೊರತು ಮಾರಾಟದ ಸಂಬಂಧದಲ್ಲಿ ವಜಾವನ್ನು ತೆಗೆದುಕೊಳ್ಳುವ ಕಾಲದಲ್ಲಿ ಸಲ್ಲಿಸಿದ್ದ ಯಾವುದೇ ವಿವರ ಪಟ್ಟಿಯು ನೋಂದಾಯಿತ ವ್ಯಾಪಾರಿಯೊಡನೆ ಇದ್ದ ಹೊರತು, ಹೂಡುವಳಿ ತೆರಿಗೆಯನ್ನು ಕಡಿತ ಮಾಡತಕ್ಕದ್ದಲ್ಲ.

XX XX XX

**38. ತೆರಿಗೆಯ ನಿರ್ಧರಣೆ.**- (1) ವ್ಯಾಪಾರಿಯು, ಯಾವುದೇ ಅವಧಿಗಾಗಿ ಸಲ್ಲಿಸಿದ ವಿವರ ಪಟ್ಟಿಯ ಸಮರ್ಥನೆಗಾಗಿ ನಿಯಮಿಸಲಾದ ಪ್ರಾಧಿಕಾರದ ಮುಂದೆ ಲೆಕ್ಕಪತ್ರಗಳನ್ನು ಹಾಜರುಪಡಿಸಬೇಕಾಗಿದೆ ಎಂಬುದಾಗಿ ಆಯುಕ್ತನು ಅಧಿಸೂಚಿಸಬಹುದಾದ ಪ್ರಕರಣಗಳಲ್ಲಿ ಹೊರತು, 35ನೇ ಪ್ರಕರಣದ ಅಡಿಯಲ್ಲಿ ವ್ಯಾಪಾರಿಯು ಸಲ್ಲಿಸಿದ ವಿವರ ಪಟ್ಟಿಯ ಆಧಾರದ ಮೇಲೆ ಆತನ ತೆರಿಗೆಯನ್ನು ನಿರ್ಧರಿಸಲಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ಲೆಕ್ಕಪತ್ರ ಹಾಜರುಪಡಿಸಿದ ಸಂದರ್ಭದಲ್ಲಿ ನಿಯಮಿಸಲಾದ ಪ್ರಾಧಿಕಾರವು–

(ಎ) ಸಲ್ಲಿಸಿದ ವಿವರ ಪಟ್ಟಿಯ ಸರಿಯಾಗಿದೆ ಮತ್ತು ಸಂಪೂರ್ಣವಾಗಿದೆ ಎಂದು ಮನಗಂಡಲ್ಲಿ ಸಲ್ಲಿಸಿದ ವಿವರಪಟ್ಟಿಯ ಆಧಾರದ ಮೇಲೆ ಅಂಥ ವ್ಯಾಪಾರಿಯ,–

ತೆರಿಗೆ ನಿರ್ಧರಣೆಗೆ ಮುಂದುವರೆಯತಕ್ಕದ್ದು, ಅಥವಾ

(ಬಿ) ಸಲ್ಲಿಸಿದ ವಿವರ ಪಟ್ಟಿಯು ಸರಿಯಾಗಿಲ್ಲವೆಂದು ಅಥವಾ ಪೂರ್ಣವಾಗಿಲ್ಲವೆಂದು ಕಂಡುಬಂದಲ್ಲಿ, ತನ್ನ ಅತ್ಯುತ್ತಮ ವಿವೇಚನೆಯಲ್ಲಿ ತೆರಿಗೆ ನಿರ್ಧರಣೆಯನ್ನು, ಅಂಥ ನಿರ್ಧರಣೆ ವಿರುದ್ಧ ಬರಹದಲ್ಲಿ ಕಾರಣವನ್ನು ತೋರಿಸಲು ಅಂಥ ವ್ಯಾಪಾರಿಗೆ ಅವಕಾಶವನ್ನು ನೀಡಿದ ಮೇಲೆ, ಮಾಡಲು ಮುಂದುವರಿಯತಕ್ಕದ್ದು ಮತ್ತು ಅದರಲ್ಲಿ ಯಾವುದೇ ಹೆಚ್ಚುವರಿ ನಿರ್ಧರಣೆಯಾದ ತೆರಿಗೆಯನ್ನು ಅಂಥ ನಿರ್ಧರಣೆಯನ್ನು ವ್ಯಾಪಾರಿಗೆ ಜಾರಿಮಾಡಿದ ದಿನಾಂಕದಿಂದ ಹತ್ತು ದಿನಗಳೊಳಗಾಗಿ ವ್ಯಾಪಾರಿಯು ಸಂದಾಯಿಸತಕ್ಕದ್ದು.

XX XX XX

**39. ತೆರಿಗೆಯ ಮರು ನಿರ್ಧರಣೆ.**- (1) ತೆರಿಗೆ ನಿರ್ಧರಣೆ ಮಾಡಲಾಗಿದೆಯೆಂದು ಭಾವಿಸಲಾದ, ಸಂದರ್ಭದಲ್ಲಿ ನೀಡಿದ ಯಾವುದೇ ವಿವರ ಪಟ್ಟಿಯು ಅಥವಾ 38ನೇ ಪ್ರಕರಣದ ಅಡಿಯಲ್ಲಿ ನೀಡಿದ ಯಾವುದೇ ತೆರಿಗೆ ನಿರ್ಧರಣೆಯು, ವ್ಯಾಪಾರಿಯ ಸರಿಯಾದ ತೆರಿಗೆ ಹೊಣೆಗಾರಿಕೆಯನ್ನು ಕಡಿಮೆ ನಿರೂಪಿಸಿದೆ ಎಂದು ನಿಯಮಿಸಲಾದ ಪ್ರಾಧಿಕಾರವು ನಂಬಲು ಕಾರಣಗಳಿದ್ದಲ್ಲಿ, ಅದು,–

(ಎ) ಲಭ್ಯವಿರುವ ಯಾವುದೇ ಮಾಹಿತಿಯ ಆಧಾರದ ಮೇಲೆ, ತನ್ನ ಅತ್ಯುತ್ತಮ ವಿವೇಚನೆಯಲ್ಲಿ, ಸಂದಾಯ ಮಾಡಬೇಕಾದ ಹೆಚ್ಚುವರಿ ತೆರಿಗೆಯ ಮರುನಿರ್ಧರಣೆ ಮಾಡಬಹುದು ಮತ್ತು 72ನೇ ಪ್ರಕರಣದ (2)ನೇ ಉಪ ಪ್ರಕರಣದ ಅಡಿಯಲ್ಲಿ ಅಥವಾ (5)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ದಂಡವನ್ನು ಸಹ ವಿಧಿಸಬಹುದು ಹಾಗೂ ಯಾವುದೇ ಬಡ್ಡಿಯ ಸಂದಾಯಕ್ಕಾಗಿ ಒತ್ತಾಯಿಸಬಹುದು ಮತ್ತು

(ಬಿ) ಲಿಖಿತದಲ್ಲಿ ಅಂಥ ಮರು ನಿರ್ಧರಣೆಗೆ ಪ್ರತಿಯಾಗಿ ಕಾರಣ ತೋರಿಸಲು ವ್ಯಾಪಾರಿಗೆ ಅವಕಾಶ ನೀಡಿದ ತರುವಾಯ, ನೋಟೀಸನ್ನು ಜಾರಿಗೊಳಿಸಿದ ದಿನಾಂಕದಿಂದ ಹತ್ತು ದಿನಗಳೊಳಗೆ ತೆರಿಗೆಯನ್ನು ಸಂದಾಯ ಮಾಡತಕ್ಕದ್ದೆಂದು ಕೋರಿ ವ್ಯಾಪಾರಿಗೆ ಮರು ನಿರ್ಧರಣೆಯ ಒಂದು ನೋಟೀಸನ್ನು ನೀಡತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿ ಮರು ನಿರ್ಧರಣೆಯನ್ನು ಮಾಡಿದ ತರುವಾಯ ಮತ್ತಷ್ಟು ಯಾವುದೇ ಸಾಕ್ಷ್ಯವು ನಿಯಮಿಸಲಾದ ಪ್ರಾಧಿಕಾರದ ಗಮನಕ್ಕೆ ಬಂದಲ್ಲಿ, ಅದು ಅಂಥ ಮೊದಲಿನ ಮರುನಿರ್ಧರಣೆಗೆ ಹೆಚ್ಚುವರಿಯಾಗಿ ಯಾವುದೇ ಮತ್ತಷ್ಟು ಮರು ನಿರ್ಧರಣೆ ಮಾಡಬಹುದು.

XX XX XX

**47. ವ್ಯಾಪಾರಿಯಿಂದ ತೆರಿಗೆ ರೂಪದಲ್ಲಿ ತಪ್ಪಾಗಿ ಸಂಗ್ರಹಿಸಲಾದ ಮೊಬಲಗುಗಳ ಸಂದಾಯ ಮತ್ತು ಬಟವಾಡೆ.**- (1) 30ನೇ ಪ್ರಕರಣಕ್ಕೆ ಒಳಪಟ್ಟು, ಯಾವೊಬ್ಬ ವ್ಯಾಪಾರಿಯು, ತಿಳಿದೋ ಅಥವಾ ತಿಳಿಯದೆಯೋ ಯಾವೊಬ್ಬ ವ್ಯಕ್ತಿಯಿಂದ ತೆರಿಗೆಯ ರೂಪದಲ್ಲಿ ಅಥವಾ ತೆರಿಗೆ ರೂಪದಲ್ಲಿ ಎಂದು ತಾತ್ಪರ್ಯವಾಗುವ ಯಾವುದೇ ಮೊಬಲಗನ್ನು ಸಂಗ್ರಹಿಸಿದ್ದಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಆ ವ್ಯಾಪಾರಿಯು, ತೆರಿಗೆಯಾಗಿ ಅಂಥ ಮೊಬಲಗನ್ನು ಸಂದಾಯ ಮಾಡಲು ಬದ್ಧನಾಗಿಲ್ಲದಿದ್ದರೂ ಅಥವಾ ತೆರಿಗೆಯಾಗಿ ಅದರ ಒಂದು ಭಾಗವು ಮಾತ್ರ ಅವನಿಂದ ಬಾಕಿ ಉಳಿದಿದ್ದರೂ, ಅಂಥ ವ್ಯಾಪಾರಿಯು ಹಾಗೆ ಸಂಗ್ರಹಿಸಿದ ಸಂಪೂರ್ಣ ಮೊಬಲಗನ್ನು, ಅಂಥ ಮೊಬಲಗನ್ನು ಸಂಗ್ರಹಿಸಿದ ತಿಂಗಳ ಮುಕ್ತಾಯದ ತರುವಾಯ ಇಪ್ಪತ್ತು ದಿನಗಳೊಳಗೆ, ನಿಯಮಿಸಲಾದ ಪ್ರಾಧಿಕಾರಕ್ಕೆ ಸಂದಾಯ ಮಾಡತಕ್ಕದ್ದು.

XX XX XX

**62. ಅಪೀಲುಗಳು.**- (1) ನಿಯಮಿಸಲಾದ ಪ್ರಾಧಿಕಾರವು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಹೊರಡಿಸಿದ ಯಾವುದೇ ಆದೇಶದಿಂದ ಅಥವಾ ವ್ಯವಹರಣೆಗಳಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅವುಗಳನ್ನು ಆಕ್ಷೇಪಿಸಿ ಅಪೀಲು ಪ್ರಾಧಿಕಾರಕ್ಕೆ ಅಪೀಲು ಮಾಡಿಕೊಳ್ಳಬಹುದು.

(2) ಅಪೀಲನ್ನು,-

(ಎ) ತೆರಿಗೆ ನಿರ್ಧರಣೆಯ ಒಂದು ಆದೇಶಕ್ಕೆ ಸಂಬಂಧಿಸಿದಂತೆ ಅಪೀಲುದಾರನಿಗೆ ತೆರಿಗೆ ನಿರ್ಧರಣೆಯ ನೋಟೀಸನ್ನು ಜಾರಿ ಮಾಡಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಮತ್ತು

(ಬಿ) ಯಾವುದೇ ಇತರ ಆದೇಶಕ್ಕೆ ಅಥವಾ ವ್ಯವಹರಣೆಗಳಿಗೆ ಸಂಬಂಧಿಸಿದಂತೆ, ಅರ್ಜಿದಾರನಿಗೆ ಆದೇಶವನ್ನು ತಿಳಿಸಿದಂಥ ದಿನಾಂಕದಿಂದ ಮೂವತ್ತು ದಿನಗಳೊಳಗೆ,

– ಹೂಡತಕ್ಕದ್ದು.

(3) ಅಪೀಲು ಪ್ರಾಧಿಕಾರವು ಈ ಹಿಂದೆ ಹೇಳಿದ ಅವಧಿಯ ತರುವಾಯ ಆದರೆ, ಒಂದು ನೂರಾ ಎಂಬತ್ತು ದಿನಗಳ ಮತ್ತಷ್ಟು ಅವಧಿಯೊಳಗೆ ಹೂಡಿದ ಅಪೀಲನ್ನು, ಆ ಅವಧಿಯೊಳಗೆ ಅಪೀಲನ್ನು ಹೂಡದೇ ಇರುವುದಕ್ಕೆ ಅಪೀಲುದಾರನಿಗೆ ಸಾಕಷ್ಟು ಕಾರಣವಿತ್ತೆಂದು ಅದಕ್ಕೆ ಮನದಟ್ಟಾದರೆ ಅಪೀಲನ್ನು ಅಂಗೀಕರಿಸಬಹುದು.

(4)(ಎ) ತೆರಿಗೆ ನಿರ್ಧರಣೆಯ ಆದೇಶದ ವಿರುದ್ಧ ಯಾವುದೇ ಅಪೀಲನ್ನು ಅದರೊಂದಿಗೆ ಅಪೀಲಿನಲ್ಲಿ ವಿವಾದಿಸದೇ ಇರುವ ತೆರಿಗೆ ಮತ್ತು ಇತರ ಮೊಬಲಗಿನ ಸಂದಾಯದ ಬಗ್ಗೆ ತೃಪ್ತಿಕರ ರುಜುವಾತು ಇದ್ದ ಹೊರತು ಅಪೀಲು ಪ್ರಾಧಿಕಾರಿಯು ಪುರಸ್ಕರಿಸತಕ್ಕದ್ದಲ್ಲ;

(ಬಿ) ಯಾವ ಆದೇಶದ ಅಥವಾ ವ್ಯವಹರಣೆಗಳ ವಿರುದ್ಧ ಅಪೀಲನ್ನು ಸಲ್ಲಿಸಲಾಗಿದೆಯೋ ಆ ಆದೇಶಕ್ಕೆ ಅಥವಾ ವ್ಯವಹರಣೆಗಳಿಗೆ ಅನುಸಾರವಾಗಿ ತೆರಿಗೆ ಅಥವಾ ಇತರ ಮೊಬಲಗನ್ನು ಸಂದಾಯ ಮಾಡತಕ್ಕದ್ದು;

(ಸಿ) (i) ಅಪೀಲು ಪ್ರಾಧಿಕಾರಿಯು ತನ್ನ ವಿವೇಚನಾನುಸಾರ, ಅಪೀಲುದಾರನು ನಿಯಮಿಸಲಾದ ಅಪೀಲಿನ ನಮೂನೆಯ ಜೊತೆಯಲ್ಲಿ ತೆರಿಗೆಯ ಮತ್ತು ಇತರ ಮೊಬಲಗಿನ ಅರ್ಧದಷ್ಟನ್ನು ಸಂದಾಯ ಮಾಡಿದ್ದರೆ, ಇನ್ನುಳಿದ ಅರ್ಧದಷ್ಟು ತೆರಿಗೆಯ ಮತ್ತು ಇತರ ಮೊಬಲಗಿನ ಸಂದಾಯಕ್ಕೆ ತಡೆ ನೀಡಬಹುದು.

(ii) ಯಾವುದೇ ತೆರಿಗೆಯ ಅಥವಾ ಇತರ ಮೊಬಲಗಿನ ವಸೂಲಿಯ ವ್ಯವಹರಣೆಗಳನ್ನು ತಡೆಯುವುದಕ್ಕಾಗಿ ಅರ್ಜಿದಾರನು ಸಲ್ಲಿಸಿದ ಅರ್ಜಿಯನ್ನು ಅಪೀಲು ಪ್ರಾಧಿಕಾರವು ಅಂಥ ಅರ್ಜಿಯ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ವಿಲೆ ಮಾಡದಿದ್ದಲ್ಲಿ, ಅಂಥ ತೆರಿಗೆಯ ಅಥವಾ ಇತರ ಮೊಬಲಗಿನ ವಸೂಲಿಯ ವ್ಯವಹರಣೆಗಳನ್ನು ತಡೆಯುವ ಆದೇಶವನ್ನು ವಿವಾದಿತ ತೆರಿಗೆಯ ಮತ್ತು ಇತರ ಮೊಬಲಗಿನ ಅರ್ಧದಷ್ಟನ್ನು ಸಂದಾಯ ಮಾಡುವ ಮತ್ತು ಅಂಥ ತೆರಿಗೆಯ ಇನ್ನುಳಿದ ಅರ್ಧದಷ್ಟನ್ನು ಅಥವಾ ಇತರ ಮೊಬಲಗನ್ನು ಮುಂದಿನ ಹದಿನೈದು ದಿನಗಳ ಅವಧಿಯೊಳಗೆ ಸಲ್ಲಿಸುವ ಬಗ್ಗೆ ತೆರಿಗೆ ನಿರ್ಧರಣಾ ಪ್ರಾಧಿಕಾರಕ್ಕೆ ತೃಪ್ತಿಕರವಾಗುವಂತೆ ಸಾಕಷ್ಟು ಭದ್ರತೆ ನೀಡುವ ಷರತ್ತಿಗೆ ಒಳಪಟ್ಟು ಅಪೀಲು ಪ್ರಾಧಿಕಾರವು ತಡೆಯಾಜ್ಞೆ ನೀಡಿದೆಯೆಂದು ಭಾವಿಸತಕ್ಕದ್ದು.

XX XX XX

**63. ಅಪೀಲು ನ್ಯಾಯಾಧಿಕರಣಕ್ಕೆ ಅಪೀಲು.-** (1) ರಾಜ್ಯ ಸರ್ಕಾರದಿಂದ ಅಥವಾ ಆಯುಕ್ತರಿಂದ ಈ ಸಂಬಂಧದಲ್ಲಿ ಪ್ರಾಧಿಕೃತನಾದ ಯಾವೊಬ್ಬ ಅಧಿಕಾರಿ ಅಥವಾ 62ನೇ ಪ್ರಕರಣದ ಅಡಿಯಲ್ಲಿ ಅಪೀಲು ಪ್ರಾಧಿಕಾರವು ಅಥವಾ 63–ಎ ಪ್ರಕರಣದ ಅಡಿಯಲ್ಲಿ ಜಂಟಿ ಆಯುಕ್ತನು ಮಾಡಿದ ಆದೇಶವನ್ನು ಆಕ್ಷೇಪಿಸುವ ಯಾವೊಬ್ಬ ಇತರ ವ್ಯಕ್ತಿಯು, ಅವನಿಗೆ ಆದೇಶವನ್ನು ತಿಳಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯ ಒಳಗೆ ಅಪೀಲು ನ್ಯಾಯಾಧಿಕರಣಕ್ಕೆ ಅಪೀಲನ್ನು ಮಾಡಿಕೊಳ್ಳಬಹುದು.

(2) ಅಪೀಲು ನ್ಯಾಯಾಧಿಕರಣವು, (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಿದ ಅರವತ್ತು ದಿನಗಳ ಅವಧಿಯ ತರುವಾಯ, ಆದರೆ ಒಂದು ನೂರಾ ಎಂಬತ್ತು ದಿನಗಳ ಹೆಚ್ಚಿನ ಅವಧಿಯೊಳಗೆ ಸಲ್ಲಿಸಿದ ಅಪೀಲನ್ನು ಆ ಅವಧಿಯೊಳಗೆ ಅಪೀಲನ್ನು ಸಲ್ಲಿಸದೇ ಇರುವುದಕ್ಕಾಗಿ ಅಪೀಲುದಾರನಿಗೆ ಸಾಕಷ್ಟು ಕಾರಣವಿತ್ತೆಂದು ಹೊಂದಿದ್ದನೆಂದು ಅದಕ್ಕೆ ಮನದಟ್ಟಾದರೆ, ಮನವಿಯನ್ನು ಅಂಗೀಕರಿಸಬಹುದು.

(3) ಮೇಲಿನ (1)ನೇ ಉಪಪ್ರಕರಣದ ಅಡಿಯಲ್ಲಿ ಪ್ರಾಧಿಕೃತನಾದ ಅಧಿಕಾರಿಯು ಅಥವಾ ಸಂದರ್ಭಾನುಸಾರ ಯಾವ ವ್ಯಕ್ತಿಯ ವಿರುದ್ಧ ಅಪೀಲನ್ನು ಹೂಡಲಾಗಿದೆಯೋ ಆ ವ್ಯಕ್ತಿಯು, ಇತರ ಪಕ್ಷಕಾರನು (1)ನೆ ಉಪಪ್ರಕರಣದ ಅಡಿಯಲ್ಲಿ ಅಪೀಲು ಪ್ರಾಧಿಕಾರದ ಆದೇಶದ ವಿರುದ್ಧ ಅಪೀಲನ್ನು ಸಲ್ಲಿಸಲಾಗಿರುವ ಬಗ್ಗೆ ನೋಟೀಸನ್ನು ಸ್ವೀಕರಿಸಿದ ಮೇಲೆ ಅಂಥ ಆದೇಶದ ಅಥವಾ ಅದರ ಯಾವುದೇ ಭಾಗದ ವಿರುದ್ಧ ಅವನು ಅಪೀಲನ್ನು ಹೂಡದೇ ಇದ್ದಾಗ್ಯೂ, ಆ ಅಪೀಲಿನ ಅಂತಿಮ ಸುನಾವಣೆಗೆ ಮೊದಲು, ಯಾವುದೇ ಸಮಯದಲ್ಲಿ ಅಪೀಲು ಪ್ರಾಧಿಕಾರದ ಆದೇಶದ ಯಾವುದೇ ಭಾಗದ ವಿರುದ್ಧ, ನಿಯಮಿಸಲಾದ ರೀತಿಯಲ್ಲಿ ಸತ್ಯಾಪನೆ ಮಾಡಲಾದ ಎದುರು ಆಕ್ಷೇಪಣೆಗಳ ವಿವರಣ ಪತ್ರವನ್ನು ದಾಖಲ್ಮಾಡಬಹುದು ಮತ್ತು ಅಂಥ ವಿವರಣ ಪತ್ರವನ್ನು ಅಪೀಲು ನ್ಯಾಯಾಧಿಕರಣವು (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸಮಯದೊಳಗೆ ಸಲ್ಲಿಸಿದ ಅಪೀಲು ಆಗಿದ್ದರೆ ಹೇಗೋ ಹಾಗೆ ವಿಲೆ ಮಾಡತಕ್ಕದ್ದು.

(4) ಅಪೀಲು ಅಥವಾ ಎದುರು ಆಕ್ಷೇಪಣೆಗಳ ವಿವರಣ ಪತ್ರವು ನಿಯಮಿಸಲಾದ ನಮೂನೆಯಲ್ಲಿ ಇರತಕ್ಕದ್ದು, ನಿಯಮಿಸಲಾದ ರೀತಿಯಲ್ಲಿ ಸತ್ಯಾಪನೆ ಮಾಡಿರತಕ್ಕದ್ದು ಮತ್ತು (1)ನೇ ಉಪಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರದಿಂದ ಅಥವಾ ಆಯುಕ್ತರಿಂದ ಪ್ರಾಧಿಕೃತನಾದ ಅಧಿಕಾರಿಯ ಹೊರತಾಗಿ ಯಾವೊಬ್ಬ ವ್ಯಕ್ತಿಯು, ಅಪೀಲು ಸಲ್ಲಿಸಿದ ಸಂದರ್ಭದಲ್ಲಿ, ತೆರಿಗೆಯ ಅಥವಾ ವಿವಾದಿತ ಇತರೆ ಮೊಬಲಗಿನ ಅರ್ಧದಷ್ಟನ್ನು ಸಂದಾಯ ಮಾಡಿದ ಬಗ್ಗೆ ರುಜುವಾತಿನೊಡನೆ ಮತ್ತು ಆಕ್ಷೇಪಿಸಲಾದ ತೆರಿಗೆ ನಿರ್ಧರಣಾ ಮೊಬಲಗಿನ ಶೇಕಡಾ ಎರಡರಷ್ಟಕ್ಕೆ ಸಮನಾದ ಶುಲ್ಕದೊಂದಿಗೆ ಇರತಕ್ಕದ್ದು:

ಪರಂತು, ಸಂದಾಯ ಮಾಡಬೇಕಾದ ಮೊಬಲಗು ಯಾವ ಸಂದರ್ಭದಲ್ಲಿಯೂ ಎರಡುನೂರು ರೂಪಾಯಿಗಳಿಗಿಂತ ಕಡಿಮೆ ಇರತಕ್ಕದ್ದಲ್ಲ ಅಥವಾ ಒಂದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿಗೆ ಇರತಕ್ಕದ್ದಲ್ಲ.

(5) (ಎ) ಅಪೀಲು ನ್ಯಾಯಾಧಿಕರಣವು, ಅಪೀಲಿನ ಉಭಯ ಪಕ್ಷಕಾರರಿಗೆ ಅಹವಾಲನ್ನು ಹೇಳಿಕೊಳ್ಳಲು ಒಂದು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯ, ಅದರ ಬಗ್ಗೆ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಆದೇಶವನ್ನು ಮಾಡತಕ್ಕದ್ದು.

(ಬಿ) ಒಂದು ಅಪೀಲು, ಅಪೀಲು ನ್ಯಾಯಾಧಿಕರಣವು ಈ ಹಿಂದೆ ಬೇರೊಂದು ಅಪೀಲಿನಲ್ಲಿ ತನ್ನ ತೀರ್ಮಾನವನ್ನು ಕೊಟ್ಟಿರುವ ಕಾನೂನಿನ ಪ್ರಶ್ನೆಯನ್ನು ಒಳಗೊಂಡಿದ್ದು ಮತ್ತು ಅಂಥ ತೀರ್ಮಾನದ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಪುನರೀಕ್ಷಣಾ ಅರ್ಜಿಯಾಗಲಿ ಅಥವಾ ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಸರ್ವೋಚ್ಚ ನ್ಯಾಯಾಲಯದಲ್ಲಿ ಅಪೀಲಾಗಲೀ ಇತ್ಯರ್ಥದಲ್ಲಿದ್ದರೆ, ಅಪೀಲು ನ್ಯಾಯಾಧಿಕರಣವು ಉಚ್ಚ ನ್ಯಾಯಾಲಯದಲ್ಲಿರುವ ಪುನರೀಕ್ಷಣಾ ಅರ್ಜಿಯು ಅಥವಾ ಸರ್ವೋಚ್ಚ ನ್ಯಾಯಾಲಯದಲ್ಲಿರುವ ಅಪೀಲು ವಿಲೆಯಾಗುವವರೆಗೆ ತನ್ನ ಮುಂದಿರುವ ಅಪೀಲಿನ ವಿಚಾರಣೆಯನ್ನು ಮುಂದೂಡಬಹುದು.

(ಸಿ) ಅಪೀಲಿನ ಪರಿಣಾಮವಾಗಿ, ಅಪೀಲಿನ ವ್ಯಾಜ್ಯ ವಿಷಯವಾಗಿರುವ ತೆರಿಗೆ ನಿರ್ಧರಣೆಯಲ್ಲಿ ಯಾವುದೇ ಬದಲಾವಣೆಯನ್ನು ಮಾಡುವುದು ಅವಶ್ಯವಾಗಿದ್ದರೆ, ಅಪೀಲು ನ್ಯಾಯಾಧಿಕರಣವು ತೆರಿಗೆ ನಿರ್ಧರಣೆಯನ್ನು ತಿದ್ದುಪಡಿ ಮಾಡಲು ನಿಯಮಿಸಲಾದ ಪ್ರಾಧಿಕಾರಕ್ಕೆ ಅಧಿಕಾರ ನೀಡಬಹುದು ಮತ್ತು ನಿಯಮಿಸಲಾದ ಪ್ರಾಧಿಕಾರವು ತದನುಸಾರವಾಗಿ ತೆರಿಗೆ ನಿರ್ಧರಣೆಯ ತಿದ್ದುಪಡಿ ಮಾಡತಕ್ಕದ್ದು ಮತ್ತು ಆ ತರುವಾಯ ವ್ಯಾಪಾರಿಯು ಹೆಚ್ಚಿಗೆ ಸಂದಾಯ ಮಾಡಿದ ಯಾವುದೇ ಮೊಬಲಗನ್ನು ಬಡ್ಡಿ ಇಲ್ಲದೆ ಮರುಪಾವತಿ ಮಾಡತಕ್ಕದ್ದು ಅಥವಾ ಸಂದರ್ಭಾನುಸಾರ ಅವನಿಂದ ಬಾಕಿ ಇರತಕ್ಕ ಯಾವುದೇ ಹೆಚ್ಚಿನ ತೆರಿಗೆ ಮೊಬಲಗನ್ನು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ವಸೂಲ್ಮಾಡತಕ್ಕದ್ದು.

(6) (ಎ) ಮೇಲಿನ (1)ನೇ ಉಪಪ್ರಕರಣದ ಅಡಿಯಲ್ಲಿ ಅಪೀಲನ್ನು ಸಲ್ಲಿಸಿದ್ದಾಗ್ಯೂ ತೆರಿಗೆಯನ್ನು ಈ ಸಂಬಂಧದಲ್ಲಿ ಮಾಡಿದ ತೆರಿಗೆ ನಿರ್ಧರಣೆಗೆ ಅನುಸಾರವಾಗಿ ಸಂದಾಯ ಮಾಡತಕ್ಕದ್ದು.

(7) (ಎ) ಅಪೀಲುದಾರನು, ನಿಯಮಿಸಲಾದ ಅಪೀಲು ನಮೂನೆಯೊಡನೆ ತೆರಿಗೆಯ ಅಥವಾ ವಿವಾದಿತ ಇತರ ಮೊಬಲಗಿನ ಅರ್ಧವನ್ನು ಸಂದಾಯ ಮಾಡಿದರೆ ಅಪೀಲು ನ್ಯಾಯಾಧಿಕರಣವು ತನ್ನ ವಿವೇಚನಾನುಸಾರ ತೆರಿಗೆಯ ಅಥವಾ ವಿವಾದಿತ ಇತರ ಮೊಬಲಗಿನ ಇನ್ನುಳಿದ ಅರ್ಧ ಭಾಗದ ಸಂದಾಯಕ್ಕೆ ತಡೆ ನೀಡಬಹುದು.

XX XX XX

**63ಎ. ಜಂಟಿ ಆಯುಕ್ತರ ಪುನರೀಕ್ಷಣಾ ಅಧಿಕಾರಿಗಳು.–** (1) ಜಂಟಿ ಆಯುಕ್ತನು ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಯಾವುವೇ ಆದೇಶಗಳ ದಾಖಲೆಗಳನ್ನು ಅಥವಾ ದಾಖಲು ಮಾಡಿದ ವ್ಯವಹರಣೆಗಳನ್ನು ತಾನೇ ಸ್ವತಃ ತರಿಸಿಕೊಳ್ಳಬಹುದು ಮತ್ತು ಪರೀಕ್ಷಿಸಬಹುದು ಮತ್ತು ಅದರಲ್ಲಿ ಉಪ ಆಯುಕ್ತರ ದರ್ಜೆಗಿಂತ ಮೇಲಿನದಲ್ಲದ ದರ್ಜೆಯ ಯಾವೊಬ್ಬ ಅಧಿಕಾರಿಯು ಮಾಡಿದ ಯಾವುದೇ ಆದೇಶವು ರಾಜಸ್ವದ ಹಿತಾಸಕ್ತಿಗೆ ಪ್ರತಿಕೂಲವಾಗಿರುವಷ್ಟರ ಮಟ್ಟಿಗೆ ದೋಷಪೂರ್ಣವಾಗಿದೆಯೆಂದು ಆತನು ಪರಿಗಣಿಸಿದರೆ, ಆತನು ಅವಶ್ಯವಿದ್ದಲ್ಲಿ ತಾನು ಸೂಕ್ತವೆಂದು ಭಾವಿಸಬಹುದಾದಂಥ ಅವಧಿಯವರೆಗೆ ಅಂಥ ಆದೇಶದ ಜಾರಿಯನ್ನು ತಡೆಹಿಡಿಯಬಹುದು ಮತ್ತು ಸಂಬಂಧಪಟ್ಟ ವ್ಯಕ್ತಿಗೆ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ತರುವಾಯ ಮತ್ತು ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ ಅಥವಾ ಮಾಡಿಸಿದ ತರುವಾಯ ತೆರಿಗೆಯ ನಿರ್ಧರಣೆಯನ್ನು ಹೆಚ್ಚಿಸುವ ಅಥವಾ ಮಾರ್ಪಡಿಸುವ ಅಥವಾ ತೆರಿಗೆ ನಿರ್ಧರಣೆಯನ್ನು ರದ್ದುಗೊಳಿಸುವ ಅಥವಾ ಹೊಸದಾಗಿ ತೆರಿಗೆ ನಿರ್ಧರಣೆಯನ್ನು ನಿರ್ದೇಶಿಸುವ ಆದೇಶವೂ ಒಳಗೊಂಡಂತೆ ಆ ಪ್ರಕರಣದ ಸನ್ನಿವೇಶಗಳಿಗೆ ಸಮರ್ಥನೀಯವಾಗುವಂಥ ಆದೇಶವನ್ನು ಅದರ ಬಗ್ಗೆ ಹೊರಡಿಸಬಹುದು.

XX XX XX

**74. ದಾಖಲೆಗಳನ್ನು ಇಡುವುದಕ್ಕೆ ಮತ್ತು ಪರಿಶೋಧಿತ ಲೆಕ್ಕ ಪತ್ರಗಳ ವಿವರ ಪತ್ರವನ್ನು ಸಲ್ಲಿಸುವುದಕ್ಕೆ ಸಂಬಂಧಿಸಿದ ದಂಡಗಳು.–** (1) ಯಾವೊಬ್ಬ ವ್ಯಾಪಾರಿಯು, 31ನೇ ಪ್ರಕರಣಕ್ಕೆ ಅನುಸಾರವಾಗಿ ಅಥವಾ ನಿಯಮಿಸಲಾದ ಪ್ರಾಧಿಕಾರದ ಆದೇಶದ ಮೂಲಕ, ಸೂಕ್ತ ದಾಖಲೆಗಳನ್ನು ಇಡಲು ಮತ್ತು ನಿರ್ವಹಿಸಲು ಅಥವಾ ಸಿವಿಲ್ ಕಾಮಗಾರಿ ಕರಾರನ್ನು ಕೈಗೊಳ್ಳಲು ಮಾಡಿಕೊಂಡ ಒಪ್ಪಂದದ ಪ್ರತಿಯನ್ನು ಸಲ್ಲಿಸಲು ತಪ್ಪಿದಲ್ಲಿ ಅವನು ಯಾವುದೇ ಒಂದು ವರ್ಷದ ಅವಧಿಯಲ್ಲಿ ಹಾಗೆ ತಪ್ಪಿರುವುದು ಮೊದಲ ಬಾರಿಯಾಗಿದ್ದರೆ ಐದು ಸಾವಿರ ರೂಪಾಯಿಗಳಿಗೆ ಅಥವಾ ಆ ವರ್ಷದಲ್ಲಿ ಎರಡನೇ ಬಾರಿಗೆ ಅಥವಾ ಅದರ ನಂತರ ತಪ್ಪಿದ್ದರೆ ಹತ್ತು ಸಾವಿರ ರೂಪಾಯಿಗಳಿಗೆ ದಂಡಕ್ಕೆ ಮತ್ತು ಅಂಥ ದಂಡ ವಿಧಿಸಿದ್ದರ ವಿರುದ್ಧ ಕಾರಣಗಳನ್ನು ತೋರಿಸಲು ಅವಕಾಶವನ್ನು ನೀಡಿದ ತರುವಾಯ, ದಂಡ ನೀಡಲು ತಪ್ಪುವುದು ಮುಂದುವರಿಯುತ್ತಿರುವವರೆಗೆ ಪ್ರತಿದಿನಕ್ಕೆ ಎರಡು ನೂರು ರೂಪಾಯಿಗಳಿಗೆ ಮೀರದ ಹೆಚ್ಚಿನ ದಂಡವನ್ನು ಸಹ ನೀಡಲು ಬದ್ಧನಾಗಿರತಕ್ಕದ್ದು.

XX XX XX

**76. ತೆರಿಗೆ ಬೆಲೆ ಪಟ್ಟಿಗಳಿಗೆ, ಮಾರಾಟದ ಬಿಲ್ಲುಗಳಿಗೆ ಜಮಾ ಚೀಟಿಗಳು ಮತ್ತು ಖರ್ಚು ಚೀಟಿಗಳಿಗೆ ಸಂಬಂಧಿಸಿದಂತೆ ದಂಡಗಳು.–** (1) ಒಬ್ಬ ನೋಂದಾಯಿತ ವ್ಯಾಪಾರಿಯು, ಅವನು,–

(ಎ) 29ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ತೆರಿಗೆ ಬೆಲೆ ಪಟ್ಟಿಯನ್ನು ಅಥವಾ 30ನೇ ಪ್ರಕರಣದ (1)ನೇ ಉಪ ಪ್ರಕರಣದ ಅಥವಾ (2)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಒಂದು ಜಮಾ ಅಥವಾ ಖರ್ಚು ಚೀಟಿಯನ್ನು ನೀಡಲು ತಪ್ಪಿದಲ್ಲಿ ಅಥವಾ

(ಬಿ) 29ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಅಲ್ಲದೆ ಒಂದು ತೆರಿಗೆ ಬೆಲೆ ಪಟ್ಟಿಯನ್ನು ಅಥವಾ 30ನೇ ಪ್ರಕರಣದಲ್ಲಿ ಉಪಬಂಧಿಸಲಾದುದಕ್ಕೆ ಹೊರತಾಗಿ ಒಂದು ಜಮಾ ಅಥವಾ ಖರ್ಚು ಚೀಟಿಯನ್ನು ಒದಗಿಸಿದರೆ,

– ಆರ್ಥಿಕ ವರ್ಷದಲ್ಲಿ ಅಂಥ ಮೊದಲನೇ ಅಪರಾಧಕ್ಕೆ ಎರಡು ಸಾವಿರ ರೂಪಾಯಿಗಳು ಅಥವಾ ವ್ಯವಹಾರದ ಮೇಲೆ ಸಂದಾಯ ಮಾಡಬೇಕಾದ ತೆರಿಗೆಗೆ ಸಮನಾದ ಮೊಬಲಗು ಇವುಗಳಲ್ಲಿ ಯಾವುದು ಹೆಚ್ಚಿನದೋ ಆ ದಂಡಕ್ಕೆ ಮತ್ತು ಎಸಗಿದ ಅಪರಾಧವು ಆರ್ಥಿಕ ವರ್ಷದಲ್ಲಿ ಮೊದಲನೇ ಅಪರಾಧವಾಗಿರದಿದ್ದಲ್ಲಿ ಐದು ಸಾವಿರ ರೂಪಾಯಿಗಳು ಅಥವಾ ವ್ಯವಹಾರದ ಮೇಲೆ ಸಂದಾಯ ಮಾಡಬೇಕಾದ ತೆರಿಗೆಗೆ ಸಮನಾದ ಮೊಬಲಗು, ಇವುಗಳಲ್ಲಿ ಯಾವುದು ಹೆಚ್ಚಿನದೋ ಆ ದಂಡಕ್ಕೆ ಬದ್ಧನಾಗಿರತಕ್ಕದ್ದು.

XX XX XX

**ಒಂದನೇ ಅನುಸೂಚಿ**

**(5ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ತೆರಿಗೆಯಿಂದ ವಿನಾಯಿತಿಗೊಳಿಸಿದ ಸರಕುಗಳು)**

| ಕ್ರಮ ಸಂಖ್ಯೆ | ಸರಕುಗಳ ವಿವರ |
|---|---|
| 1 | 2 |

1. ಕೈಯಿಂದ ನಡೆಸುವ ಅಥವಾ ಪ್ರಾಣಿಗಳಿಂದ ಎಳೆಸುವ ಕೃಷಿ ಉಪಕರಣಗಳು

XX XX XX

5. (i) ಪಶು ಆಹಾರ ಮತ್ತು ಪೂರಕ ಆಹಾರಗಳು ಎಂದರೆ, ಕೋಳಿ ಆಹಾರ, ಜಾನುವಾರು ಆಹಾರ, ಹಂದಿ ಆಹಾರ, ಮೀನಿನ ಆಹಾರ, ಫಿಷ್‌ಮೀಲ್, ಪ್ರಾನ್ ಫೀಡ್, ಸೀಗಡಿ ಆಹಾರವೆಂದು ಮಾರಾಟ ಮಾಡುವ ಸಂಸ್ಕರಿತ ವಸ್ತುಗಳು ಹಾಗೂ ಪೂರಕ ಆಹಾರಗಳು ಮತ್ತು ಖನಿಜ ಮಿಶ್ರಣಗಳು, ಆಹಾರ ಪೂರಕಗಳಾಗಿ ಉಪಯೋಗಿಸುವ ಉದ್ದೇಶವುಳ್ಳ ಪೂರಕ ಆಹಾರಗಳು.

(ii) ಬೇಳೆಕಾಳುಗಳ ಹೊಟ್ಟು (ಚುನ್ನಿ), ಹಿಂಡಿ ಮತ್ತು ಭೂಸ.

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SIXTEENTH SESSION**

## THE KARNATAKA VALUE ADDED TAX (AMENDMENT) BILL, 2013

**(L.A. Bill No. 8 of 2013)**

A Bill further to amend the Karnataka Value Added Tax Act, 2003.

Whereas it is expedient further to amend the Karnataka Value Added Tax Act, 2003 (Karnataka Act 32 of 2004) for the purposes hereinafter appearing;

Be it enacted by the Karnataka State Legislature in the Sixty fourth year of the Republic of India, as follows.-

**1. Short title and commencement.-** (1) This Act may be called the Karnataka Value Added Tax (Amendment) Act, 2013.

(2) It shall come into force with effect from the First day of April, 2013.

**2. Amendment of section 10.-**In the Karnataka Value Added Tax Act, 2003 (Karnataka Act 32 of 2004) (hereinafter referred to as the principal Act), in section 10, in sub-section (4), the words and figures "or Section 30" shall be omitted.

**3. Amendment of section 38.-** In section 38 of the principal Act, in sub-section (1), in clause (b), for the words "ten days", the words "thirty days" shall be substituted.

**4. Amendment of section 39.-** In section 39 of the principal Act,-

(i) in sub-section (1), in clause (b), for the words "ten days", the words "thirty days" shall be substituted; and

(ii) for sub-section (2), the following shall be substituted, namely:-

"(2) Where after making a re-assessment under this Section,

(a) any further evidence comes to the notice of the prescribed authority, or

(b) if the prescribed authority has reason to believe that the whole or any part of the turnover of a dealer in respect of any tax period has escaped re-assessment to tax, or

(c) tax has been under-re-assessed, or

(d) has been re-assessed at a rate lower than the rate at which it is assessable under this Act, or

(e) any deductions or exemptions have been wrongly allowed in respect thereof,

the prescribed authority may, notwithstanding the fact that whole or part of such escaped turnover was already before the said authority at the time of re-assessment, proceed to make any further re-assessments in addition to such earlier re-assessment."

**5. Amendment of section 47.-** In section 47 of the principal Act, in sub-section (1), for the words, figures and punctuation marks "Subject to Section 30, where", the word "Where" shall be substituted.

**6. Amendment of section 62.-** In section 62 of the principal Act, in sub-section (4), in clause (c),

(i) in sub-clause (i),

(a) for the words "stay payment of one half of tax", the words "stay payment of seventy per cent of tax" shall be substituted;

(b) for the words "makes payment of the other half of the tax", the words "makes payment of the balance thirty per cent of the tax" shall be substituted;

(ii) in sub-clause (ii),

(a) for the words "payment of one half of the tax", the words "payment of thirty per cent of the tax" shall be substituted;

(b) for the words "other half of such tax", the words "balance seventy per cent of such tax" shall be substituted.

**7. Amendment of section 63.-** In section 63 of the principal Act,-

(1)in sub-section (4), for the words "payment of one half of tax", the words "payment of thirty per cent of tax" shall be substituted;

(2) in sub-section (7),-

(a) in clause (a),

(i) for the words "stay payment of one half of the tax", the words "stay payment of seventy per cent of the tax" shall be substituted;

(ii) for the words "other half of the tax", the words "thirty percent of the tax" shall be substituted;

(b) in clause (b), for the words "recovery of one half of tax", the words "recovery of seventy per cent of tax" shall be substituted.

**8. Amendment of section 63-A.-** In section 63-A of the principal Act, in sub-section (1), for the words "cancelling the assessment or directing a fresh assessment", the words "cancelling the assessment and directing a fresh assessment" shall be substituted.

**9. Amendment of section 74.-** In section 74 of the principal Act, in sub-section (1), the words "or submit a copy of the agreement entered into for execution of civil works contract" shall be omitted.

**10. Amendment of section 76.-** In section 76 of the principal Act, in sub-section (1),-

(i) in clause (a), the words, brackets and figures "or a credit or debit note as required by sub-section (1) or sub-section (2) of Section 30" shall be omitted; and

(ii) in clause (b), the words and figures "or a credit or a debit note as provided in Section 30" shall be omitted.

**11. Amendment of First Schedule.**- In the First Schedule to the principal Act, in the entries relating to serial number 5, in item (ii), for the words "de-oiled cake and wheat bran", the words "wheat bran and de-oiled cake but excluding soya bean de-oiled cake" shall be substituted.

## STATEMENT OF OBJECTS AND REASONS

It is considered necessary to amend the Karnataka Value Added Tax Act, 2003 to give effect to the proposals made in the Budget and matters connected therewith.

Certain consequential and incidental amendments and other amendments to rationalise certain current provisions are also made.

Hence the Bill.

## FINANCIAL MEMORANDUM

There is no extra expenditure involved by the proposed measure.

**JAGADISH SHETTAR**
Chief Minister and
Minister for Finance

**P. OMPRAKASHA**
Secretary
Karnataka Legislative Assembly

**ANNEXURE**

**EXTRACT OF THE KARNATAKA VALUE ADDED TAX ACT, 2003**

**(KARNATAKA ACT NO. 32 OF 2004)**

**XXXXX**

**10. Output tax, input tax and net tax.-** (1) Output tax in relation to any registered dealer means the tax payable under this Act in respect of any taxable sale of goods made by that dealer in the course of his business, and includes tax payable by a commission agent in respect of taxable sales of goods made on behalf of such dealer subject to issue of a prescribed declaration by such agent.

(2) Subject to input tax restrictions specified in Sections 11, 12, 14, 17 and 18, input tax in relation to any registered dealer means the tax collected or payable under this Act on the sale to him of any goods for use in the course of his business, and includes the tax on the sale of goods to his agent who purchases such goods on his behalf subject to the manner as may be prescribed to claim input tax in such cases.

(3) Subject to input tax restrictions specified in Sections 11, 12, 14, 17, 18 and 19, the net tax payable by a registered dealer in respect of each tax period shall be the amount of output tax payable by him in that period less the input tax deductible by him as may be prescribed in that period and shall be accounted for in accordance with the provisions of this Act.

(4) For the purpose of calculating the amount of net tax to be paid or refunded, no deduction for input tax shall be made unless a tax invoice, debit note or credit note, in relation to a sale, has been issued in accordance with Section 29 or Section 30 and is with the registered dealer taking the deduction at the time any return in respect of the sale is furnished, except such tax paid under sub-section (2) of Section 3.

XXXXX

**38.Assessment of tax.-** (1) Every dealer shall be deemed to have been assessed to tax based on the return filed by him under section 35, except in cases where the Commissioner may notify the dealer of any requirement of production of accounts before the prescribed authority in support of a return filed for any period and such authority shall proceed to assess such dealer,-

(a) on the basis of the return filed where he is satisfied that the return filed is correct and complete, or

(b) to the best of its judgment, where the return filed appears to be incorrect or incomplete, after giving the dealer an opportunity of showing cause against such assessment in writing and any additional tax assessed shall be paid within ten days from the date of service of such assessment on the dealer.

XXXXX

**39.Re-assessment of tax.-**(1) Where the prescribed authority has grounds to believe that any return furnished which is deemed as assessed or any assessment issued under Section 38 understates the correct tax liability of the dealer, it, -

(a) may, based on any information available, re-assess, to the best of its judgement, the additional tax payable and also impose any penalty under sub-section (2) or sub-section (5) of section 72 and demand payment of any interest; and

(b) shall issue a notice of re-assessment to the dealer demanding that the tax shall be paid within ten days of the date of service of the notice after giving the dealer the opportunity of showing cause against such re-assessment in writing.

(2) Where after making a re-assessment under this Section, any further evidence comes to the notice of the prescribed authority, it may make any further re-assessments in addition to such earlier re-assessment.

XXXXX

**47. Payment and disbursement of amounts wrongly collected by dealer as tax.-** (1) Subject to Section 30, where any amount is collected by way of tax or purporting to be way of tax from any person by any dealer, whether knowingly or not, such dealer shall pay the entire amount so collected, to the prescribed authority within twenty days after the close of the month in which such amount was collected, notwithstanding that the dealer is not liable to pay such amount as tax or that only a part of it is due from him as tax under this Act.

XXXXX

**62. Appeals.-** (1) Any person objecting to any order or proceedings affecting him passed under the provisions of this Act by the prescribed authority may appeal to the prescribed appellate authority.

(2) The appeal shall be preferred,

(a) in respect of an order of assessment, within thirty days from the date on which the notice of assessment, was served on the appellant, and

(b) in respect of any other order or proceedings, within thirty days from the date on which the order was communicated to the appellant:

(3) The appellate authority may admit an appeal preferred after the period as aforesaid but within a further period of one hundred and eighty days, if it is satisfied that the appellant had sufficient cause for not preferring the appeal within that period.

(4) (a) No appeal against an order of assessment shall be entertained by the appellate authority unless it is accompanied by satisfactory proof of the payment of tax and other amount not disputed in the appeal.

(b) The tax or other amount shall be paid in accordance with the order or proceedings against which an appeal has been preferred.

(c) (i) The appellate authority may, in its discretion, stay payment of one half of tax and other amount, if the appellant makes payment of the other half of the tax and other amount along with the prescribed form of appeal.

(ii) Where any application made by an applicant for staying proceedings of recovery of any tax or other amount has not been disposed of by the Appellate Authority within a period of thirty days from the date of such application, it shall be deemed that the Appellate Authority has made an order staying proceedings of recovery of such tax or other amount subject to payment of one half of the tax and other amount disputed and furnishing of sufficient security to the satisfaction of the assessing authority in regard to the other half of such tax or amount within a further period of fifteen days.

**XXXXX**

**63. Appeal to the Appellate Tribunal.-** (1) Any officer empowered by the State Government or the Commissioner in this behalf or any other person objecting to an order passed by the appellate authority under Section 62 or the Joint Commissioner under Section 63-A may appeal to the Appellate Tribunal within a period of sixty days from the date on which the order was communicated to him.

(2) The Appellate Tribunal may admit an appeal preferred after the period of sixty days referred to in sub-section (1), but within a further period of one hundred and eighty days, if it is satisfied that the appellant had sufficient cause for not preferring the appeal within that period.

(3) The officer authorized under sub-section (1) or the person against whom an appeal has been preferred, as the case may be, on receipt of notice that an appeal against the order of the appellate authority has been preferred under sub-section (1) by the other party, may, notwithstanding that he has not appealed against such order or any part thereof, file, at any time before the appeal is finally heard, a memorandum of cross-objections, verified in the prescribed manner, against any part of the order of the appellate authority, and such memorandum shall be disposed of by the Appellate Tribunal as if it were an appeal presented within the time specified in sub-section (1).

(4) The appeal, or the memorandum of cross-objections, shall be in the prescribed form, shall be verified in the prescribed manner, and, in the case of an appeal preferred by any person other than an officer empowered by the State Government or the Commissioner under sub-section (1) shall be accompanied by proof of payment of one half of tax or other amount disputed and also a fee equal to two percent of the amount of assessment objected to, provided that the sum payable in no case be less than two hundred rupees or more than one thousand rupees.

(5) (a) The Appellate Tribunal shall, after giving both parties to the appeal a reasonable opportunity of being heard, pass such orders thereon as it thinks fit.

(b) If the appeal involves a question of law on which the Appellate Tribunal has previously given its decision in another appeal and either a revision petition in the High Court against such decision or an appeal in the Supreme Court against the order of the High Court thereon is pending, the Appellate Tribunal may defer the hearing of the appeal before it till such revision petition in the High Court or the appeal in the Supreme Court is disposed of.

(c) If as a result of the appeal any change becomes necessary in the assessment, which is the subject matter of the appeal, the Appellate Tribunal may authorize the prescribed authority to amend the assessment, and the prescribed authority shall amend the assessment accordingly and thereupon, any amount over paid by the dealer shall be refunded

to him without interest, or any additional amount of tax due from him shall be collected in accordance with the provisions of the Act, as the case may be.

(6) (a) Notwithstanding that an appeal has been preferred under sub-section (1), tax shall be paid in accordance with the assessment made in the case.

(7) (a) The Appellate Tribunal may, in its discretion, stay payment of one half of the tax or other amount disputed, if the appellant makes payment of the other half of the tax or other amount disputed along with the prescribed form of appeal.

XXXXX

**63-A. Revisional powers of Joint Commissioner**.- (1) The Joint Commissioner may on his own motion call for and examine the record of any order passed or proceeding recorded under this Act and if he considers that any order passed therein by any officer, who is not above the rank of a Deputy Commissioner, is erroneous in so far as it is prejudicial to the interest of the revenue, he may, if necessary, stay the operation of such order for such period as he deems fit and after giving the person concerned an opportunity of being heard and after making or causing to be made such inquiry as he deems necessary, pass such order thereon as the circumstances of the case justify, including an order enhancing or modifying the assessment, or canceling the assessment or directing a fresh assessment.

XXXXX

**74. Penalties relating to the keeping of records and submission of audited statement of accounts:-** (1) Any dealer who fails to keep and maintain proper records or submit a copy of the agreement entered into for execution of civil works contract, in accordance with Sections 31 or by order of the prescribed authority shall be liable to a penalty not exceeding five thousand rupees if such failure is the first during any year or ten thousand rupees if such failure is the second or subsequent during that year and, in addition, a further penalty not exceeding two hundred rupees per day for so long as the failure continues after being given an opportunity to show cause against such imposition of penalty.

**76. Penalties relating to tax invoices, bills of sale, credit notes and debit notes.-** (1) A registered dealer who,-

(a) fails to provide a tax invoice as required by sub-section (1) of section 29 or a credit or debit note as required by sub-section (1) or sub-section (2) of section 30, or

(b) provides a tax invoice otherwise than in accordance with the provisions of section 29 or a credit or a debit note as provided in section 30,

shall be liable to a penalty of two thousand rupees or an amount equivalent to the tax payable on the transaction, whichever is higher for such offence which is the first during a financial year and if the offence committed is not the first offence during a financial year, a penalty of five thousand rupees or an amount equivalent to the tax payable on the transaction, whichever is higher.

XXXXX

**FIRST SCHEDULE**

**(Goods exempted from tax under sub-section (1) of Section 5)**

| Serial Number | Description of Goods |
|---|---|
| 1 | 2 |
| 1. | Agricultural implements manually operated or animal driven. |

XXXXX

| | |
|---|---|
| 5. | (i) Animal feed and feed supplements, namely, processed commodity sold as poultry feed, cattle feed, pig feed, fish feed, fish meal, prawn feed, shrimp feed and feed supplements and mineral mixture concentrates, intended for use as feed supplements;<br>(ii) Chunni of pulses, de-oiled cake and wheat bran. |

XXXXX

ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪) | ನಂ. ೪೧೨ |
|---|---|---|
| Part – IV-A | Bangalore, Thursday, February 14, 2013 (Magha 25, Shaka Varsha 1934) | No. 412 |

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/09/Bill/2013, Bangalore, Dated: 14-02-2013**

The following Bill was introduced in Legislative Assembly on 14-2-2013

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನಾರನೇ ಅಧಿವೇಶನ**

**ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ವಿಧೇಯಕ, 2013**

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 09)**

ಕರ್ನಾಟಕ ರಾಜ್ಯದಲ್ಲಿ ಜಾರಿಯಲ್ಲಿರುವ ಕೆಲವು ತೆರಿಗೆ ಕಾನೂನುಗಳನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕೆಲವು ತೆರಿಗೆ ಕಾನೂನುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ತೆರಿಗೆ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು 2013ರ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 1976ರ ಕರ್ನಾಟಕ ಅಧಿನಿಯಮ 35ರ ತಿದ್ದುಪಡಿ.–** ಕರ್ನಾಟಕ ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ 35) 16ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

**3. 1979ರ ಕರ್ನಾಟಕ ಅಧಿನಿಯಮ 27ರ ತಿದ್ದುಪಡಿ.–** ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979ರಲ್ಲಿ (1979ರ ಕರ್ನಾಟಕ ಅಧಿನಿಯಮ 27),–

(1) 3ನೇ ಪ್ರಕರಣದ (7)ನೇ ಉಪಪ್ರಕರಣದಲ್ಲಿ, "ಎರಡು ಲಕ್ಷ ರೂಪಾಯಿಗಳಿಗಿಂತಲೂ" ಎಂಬ ಪದಗಳಿಗೆ "ಐದು ಲಕ್ಷ ರೂಪಾಯಿಗಳಿಗಿಂತಲೂ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(2) 4ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ, "ಎರಡು ಲಕ್ಷ ರೂ.ಗಳಿಗಿಂತ" ಎಂಬ ಪದಗಳಿಗೆ "ಐದು ಲಕ್ಷ ರೂಪಾಯಿಗಳಿಗಿಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೊಳಿಸಲು ಮತ್ತು ಅವುಗಳಿಗೆ ಸಂಬಂಧಿಸಿದ ಮತ್ತು ಪ್ರಾಸಂಗಿಕವಾದ ವಿಷಯಗಳಿಗಾಗಿ ಕರ್ನಾಟಕ ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976 ಮತ್ತು ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979 ಇವುಗಳನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಜಗದೀಶ್ ಶೆಟ್ಟರ್**

ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**

ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ 35) ಉದ್ಧೃತ ಭಾಗ

xx xx xx

**16. ಅಪೀಲುಗಳು.–** (1) ಮೌಲ್ಯನಿರ್ಧರಣಾ ಪ್ರಾಧಿಕಾರದ ಆದೇಶದಿಂದ ಬಾಧಿತಾರಾದ ಸರ್ಕಾರದ ಅಧಿಕಾರಿಯಾಗಿರದ, ಯಾವೊಬ್ಬ ಉದ್ಯೋಗದಾತ ಅಥವಾ ಯಾವೊಬ್ಬ ವ್ಯಕ್ತಿಯು, ಸಂಬಂಧಪಟ್ಟ ಪ್ರದೇಶದ ಜಂಟಿ ಆಯುಕ್ತನಲ್ಲಿ ಅಪೀಲು ಸಲ್ಲಿಸಬಹುದು:

ಪರಂತು, 7ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಆದೇಶದ ವಿರುದ್ಧವಾಗಿ ಯಾವುದೇ ಅಪೀಲು ಇರತಕ್ಕದ್ದಲ್ಲ.

xx xx xx

## 1979ರ ಕರ್ನಾಟಕ ಅಧಿನಿಯಮ 27ರ ತಿದ್ದುಪಡಿ.– ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979ರ (1979ರ ಕರ್ನಾಟಕ ಅಧಿನಿಯಮ 27) ಉದ್ಧೃತ ಭಾಗ

xx xx xx

**3. ತೆರಿಗೆ ವಿಧಿಸುವುದು.–** (1) ಸ್ಥಳೀಯ ಪ್ರದೇಶಗಳೊಳಗೆ ಬಳಕೆ ಉಪಯೋಗ ಅಥವಾ ಮಾರಾಟಕ್ಕಾಗಿ ಬರುವ ಒಂದನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಸರಕುಗಳ ಮೇಲೆ ರಾಜ್ಯ ಸರ್ಕಾರವು ಕಾಲಕಾಲಕ್ಕೆ, ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಸರಕುಗಳ ಮೌಲ್ಯದ ಶೇಕಡಾ ಐದರಷ್ಟು ಮೀರದಂಥ ದರಗಳಲ್ಲಿ ತೆರಿಗೆಯನ್ನು ವಿಧಿಸತಕ್ಕದು ಮತ್ತು ವಸೂಲು ಮಾಡತಕ್ಕದು ಮತ್ತು ಬೇರೆ ಬೇರೆ ಸರಕುಗಳು ಅಥವಾ ಬೇರೆ ಬೇರೆ ವರ್ಗಗಳ ಸರಕುಗಳು ಅಥವಾ ಬೇರೆ ಬೇರೆ ಸ್ಥಳೀಯ ಪ್ರದೇಶಗಳ ಸಂಬಂಧದಲ್ಲಿ ಬೇರೆ ಬೇರೆ ದರಗಳನ್ನು ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ ಪೂರ್ವಾನ್ವಯವಾಗಿಯಾಗಲಿ ಅಥವಾ ಉತ್ತರಾನ್ವಯದಿಂದಾಗಲಿ ಮತ್ತು ಬೇರೆ ಬೇರೆ ದಿನಾಂಕಗಳನ್ನು ನಿರ್ದಿಷ್ಟಪಡಿಸಬಹುದು:

ಮತ್ತು ಪರಂತು, ಐರನ್ ಕಾಸ್ಟಿಂಗ್‌ಗಳಿಗೆ, ಅದನ್ನು ಕಚ್ಚಾ ಸಾಮಾಗ್ರಿಯಾಗಿ ಅಥವಾ ಮಧ್ಯಂತರ ಅಥವಾ ಸಿದ್ಧ ಸರಕುಗಳನ್ನು ತಯಾರಿಕೆಯಲ್ಲಿ ಘಟಕ ಭಾಗ ಅಥವಾ ಯಾವುದೇ ಇತರ ಹೂಡುವಳಿಯಾಗಿ ಬಳಸಲಾದಾಗ, ಯಾವುದೇ ತೆರಿಗೆಯನ್ನು ಪಾವತಿಸತಕ್ಕದ್ದಲ್ಲ:

ಮತ್ತು ಪರಂತು, ಐರನ್ ಕಾಸ್ಟಿಂಗ್‌ಗಳಿಗೆ, ಅದನ್ನು ಕಚ್ಚಾ ಸಾಮಾಗ್ರಿಯಾಗಿ ಅಥವಾ ಮಧ್ಯಂತರ ಸಿದ್ಧ ಸರಕುಗಳನ್ನು ತಯಾರಿಕೆಯಲ್ಲಿ ಘಟಕ ಭಾಗ ಅಥವಾ ಯಾವುದೇ ಇತರ ಹೂಡುವಳಿಯಾಗಿ ಬಳಸಲಾದಾಗ, ಯಾವುದೇ ತೆರಿಗೆಯನ್ನು ಪಾವತಿಸತಕ್ಕದ್ದಲ್ಲ:

(2) (1)ನೇ ಉಪ-ಪ್ರಕರಣದ ಅಡಿಯಲ್ಲಿ ವಿಧಿಸಲಾದ ತೆರಿಗೆಯನ್ನು ಸ್ಥಳೀಯ ಪ್ರದೇಶದೊಳಗೆ ಸರಕುಗಳನ್ನು ತಂದರೆ ಅಥವಾ ತರುವಂತೆ ಮಾಡುವ ಸ್ವತ:ತಾನಾಗಿಯೇ ಅಥವಾ ಮೂಲಕರ್ತನ ಅಥವಾ ಯಾವೊಬ್ಬ ಇತರ ವ್ಯಕ್ತಿಯು ಯಾವುದೇ ಸರಕುಗಳನ್ನು ಸ್ಥಳೀಯ ಪ್ರದೇಶದೊಳಗೆ ತಂದರೆ ಅಥವಾ ತರುವಂತೆ ಮಾಡುವ ಅಥವಾ ಒಂದು ಸ್ಥಳೀಯ ಪ್ರದೇಶದೊಳಕ್ಕೆ ಸರಕುಗಳ ವರ್ಗಾವಣೆ ಪಡೆದುಕೊಂಡು ಅಥವಾ ವರ್ಗಾವಣೆ ಪಡೆಯಲು ಹಕ್ಕುಳ್ಳವನಾಗಿರುವ ಈ ಆಧಿನಿಯಮದ ಅಡಿಯಲ್ಲಿ ಪ್ರತಿಯೊಬ್ಬ ನೋಂದಾಯಿತ ವ್ಯಾಪಾರಿ ಅಥವಾ ನೋಂದಾಯಿತನಾಗಲು ಬದ್ಧನಾದ ಒಬ್ಬ ವ್ಯಾಪಾರಿಯು ಸಂದಾಯ ಮಾಡತಕ್ಕದ್ದು.

xx xx xx

(7) ಒಂದು ವರ್ಷದಲ್ಲಿ ಸರಕುಗಳ ಮೌಲ್ಯವು ಒಂದು ಲಕ್ಷ ರೂಪಾಯಿಗೆ ಕಡಿಮೆಯಿರದ ಯಾವುದೇ ಸರಕುಗಳನ್ನು ಸ್ಥಳೀಯ ಪ್ರದೇಶದೊಳಗೆ ತರುವ ಅಥವಾ ತರಲು ಕಾರಣನಾಗುವ ಪ್ರತಿಯೊಬ್ಬ ತಯಾರಕ ಅಥವಾ ಯಾವುದೇ ಸರಕುಗಳನ್ನು ರಾಜ್ಯದೊಳಗೆ ತರುವ ಅಥವಾ ತರಲು ಕಾರಣನಾಗುವ ವ್ಯಾಪಾರಿ ಮತ್ತು ಸರಕುಗಳ ಸರಾಸರಿ ಮೌಲ್ಯವು ಎರಡು ಲಕ್ಷ ರೂಪಾಯಿಗಳಿಗಿಂತಲೂ ಕಡಿಮೆ ಇರದ ಯಾವುದೇ ಸರಕುಗಳನ್ನು ಸ್ಥಳೀಯ ಪ್ರದೇಶದೊಳಗೆ ತರುವ ಅಥವಾ ತರಲು ಕಾರಣನಾಗುವ ಯಾವೊಬ್ಬ ಇತರ ವ್ಯಾಪಾರಿಯು ಆ ವರ್ಷಕ್ಕೆ ತೆರಿಗೆ ಸಂದಾಯ ಮಾಡಲು ಬದ್ಧರಾಗತಕ್ಕದ್ದಲ್ಲ.

ಪರಂತು, ಏಜೆಂಟ್ ಅಥವಾ ವ್ಯವಸ್ಥಾಪಕನ್ನು ಒಳಗೊಂಡಂತೆ ಇರುವ ಪ್ರತಿಯೊಬ್ಬ ಅನಿವಾಸಿ ವ್ಯಾಪಾರಿ ಅಥವಾ ಪ್ರತಿಯೊಬ್ಬ ಸಾಂದರ್ಭಿಕ ವ್ಯಾಪಾರಿಯ, ಆ ವರ್ಷದಲ್ಲಿ ಸ್ಥಳೀಯ ಪ್ರದೇಶದೊಳಗೆ ಅಲ್ಲಿಗೆ ತರಲಾದ ಅಥವಾ ತರುವಂತೆ ಮಾಡಲಾದ ಸರಕುಗಳ ಒಟ್ಟು ಮೌಲ್ಯದ ಸರಾಸರಿಯನ್ನು ಪರಗಣಿಸದೆ ನಿರ್ದಿಷ್ಟಪಡಿಸಿದಂತೆ ಪ್ರತಿವರ್ಷ ತೆರಿಗೆ ನೀಡಲು ಹಕ್ಕುಳ್ಳವನಾಗಿರತಕ್ಕದ್ದು.

xx xx xx

**4. ವ್ಯಾಪಾರಿಗಳ ನೋಂದಣಿ.–** (1) ಪ್ರತಿಯೊಬ್ಬ ವ್ಯಾಪಾರಿಯ,–

(ಎ) ಈ ಅಧಿನಿಯಮದ ಅಡಿಯಲ್ಲಿ ತೆರಿಗೆಗೆ ಗುರಿಯಾಗಿರುವ ಸರಕುಗಳನ್ನು ಖರೀದಿಸುವ ಅಥವಾ ಸ್ವೀಕರಿಸುವ ಮತ್ತು ಅವನು ಸ್ಥಳೀಯ ಪ್ರದೇಶದೊಳಗೆ ವ್ಯವಹಾರ ನಡೆಸುತ್ತಿರುವ ಮತ್ತು ಕರ್ನಾಟಕ ಮಾರಾಟಗಳ ತೆರಿಗೆ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 25) 10ನೇ ಪ್ರಕರಣದ ಅಡಿಯಲ್ಲಿ ನೋಂದಾಯಿತನಾದ ಅಥವಾ ನೋಂದಾಯಿತನಾಗಲು ಬದ್ಧನಾದ; ಅಥವಾ

(ಬಿ) ಸರಾಸರಿ ಮೌಲ್ಯವು ವರ್ಷದಲ್ಲಿ ಎರಡು ಲಕ್ಷ ರೂ.ಗಳಿಗಿಂತ ಕಡಿಮೆಯಿರುವ ಅಂಥ ಸರಕುಗಳನ್ನು, ಸ್ಥಳೀಯ ಪ್ರದೇಶದೊಳಗೆ ತರಲಾದ ಅಥವಾ ತರುವಂತೆ ಮಾಡಲಾದ ಅಥವಾ ಅಂಥ ಸರಕುಗಳ ರವಾನೆ ಪಡೆಯಲು ಹಕ್ಕುಳ್ಳ,

– ವ್ಯಾಪಾರಿಯು ನಿಯಮಿಸಬಹುದಾದಂಥ ವಿಧಾನದಲ್ಲಿ ನಿಯಮಿಸಬಹುದಾದಂಥ ಶುಲ್ಕವನ್ನು ಸಂದಾಯ ಮಾಡಿ ನಿಯಮಿಸಬಹುದಾದಂಥ ಅವಧಿಯೊಳಗೆ ನೋಂದಾಯಿಸಿಕೊಳ್ಳತಕ್ಕದ್ದು. ನೋಂದಣಿಯನ್ನು ರದ್ದು ಮಾಡುವವರೆಗೆ ನಿಯಮಿತ ಶುಲ್ಕವನ್ನು ಸಂದಾಯ ಮಾಡಿ ಪ್ರತಿ ವರ್ಷ ನವೀಕರಿಸಿಕೊಳ್ಳತಕ್ಕದ್ದು.

ಪರಂತು, ಸ್ಥಳೀಯ ಪ್ರದೇಶದೊಳಗೆ ಯಾವುದೇ ಸರಕನ್ನು ತರುವ ಅಥವಾ ತರಲು ಕಾರಣನಾಗುವ ಪ್ರತಿಯೊಬ್ಬ ತಯಾರಕ ಅಥವಾ ರಾಜ್ಯದೊಳಗೆ ಯಾವುದೇ ಸರಕನ್ನು ತರುವ ಅಥವಾ ತರಲು ಕಾರಣನಾಗುವ ಪ್ರತಿಯೊಬ್ಬ ವ್ಯಾಪಾರಿಯು, ಒಂದು ಸ್ಥಳೀಯ ಪ್ರದೇಶದೊಳಗೆ ಅಥವಾ

ರಾಜ್ಯದೊಳಗೆ ತರಲಾದ ಅಂಥ ಸರಕುಗಳ ಮೌಲ್ಯವು ಸಂದರ್ಭಾನುಸಾರ, ಒಂದು ವರ್ಷದಲ್ಲಿ ಒಂದು ಲಕ್ಷ ರೂಪಾಯಿಗೆ ಕಡಿಮೆಯಿರದಿದ್ದರೆ, ಆ ತಯಾರಕ ಅಥವಾ ವ್ಯಾಪಾರಿಯು ಸ್ವತ: ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತರಾಗತಕ್ಕದ್ದು:

ಮತ್ತು ಪರಂತು ವಿದ್ಯುನ್ಮಾನದಲ್ಲಿ ಮಾಡಲಾದ ಅರ್ಜಿಯು ಲಭ್ಯವಾಗುವ ಜಾಲತಾಣವನ್ನು ಆಯುಕ್ತನು ಅಧಿಸೂಚಿಸಬಹುದು.

XX XX XX

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SIXTEENTH SESSION**

# THE KARNATAKA TAXATION LAWS (AMENDMENT) BILL, 2013

**(L.A. Bill No. 9 of 2013)**

A Bill further to amend certain taxation laws in force in the State of Karnataka.

Whereas it is expedient further to amend certain taxation laws for the purposes hereinafter appearing;

Be it enacted by the Karnataka State Legislature in the Sixty Fourth Year of the Republic of India, as follows.-

1. Short title and commencement.- (1) This Act may be called the Karnataka Taxation Laws (Amendment) Act, 2013.

(2) It shall come into force with effect from the First day of April, 2013.

**2. Amendment of Karnataka Act 35 of 1976.-** In the Karnataka Tax on Professions, Trades, Callings and Employments Act, 1976 (Karnataka Act 35 of 1976), in section 16, in sub-section (1), the proviso shall be omitted.

**3. Amendment of Karnataka Act 27 of 1979.-** In the Karnataka Tax on Entry of Goods Act, 1979 (Karnataka Act 27 of 1979),-

(1) in section 3, in sub-section (7), for the words "two lakh rupees", the words "five lakh rupees" shall be substituted;

(2) in section 4, in sub-section (1), in clause (b), for the words "two lakhs rupees", the words "five lakh rupees" shall be substituted.

## STATEMENT OF OBJECTS AND REASONS

It is considered necessary to amend the Karnataka Tax on Professions, Trades, Callings and Employments Act, 1976 and the Karnataka Tax on Entry of Goods Act, 1979 to give effect to the proposals made in the Budget and matters connected therewith.

Hence the Bill.

## FINANCIAL MEMORANDUM

There is no extra expenditure involved by the proposed measure.

**JAGADISH SHETTAR**
Chief Minister and
Minister for Finance

**P. OMPRAKASHA**
Secretary
Karnataka Legislative Assembly

## ANNEXURE

## EXTRACT OF THE KARNATAKA TAX ON PROFESSIONS TRADES, CALLINGS AND EMPLOYMENTS ACT, 1976 (KARNATAKA ACT NO.35 OF 1976)

XXXXX

**16. Appeals.-** (1) Any employer, not being an officer of Government or any person aggrieved by an order of an assessing authority may appeal to the Joint Commissioner of the area concerned:

Provided that no appeal shall lie against an order passed under sub-section (3) of Section 7.

XXXXX

**Extract of the Karnataka Tax on Entry of Goods Act, 1979 (Karnataka Act No. 27 of 1979)**

XXXXX

**3. Levy of tax.-**(1) There shall be levied and collected a tax on entry of any goods specified in the First Schedule into a local area for consumption, use and sale therein, at such rates not exceeding five per cent of the value of the goods as may be specified retrospectively or prospectively by the State Government by Notification, and different dates and different rates may be specified in respect of different goods or different classes of goods or different local areas.

Provided further that no tax shall be payable on cast iron castings when used as raw material, component part or any other input which may be used in the manufacture of an intermediate or finished goods.

Provided that no tax shall be payable on cast iron castings when used as raw material, component part or any other input which may be used in the manufacture of an intermediate finished goods.

(2) The tax levied under sub-section (1) shall be paid by every registered dealer or a dealer liable to get himself registered under this Act or the Central Government or a State Government other than the State Government of Karnataka who brings or causes to be brought into a local area the goods whether on his own account or on account of his principal or any other person or who takes delivery or is entitled to take delivery of such goods on its entry into a local area.

XXXXX

(7) Every manufacturer who brings or causes to be brought any goods into a local area or every dealer who brings or causes to be brought any goods into the State, the aggregate value of which is less than one lakh rupees in a year and any other dealer who brings or causes to be brought any goods into a local area, the aggregate value of which is less than two lakh rupees, shall not be liable to pay tax for that year:

Provided that every non-resident dealer including his agent or manager, or every occasional dealer shall be liable to pay the tax each year at the rates specified irrespective of the aggregate value of the goods brought or caused to be brought into the local area during the year.

XXXXX

**4. Registration of dealers.-**(1) Every dealer,-

(a) who buys or receives goods liable to tax under this Act and who is doing business in a local area and is registered or is liable for registration under Section 10 of the Karnataka Sales Tax Act, 1957 (Karnataka Act 25 of 1957) or Section 22 of the Karnataka Value Added Tax Act, 2003 (Karnataka Act 32 of 2004), or

(b) who brings or causes to be brought such goods into a local area or takes delivery or is entitled to take delivery of such goods, the aggregate value of which is not less than two lakhs rupees in a year,

shall get himself registered under this Act in such manner on payment of such fee and within such period as may be prescribed. The registration shall be renewed from year to year on payment of the prescribed fee until it is cancelled.

Provided that every manufacturer who buys or causes to be brought any goods into a local area or every dealer who brings or causes to be brought any goods into the State shall get himself registered under this Act, if the aggregate value of such goods brought into a local area or into the State, as the case may be, is not less than one lakh rupees in a year;

Provided further that the Commissioner may notify the website in which an application shall be made electronically.

XXXXX


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪) | ನಂ. ೪೧೩ |
| **Part – IV-A** | **Bangalore, Thursday, February 14, 2013 (Magha 25, Shaka Varsha 1934)** | **No. 413** |


## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/12/Bill/2013, Bangalore, Dated: 14-02-2013**

The following Bill was introduced in Legislative Assembly on 14-2-2013

# ಕರ್ನಾಟಕ ವಿಧಾನ ಸಭೆ
## ಹದಿಮೂರನೇ ವಿಧಾನ ಸಭೆ
## ಹದಿನಾರನೇ ಅಧಿವೇಶನ
## ಕರ್ನಾಟಕ ಧನವಿನಿಯೋಗ ವಿಧೇಯಕ, 2013
**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 12)**

2012–13ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2012–13ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ:

ಇದು ಭಾರತ ಗಣರಾಜ್ಯದ ಅರವತ್ತನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ.

**1. ಸಂಕ್ಷಿಪ್ತ ಹೆಸರು:** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ ಅಧಿನಿಯಮ, 2013 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ 2012–13**ನೇ ಹಣಕಾಸು ವರ್ಷಕ್ಕಾಗಿ 582232.46 ಲಕ್ಷ ರೂಪಾಯಿಗಳ ನೀಡಿಕೆ: ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟ ಪಡಿಸಲಾದ ಸೇವೆಗಳ ಸಂಬಂಧದಲ್ಲಿ 2012–13ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಐದು ಸಾವಿರದ ಎಂಟು ನೂರಾ ಇಪ್ಪತ್ತೆರಡು ಕೋಟಿ ಮೂವತ್ತೆರಡು ಲಕ್ಷ ನಲವತ್ತಾರು ಸಾವಿರ ರೂಪಾಯಿಗಳು. ಮೀರದಷ್ಟು ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು.

**3. ಧನವಿನಿಯೋಗ:** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**
**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

(`. ಲಕ್ಷಗಳಲ್ಲಿ)

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 2,490.19 | ... | 2,490.19 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 3,132.41 | ... | 3,132.41 |
| 03 | ಆರ್ಥಿಕ | ರಾಜಸ್ವ | 1,759.68 | ... | 1,759.68 |
| | | ಬಂಡವಾಳ | 6,005.98 | ... | 6,005.98 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 3,275.59 | 90.71 | 3,366.30 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 19,702.93 | ... | 19,702.93 |
| | | ಬಂಡವಾಳ | 48.55 | ... | 48.55 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ರಾಜಸ್ವ | 1.00 | ... | 1.00 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 26,051.06 | ... | 26,051.06 |
| | | ಬಂಡವಾಳ | 20,683.00 | ... | 20,683.00 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 6,558.97 | ... | 6,558.97 |
| 09 | ಸಹಕಾರ | ರಾಜಸ್ವ | 3.00 | ... | 3.00 |
| 10 | ಸಮಾಜ ಕಲ್ಯಾಣ | ರಾಜಸ್ವ | 12,107.60 | ... | 12,107.60 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 9,599.73 | ... | 9,599.73 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 457.42 | ... | 457.42 |
| | | ಬಂಡವಾಳ | 100.00 | ... | 100.00 |

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 10,019.16 | ... | 10,019.16 |
| 14 | ಕಂದಾಯ | ರಾಜಸ್ವ | 1,12,812.66 | ... | 1,12,812.66 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 187.50 | ... | 187.50 |
| 16 | ವಸತಿ | ರಾಜಸ್ವ | 1,422.00 | ... | 1,422.00 |
| 17 | ಶಿಕ್ಷಣ | ರಾಜಸ್ವ | 27,033.72 | ... | 27,033.72 |
| | | ಬಂಡವಾಳ | 1,180.00 | ... | 1,180.00 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 5,953.47 | ... | 5,953.47 |
| | | ಬಂಡವಾಳ | 5,622.62 | ... | 5,622.62 |
| 19 | ನಗರಾಭಿವೃದ್ಧಿ | ರಾಜಸ್ವ | 39,701.81 | ... | 39,701.81 |
| 20 | ಲೋಕೋಪಯೋಗಿ | ರಾಜಸ್ವ | 30,755.48 | ... | 30,755.48 |
| | | ಬಂಡವಾಳ | 56,427.00 | ... | 56,427.00 |
| 21 | ಜಲಸಂಪನ್ಮೂಲ | ರಾಜಸ್ವ | 11,968.30 | ... | 11,968.30 |
| | | ಬಂಡವಾಳ | 6,029.00 | ... | 6,029.00 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 3,560.96 | ... | 3,560.96 |
| | | ಬಂಡವಾಳ | 5,700.01 | ... | 5,700.01 |
| 23 | ಕಾರ್ಮಿಕ | ರಾಜಸ್ವ | 69.31 | ... | 69.31 |
| 24 | ಇಂಧನ | ರಾಜಸ್ವ | 75,000.00 | ... | 75,000.00 |
| | | ಬಂಡವಾಳ | 75,000.00 | ... | 75,000.00 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 980.00 | ... | 980.00 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 18.68 | ... | 18.68 |
| 27 | ಕಾನೂನು | ರಾಜಸ್ವ | 497.38 | ... | 497.38 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 225.58 | ... | 225.58 |
| | **ಮೊತ್ತ** | **ರಾಜಸ್ವ** | **4,05,345.59** | **90.71** | **4,05,436.30** |
| | | **ಬಂಡವಾಳ** | **1,76,796.16** | ... | **1,76,796.16** |
| | **ಒಟ್ಟು ಮೊತ್ತ** | | **5,82,141.75** | **90.71** | **5,82,232.46** |

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

2012–13ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 205ನೇ (1) (ಎ) ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಜಗದೀಶ್ ಶೆಟ್ಟರ್**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SIXTEENTH SESSION**

# THE KARNATAKA APPROPRIATION BILL, 2013

**(L.A. Bill No. 12 of 2013)**

A Bill to authorize payment and appropriation of certain further sums from and out of the Consolidated Fund of the State of Karnataka for the Services of the Financial year 2012-13.

Whereas it is expedient to authorize payment and appropriation of certain further sums from and out of the Consolidated fund of the State for the services of the Financial year 2012-13.

Be it enacted by the Karnataka State Legislature in the Sixty Fourth Year of the Republic of India as follows :-

**1. Short Title :** This Act may be called the Karnataka Appropriation Act, 2013.

**2. Issue of Rupees 582232.46** Lakhs out of the Consolidated Fund of the State of Karnataka for the Financial year 2012-13 : From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of Rupees Five Thousand Eight Hundred and Twenty Two Crore Thirty Two Lakhs Forty Six Thousand towards defraying the several charges which will come in the course of payment during the Financial Year 2012-13 in respect of the services specified in column 2 of the schedule.

**3. Appropriation :-** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**

**(See Section 2 and 3)**

(`. in Lakhs)

| Demand No. | Service & Purpose | | Sums not exceeding | | Total |
|---|---|---|---|---|---|
| | | | voted by the Legislative Assembly | Charged on the consolidated Fund | |
| 1 | 2 | | 3 | 4 | 5 |
| 01 | Agriculture & Horticulture | Revenue | 2,490.19 | ... | 2,490.19 |
| 02 | Animal Husbandry & Fisheries | Revenue | 3,132.41 | ... | 3,132.41 |
| 03 | Finance | Revenue | 1,759.68 | ... | 1,759.68 |
| | | Capital | 6,005.98 | ... | 6,005.98 |
| 04 | Department of Personnel & Administrative Reforms | Revenue | 3,275.59 | 90.71 | 3,366.30 |
| 05 | Home & Transport | Revenue | 19,702.93 | ... | 19,702.93 |
| | | Capital | 48.55 | ... | 48.55 |
| 06 | Infrastructure Development | Revenue | 1.00 | ... | 1.00 |
| 07 | Rural Development & Panchayath Raj | Revenue | 26,051.06 | ... | 26,051.06 |
| | | Capital | 20,683.00 | ... | 20,683.00 |
| 08 | Forest, Ecology & Environment | Revenue | 6,558.97 | ... | 6,558.97 |
| 09 | Co - operation | Revenue | 3.00 | ... | 3.00 |
| 10 | Social Welfare | Revenue | 12,107.60 | ... | 12,107.60 |
| 11 | Women & Child Development | Revenue | 9,599.73 | ... | 9,599.73 |
| 12 | Information, Tourism & Youth Services | Revenue | 457.42 | ... | 457.42 |
| | | Capital | 100.00 | ... | 100.00 |

| Demand No. | Service & Purpose | | Sums not exceeding | | Total |
|---|---|---|---|---|---|
| | | | voted by the Legislative Assembly | Charged on the consolidated Fund | |
| 1 | 2 | | 3 | 4 | 5 |
| 13 | Food & Civil Supplies | Revenue | 10,019.16 | ... | 10,019.16 |
| 14 | Revenue | Revenue | 1,12,812.66 | ... | 1,12,812.66 |
| 15 | Information Technology | Revenue | 187.50 | ... | 187.50 |
| 16 | Housing | Revenue | 1,422.00 | ... | 1,422.00 |
| 17 | Education | Revenue | 27,033.72 | ... | 27,033.72 |
| | | Capital | 1,180.00 | ... | 1,180.00 |
| 18 | Commerce and Industries | Revenue | 5,953.47 | ... | 5,953.47 |
| | | Capital | 5,622.62 | ... | 5,622.62 |
| 19 | Urban Development | Revenue | 39,701.81 | ... | 39,701.81 |
| 20 | Public Works | Revenue | 30,755.48 | ... | 30,755.48 |
| | | Capital | 56,427.00 | ... | 56,427.00 |
| 21 | Water Resources | Revenue | 11,968.30 | ... | 11,968.30 |
| | | Capital | 6,029.00 | ... | 6,029.00 |
| 22 | Health and Family Welfare | Revenue | 3,560.96 | ... | 3,560.96 |
| | | Capital | 5,700.01 | ... | 5,700.01 |
| 23 | Labour | Revenue | 69.31 | ... | 69.31 |
| 24 | Energy | Revenue | 75,000.00 | ... | 75,000.00 |
| | | Capital | 75,000.00 | ... | 75,000.00 |
| 25 | Kannada and Culture | Revenue | 980.00 | ... | 980.00 |
| 26 | Planning, Statistics, Science and Technology | Revenue | 18.68 | ... | 18.68 |
| 27 | Law | Revenue | 497.38 | ... | 497.38 |
| 28 | Parliamentary Affairs and Legislation | Revenue | 225.58 | ... | 225.58 |
| | **TOTAL** | **Revenue** | **4,05,345.59** | **90.71** | **4,05,436.30** |
| | | **Capital** | **1,76,796.16** | **...** | **1,76,796.16** |
| | **GRAND TOTAL** | | **5,82,141.75** | **90.71** | **5,82,232.46** |

**STATEMENT OF OBJECTS AND REASONS**

This Bill is introduced in pursuance of the provisions of Article 205 (1) (a) of the Constitution of India to provide for the appropriation out of the Consolidated Fund of the State towards defraying the several charges which will come in course of payment during the part of the Financial Year 2012-13.

**JAGADISH SHETTER**
Chief Minister &
Minister for Finance

**P. OMPRAKASHA**
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಫೆಬ್ರವರಿ ೧೪, ೨೦೧೩ (ಮಾಘ ೨೫, ಶಕ ವರ್ಷ ೧೯೩೪) | ನಂ. ೪೧೪ |
|---|---|---|
| **Part – IV-A** | **Bangalore, Thursday, February 14, 2013 (Magha 25, Shaka Varsha 1934)** | **No. 414** |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/13/Bill/2013, Bangalore, Dated: 14-02-2013**

The following Bill was introduced in Legislative Assembly on 14-2-2013

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನಾರನೇ ಅಧಿವೇಶನ**

**ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ತಿದ್ದುಪಡಿ) ವಿಧೇಯಕ, 2013**

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 13)**

ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 35) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಮೋಟಾರು ವಾಹನಗಳ ತೆರಿಗೆ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು 2013ರ ಏಪ್ರಿಲ್ ತಿಂಗಳ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 4ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 35) 4ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ, ಮೂರನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2013–14ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೊಳಿಸುವುದಕ್ಕಾಗಿ ಕರ್ನಾಟಕ ಮೋಟಾರು ವಾಹನಗಳ ತೆರಿಗೆ ಅಧಿನಿಯಮ, 1957ನ್ನು (1957ರ ಕರ್ನಾಟಕ ಅಧಿನಿಯಮ 35) ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಆರ್. ಅಶೋಕ**
ಉಪಮುಖ್ಯಮಂತ್ರಿಗಳು ಹಾಗೂ
ಗೃಹ ಮತ್ತು ಸಾರಿಗೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**20. ಹಣಕಾಸು ಅಧಿಕಾರಿ.–** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು, ಪರಿನಿಯಮಗಳ ಮೂಲಕ ಪ್ರದತ್ತಗೊಳಿಸಬಹುದಾದ ಅಂಥ ವಿಧಾನದಲ್ಲಿ ಹಣಕಾಸು ಅಧಿಕಾರಿಯನ್ನು ನೇಮಕ ಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**21. ಇತರ ಅಧಿಕಾರಿಗಳು.–** ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ ನೇಮಕಾತಿಯ ವಿಧಾನ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಕರ್ತವ್ಯಗಳು ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**22. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವುಗಳು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(i) ಪ್ರಬಂಧಕ ಮಂಡಳಿ;

(ii) ವ್ಯವಸ್ಥಾಪನಾ ಮಂಡಳಿ;

(iii) ಶೈಕ್ಷಣಿಕ ಪರಿಷತ್ತು;

(iv) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು;

(v) ಹಣಕಾಸು ಸಮಿತಿ; ಮತ್ತು

(vi) ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಪರಿನಿಯಮಗಳ ಮೂಲಕ ಘೋಷಿಸಬಹುದಾದ ಅಂಥ ಇತರ ಪ್ರಾಧಿಕಾರಗಳು.

**23. ಪ್ರಬಂಧಕ ಮಂಡಳಿ ಮತ್ತು ಇದರ ಅಧಿಕಾರಗಳು.–** (1) ಪ್ರಬಂಧಕ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು – ಅಧ್ಯಕ್ಷರು;

(ii) ಕುಲಪತಿಯವರು – ಸದಸ್ಯರು;

(iii) ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(iv) ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(v) ರಾಜ್ಯ ಸರ್ಕಾರವು ನಾಮ ನಿರ್ದೇಶನ ಮಾಡಿದ ಆಡಳಿತವನ್ನು ಒಳಗೊಂಡಂತೆ ವ್ಯವಸ್ಥಾಪನೆ, ಹಣಕಾಸು ಅಥವಾ ಯಾವುದೇ ಇತರ ವಿಶೇಷ ಕ್ಷೇತ್ರದಲ್ಲಿನ ಒಬ್ಬರು ತಜ್ಞರು;

(vi) ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶಿಸಿದ ಇಬ್ಬರು ವ್ಯಕ್ತಿಗಳು ಅವರ ಪೈಕಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(vii) ಸಹ ಕುಲಪತಿಯವರು ಮತದಾನದ ಹಕ್ಕಿಲ್ಲದ ಸದಸ್ಯರಾಗಿರತಕ್ಕದ್ದು;

(viii) ವಿಶ್ವವಿದ್ಯಾಲಯ ಅನುದಾನ ಆಯೋಗದ ನಾಮನಿರ್ದೇಶಿತ ಒಬ್ಬ ಸುಪ್ರಸಿದ್ಧ ಶಿಕ್ಷಣ ತಜ್ಞರು.

(2) ಕುಲಸಚಿವರು ಪ್ರಬಂಧಕ ಮಂಡಳಿಯ ಮತ ದಾನದ ಹಕ್ಕಿರದ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ಪ್ರಬಂಧಕ ಮಂಡಳಿಯ ಸದಸ್ಯರ ಪದಾವಧಿ, ಸರ್ಕಾರದಿಂದ ನಾಮನಿರ್ದೇಶಿತರಾದ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ನೇಮಕಾತಿ, ನವೀಕರಣ ಮತ್ತು ತೆಗೆದುಹಾಕುವುದು ಮುಂತಾದವುಗಳು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಲ್ಲಿ ಕುಲಾಧಿಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಗೈರುಹಾಜರಿಯಲ್ಲಿ ಕುಲಾಧಿಪತಿಯವರಿಂದ ನಾಮನಿರ್ದೇಶಿತರಾದ ಯಾರಾದರೂ ಒಬ್ಬರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಅಂಥ ಸಭೆಯ ಅಧ್ಯಕ್ಷತೆಯನ್ನು ವಹಿಸುವುದಕ್ಕೆ ಕುಲಾಧಿಪತಿಯವರು ಯಾವೊಬ್ಬ ವ್ಯಕ್ತಿಯನ್ನೂ ನಾಮನಿರ್ದೇಶನ ಮಾಡಿರದಿದ್ದಲ್ಲಿ, ಸಭೆಯಲ್ಲಿ ಹಾಜರಿರುವ ಸದಸ್ಯರು ಸರಳ ಬಹುಮತದ ಮೂಲಕ ಅವರುಗಳ ಪೈಕಿಯಿಂದಲೇ ಆ ಸಭೆಗೆ ಮಾತ್ರವೇ ಅಧ್ಯಕ್ಷನನ್ನು ಚುನಾಯಿಸತಕ್ಕದ್ದು.

(5) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಿಗೆ, ಅಂಥ ಸಭೆಯಲ್ಲಿ ಹಾಜರಾಗುವ ಮತ್ತು ಮತದಾನ ನೀಡುವ ಮೂರು ಜನ ಸದಸ್ಯರು ಗಣಪೂರ್ತಿ (ಕೋರಂ) ಆಗಿರತಕ್ಕದ್ದು:

ಪರಂತು, ಪ್ರಬಂಧಕ ಮಂಡಳಿಯ ಯಾವುದೇ ಸಭೆಯ ಕೋರಂ ಪೂರ್ಣವಾಗಬೇಕಾದರೆ ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು ಹಾಜರಿರುವುದು ಮತ್ತು ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ನಾಮನಿರ್ದೇಶಿತರು ಹಾಜರಾಗದೇ ಇದ್ದಾಗ ಕುಲಪತಿಯವರು ಹಾಜರಿರುವುದು ಯಾವಾಗಲೂ ಅವಶ್ಯವಾಗಿರತಕ್ಕದ್ದು.

(6) ಪ್ರಬಂಧಕ ಮಂಡಳಿಯು ವಿಶ್ವವಿದ್ಯಾಲಯದ ಪ್ರಧಾನ ಪ್ರಬಂಧಕ ಸಂಸ್ಥೆಯಾಗಿರತಕ್ಕದ್ದು ಮತ್ತು ಅದು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಶಾಸನಬದ್ಧ ಲೆಕ್ಕಪರಿಶೋಧಕರನ್ನು ನೇಮಕಗೊಳಿಸುವುದು;

(ii) ವಿಶ್ವವಿದ್ಯಾಲಯವು ಅನುಸರಿಸಬೇಕಾದ ಕಾರ್ಯನೀತಿಗಳನ್ನು ರಚಿಸುವುದು;

(iii) ಈ ಅಧಿನಿಯಮದ ಅಥವಾ ಪರಿನಿಯಮಗಳ ಅಥವಾ ನಿಯಮಗಳ ಉಪಬಂಧಗಳಿಗೆ ಅನುಗುಣವಾಗಿ ಇರದ ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ತೀರ್ಮಾನಗಳನ್ನು ಪುನರೀಕ್ಷಿಸುವುದು;

(iv) ವಿಶ್ವವಿದ್ಯಾಲಯದ ಆಯವ್ಯಯ ಮತ್ತು ವಾರ್ಷಿಕ ವರದಿಗಳನ್ನು ಅನುಮೋದಿಸುವುದು;

(v) ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸುವುದು ಅಥವಾ ಈಗಾಗಲೇ ಇರುವ ಪರಿನಿಯಮಗಳು ಮತ್ತು ನಿಯಮಗಳನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

(vi) ವಿಶ್ವವಿದ್ಯಾಲಯವನ್ನು ಸ್ವಯಂಸಮಾಪನಗೊಳಿಸುವ ನಿರ್ಧಾರವನ್ನು ತೆಗೆದುಕೊಳ್ಳುವುದು;

(vii) ಸರ್ಕಾರಕ್ಕೆ ಸಲ್ಲಿಸುವ ಪ್ರಸ್ತಾವಗಳನ್ನು ಅನುಮೋದಿಸುವುದು;

(viii) ಶುಲ್ಕ ನಿಯಂತ್ರಣ ಸಮಿತಿಗೆ ಮೂವರು ಸದಸ್ಯರನ್ನು ನಾಮನಿರ್ದೇಶನ ಮಾಡುವುದು;

(ix) ವಿಶ್ವವಿದ್ಯಾಲಯದ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕೆ ಅಪೇಕ್ಷಣೀಯವೆಂದು ಕಂಡುಬರುವಂಥ ತೀರ್ಮಾನಗಳನ್ನು ಮತ್ತು ಕ್ರಮಗಳನ್ನು ಕೈಗೊಳ್ಳುವುದು.

(7) ಪ್ರಬಂಧಕ ಮಂಡಳಿಯು ಒಂದು ವರ್ಷದಲ್ಲಿ ಕನಿಷ್ಠ ಮೂರು ಸಲ ಸಭೆ ಸೇರತಕ್ಕದ್ದು.

(8) ಪ್ರಬಂಧಕ ಮಂಡಳಿಯು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಸಮಯ ಮತ್ತು ಸ್ಥಳದಲ್ಲಿ ಸಭೆ ಸೇರತಕ್ಕದ್ದು.

**24. ವ್ಯವಸ್ಥಾಪನಾ ಮಂಡಳಿ.–** (1) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಗಳು;

(ii) ಸಹಕುಲಪತಿಗಳು;

(iii) ಕುಲಸಚಿವರು;

(iv) ಪ್ರಾಯೋಜಕ ಸಂಸ್ಥೆಯ ಇಬ್ಬರು ನಾಮನಿರ್ದೇಶಿತರು;

(v) ಕುಲಪತಿಗಳು ನಾಮನಿರ್ದೇಶಿಸಬಹುದಾದ ವಿದ್ಯಾಲಯಗಳ ಇಬ್ಬರು ಡೀನ್‌ಗಳು;

(2) ಕುಲಪತಿಯವರು ವ್ಯವಸ್ಥಾಪನಾ ಮಂಡಳಿಯ ಅಧ್ಯಕ್ಷರಾಗಿರತಕ್ಕದ್ದು ಮತ್ತು ಕುಲಸಚಿವರು ವ್ಯವಸ್ಥಾಪನಾ ಮಂಡಳಿಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ವ್ಯವಸ್ಥಾಪನಾ ಮಂಡಳಿಯು ವಿಶ್ವವಿದ್ಯಾಲಯದ ಕಾರ್ಯನಿರ್ವಾಹಕ ಸಂಸ್ಥೆಯಾಗಿರತಕ್ಕದ್ದು. ವ್ಯವಸ್ಥಾಪನಾ ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

(4) ವ್ಯವಸ್ಥಾಪನಾ ಮಂಡಳಿಯ ಎಲ್ಲಾ ಸಭೆಗಳಲ್ಲಿ ಯಾವಾಗಲೂ ಕುಲಪತಿಯವರು ಅಧ್ಯಕ್ಷತೆ ವಹಿಸತಕ್ಕದ್ದು ಹಾಗೂ ಕುಲಪತಿಯವರ ಗೈರುಹಾಜರಿಯಲ್ಲಿ ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶನ ಮಾಡಿದವರು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪ್ರಾಯೋಜಕ ಸಂಸ್ಥೆಯು ಯಾರನ್ನೂ ನಾಮನಿರ್ದೇಶನ ಮಾಡದೇ ಇದ್ದ ಸಂದರ್ಭದಲ್ಲಿ ಸಭೆಯಲ್ಲಿ ಹಾಜರಿರುವ ಸದಸ್ಯರು ಚುನಾಯಿಸಿದ ಯಾವುದೇ ಇತರ ಸದಸ್ಯರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(5) ವ್ಯವಸ್ಥಾಪನಾ ಮಂಡಳಿಯ ಸಭೆಯಲ್ಲಿ ಯಾವುದೇ ವಿಷಯವನ್ನು ಕುರಿತು ವಿವಾದ ಉಂಟಾದಲ್ಲಿ ಸದರಿ ವಿಷಯವನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿಷಯದ ಬಗ್ಗೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**25. ಶೈಕ್ಷಣಿಕ ಪರಿಷತ್ತು.–**(1) ಶೈಕ್ಷಣಿಕ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಯವರು – ಅಧ್ಯಕ್ಷರು

(ii) ಸಹಕುಲಪತಿಯವರು – ಸದಸ್ಯರು

(iii) ಕುಲಸಚಿವರು – ಕಾರ್ಯದರ್ಶಿಗಳು

(iv) ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

(2) ಶೈಕ್ಷಣಿಕ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಶೈಕ್ಷಣಿಕ ಸಂಸ್ಥೆಯಾಗಿರತಕ್ಕದ್ದು ಮತ್ತು ಈ ಅಧಿನಿಯಮದ, ಪರಿನಿಯಮಗಳ, ವಿನಿಯಮಗಳ ಹಾಗೂ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**26. ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು.–** (1) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಸಂಶೋಧನಾ ಮತ್ತು ಅನ್ವೇಷಣಾ ಸಮಿತಿಯಾಗಿರತಕ್ಕದ್ದು ಹಾಗೂ ಸಂಶೋಧನಾ ಕ್ಷೇತ್ರಗಳ ಆದ್ಯತೆಯೂ ಒಳಗೊಂಡಂತೆ, ವಿಶ್ವವಿದ್ಯಾಲಯವು ಕೈಗೊಳ್ಳಬೇಕಾದ ಸಂಶೋಧನೆಯ ಬಗ್ಗೆ ಒಂದು ವ್ಯಾಪಕವಾದ ಪರಿಪೂರ್ಣ ಭವಿಷ್ಯದ್ ದೃಷ್ಟಿಯನ್ನು ಒದಗಿಸತಕ್ಕದ್ದು. ಈ ಪರಿಷತ್ತು, ಈ ಅಧಿನಿಯಮದ, ಪರಿನಿಯಮಗಳ, ವಿನಿಯಮಗಳ ಮತ್ತು ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಸಂಶೋಧನೆ ಮತ್ತು ಅನ್ವೇಷಣಾ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

| | | |
|---|---|---|
| (i) | ಕುಲಪತಿಯವರು | – ಅಧ್ಯಕ್ಷರು |
| (ii) | ಸಹಕುಲಪತಿಯವರು | – ಸದಸ್ಯರು |
| (iii) | ಸಂಶೋಧನೆಯ ಡೀನ್ | – ಕಾರ್ಯದರ್ಶಿ |
| (iv) | ಅನ್ವೇಷಣಾ ವಿಭಾಗದ ಮುಖ್ಯಸ್ಥರು | – ಸದಸ್ಯರು |
| (v) | ಎಲ್ಲಾ ವ್ಯಾಸಂಗ ವಿಭಾಗಗಳ ಡೀನ್‌ಗಳು | – ಸದಸ್ಯರು ಮತ್ತು |
| (vi) | ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು. | |

**27. ಹಣಕಾಸು ಸಮಿತಿ.–** (1) ಹಣಕಾಸು ಸಮಿತಿ ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

| | | |
|---|---|---|
| (i) | ಕುಲಾಧಿಪತಿಯವರು ಅಥವಾ ಅವರ ನಾಮನಿರ್ದೇಶಿತರು | – ಅಧ್ಯಕ್ಷರು |
| (ii) | ಕುಲಪತಿಯವರು | – ಸದಸ್ಯರು |
| (iii) | ಕುಲಸಚಿವರು | – ಸದಸ್ಯರು |
| (iv) | ಹಣಕಾಸು ಅಧಿಕಾರಿ | – ಕಾರ್ಯದರ್ಶಿ |
| (v) | ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು | – ಸದಸ್ಯರು; ಮತ್ತು |
| (vi) | ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು. | |

(2) ಹಣಕಾಸು ಸಮಿತಿಯು ಹಣಕಾಸಿನ ವಿಷಯಗಳನ್ನು ಕೈಗೊಳ್ಳುವ ವಿಶ್ವವಿದ್ಯಾಲಯದ ಪ್ರಧಾನ ಹಣಕಾಸು ಸಂಸ್ಥೆಯಾಗಿರತಕ್ಕದ್ದು ಹಾಗೂ ಅದು ಈ ಅಧಿನಿಯಮ, ನಿಯಮಗಳು ಮತ್ತು ಪರಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಹಣಕಾಸು ವಿಷಯಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**28. ಇತರ ಪ್ರಾಧಿಕಾರಗಳು.–** ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಹಾಗೂ ಪ್ರಕಾರ್ಯಗಳು ಪರಿನಿಯಮಗಳಿಂದ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**29. ಒಂದು ಪ್ರಾಧಿಕಾರದ ಅಥವಾ ಸಂಸ್ಥೆಯ ಸದಸ್ಯತ್ವಕ್ಕೆ ಅನರ್ಹತೆ.–** ವಿಶ್ವವಿದ್ಯಾಲಯದ ಸಂಸ್ಥೆಗಳ ಯಾವುವೇ ಪ್ರಾಧಿಕಾರಗಳ ಒಬ್ಬ ವ್ಯಕ್ತಿಯು,–

(ಎ) ಅಸ್ವಸ್ಥ ಚಿತ್ತನಾಗಿದ್ದು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲ್ಪಟ್ಟಿದ್ದರೆ;

(ಬಿ) ಅವಿಮುಕ್ತ ದಿವಾಳಿಯಾಗಿದ್ದರೆ;

(ಸಿ) ನೈತಿಕ ಅಧ:ಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದರೆ;

(ಡಿ) ಖಾಸಗಿ ಬೋಧನಾ ತರಗತಿಗಳನ್ನು ನಡೆಸುತ್ತಿದ್ದರೆ ಅಥವಾ ಸ್ವತ: ನಿರತನಾಗಿದ್ದರೆ;

(ಇ) ಯಾವುದೇ ವಿಧದಲ್ಲಿ, ಎಲ್ಲಿಯೇ, ಯಾವುದೇ ಪರೀಕ್ಷೆಯನ್ನು ನಡೆಸುವಲ್ಲಿ ಅನುಚಿತ ಅಭ್ಯಾಸದಲ್ಲಿ ತೊಡಗಿದ್ದಕ್ಕಾಗಿ ಅಥವಾ ಉತ್ತೇಜಿಸಿದ್ದಕ್ಕಾಗಿ ದಂಡಿತನಾಗಿದ್ದರೆ;

(ಎಫ್) ಪ್ರಾಯೋಜಿತ ಸಂಸ್ಥೆಯು ಯಾವುವೇ ಪ್ರಾಧಿಕಾರಗಳ ಅಥವಾ ಸಂಸ್ಥೆಗಳ ಯಾವೊಬ್ಬ ಸದಸ್ಯನನ್ನು ಆ ಪದವನ್ನು ಹೊಂದಿರುವುದಕ್ಕೆ ಅರ್ಹನಲ್ಲನೆಂದು ಲಿಖಿತದಲ್ಲಿ ಅಭಿಪ್ರಾಯ ನೀಡಿದಾಗಲೆಲ್ಲಾ,

–ಸದಸ್ಯನಾಗಿರುವುದಕ್ಕೆ ಅನರ್ಹನಾಗತಕ್ಕದ್ದು.

**30. ಖಾಲಿಸ್ಥಾನ ಇರುವ ಕಾರಣದಿಂದಾಗಿ ವ್ಯವಹರಣೆಗಳು ಅಸಿಂಧುವಾಗತಕ್ಕದ್ದಲ್ಲ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಕಾರ್ಯ ಅಥವಾ ವ್ಯವಹರಣೆಗಳು ಕೇವಲ ಅದರಲ್ಲಿ ಯಾವುದೇ ಖಾಲಿಸ್ಥಾನ ಇದೆ ಎಂಬ ಕಾರಣದಿಂದ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆ ಎಂಬ ಕಾರಣದಿಂದ ಮಾತ್ರವೇ ಅಸಿಂಧುವಾಗತಕ್ಕದ್ದಲ್ಲ.

**31. ಕಾರ್ಯಸೂಚಿ ವಿಷಯಗಳ ಬಗ್ಗೆ ಉಪಬಂಧಗಳು.–** (1) ಯಾವುವೇ ಕಾರ್ಯಸೂಚಿ ವಿಷಯಗಳನ್ನು ಕುಲಾಧಿಪತಿಯವರ ಪೂರ್ವಾನುಮೋದನೆಯನ್ನು ಪಡೆಯದೇ ಪ್ರಬಂಧಕ ಮಂಡಳಿಯ ಅಥವಾ ಕಾರ್ಯಕಾರಿ ಪರಿಷತ್ತು ಅಥವಾ ಯಾವುದೇ ಸಮಿತಿಯ ಸಭೆಗಳ ಕಾರ್ಯಸೂಚಿ ವಿಷಯಗಳಲ್ಲಿ ಸೇರಿಸತಕ್ಕದ್ದಲ್ಲ ಅಥವಾ ಚರ್ಚೆಗೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ತೀರ್ಮಾನಿಸತಕ್ಕದ್ದಲ್ಲ.

(2) ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಪಾಲಿಸದೆ ಇರುವ ಸಂದರ್ಭದಲ್ಲಿ, ಕುಲಾಧಿಪತಿಯವರು ವಿಶ್ವವಿದ್ಯಾಲಯದ ಯಾವುದೇ ಪದಾಧಿಕಾರಿ ಅಥವಾ ಸಂಸ್ಥೆಯು ತೆಗೆದುಕೊಂಡ ಎಲ್ಲಾ ತೀರ್ಮಾನಗಳನ್ನು ವಿಪರ್ಯಯಗೊಳಿಸುವ ಮೂಲಕ ಪರಿಹಾರ ಕ್ರಮಗಳನ್ನು ಕೂಡಲೇ ಕೈಗೊಳ್ಳಲು ಅಧಿಕಾರವನ್ನು ಎಲ್ಲಾ ಸಮಯದಲ್ಲಿ ಹೊಂದಿರತಕ್ಕದ್ದು ಮತ್ತು ಅಂಥ ಪರಿಹಾರ ಕ್ರಮದ ಪರಿಣಾಮವಾಗಿ ಅಧಿನಿಯಮದ ಉಪಬಂಧಗಳನ್ನು ಪಾಲಿಸದೇ ವಿಶ್ವವಿದ್ಯಾಲಯದ ಪದಾಧಿಕಾರಿ ಅಥವಾ ಸಂಸ್ಥೆಯು ಕೈಗೊಂಡಿದ್ದ ಎಲ್ಲಾ ಅಂಥ ಕ್ರಮಗಳು, ಮೊದಲಿನಿಂದಲೂ ಶೂನ್ಯ ಮತ್ತು ಅಕೃತ ಎಂದು

ಭಾವಿಸತಕ್ಕದ್ದು ಹಾಗೂ ತತ್ಪರಿಣಾಮವಾಗಿ, ಉಪಬಂಧ ಪಾಲಿಸದೇ ಇದ್ದ ವಿಷಯ ಅಥವಾ ನಿರ್ಧಾರದ ಸಂಬಂಧದಲ್ಲಿ ಅದಕ್ಕೆ ಮುಂಚೆ ಇದ್ದ ವಸ್ತುಸ್ಥಿತಿಯೇ ಮುಂದುವರಿಯತಕ್ಕದ್ದು.

## ಅಧ್ಯಾಯ – V

## ಪರಿನಿಯಮಗಳು ಮತ್ತು ವಿನಿಯಮಗಳು

**32. ಪರಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಪರಿನಿಯಮಗಳು ವಿಶ್ವವಿದ್ಯಾಲಯಕ್ಕೆ ಮತ್ತು ಸಿಬ್ಬಂದಿಗೆ ಸಂಬಂಧಿಸಿದ ಎಲ್ಲಾ ಅಥವಾ ಯಾವುದೇ ವಿಷಯಕ್ಕೆ ಈ ಕೆಳಗಿನಂತೆ ಉಪಬಂಧ ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಕಾರ್ಯಕಲಾಪಗಳನ್ನು ನಡೆಸುವ ಮತ್ತು ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸದಿರುವ ಸಂಸ್ಥೆಗಳ ರಚನೆಯ ಕಾರ್ಯವಿಧಾನ;

(ii) ಶಾಶ್ವತ ಶಾಸನಬದ್ಧ ದತ್ತಿ ನಿಧಿ, ವಿಶ್ವವಿದ್ಯಾಲಯ ದತ್ತಿ ನಿಧಿ, ಸಾಮಾನ್ಯ ನಿಧಿ ಹಾಗೂ ಅಭಿವೃದ್ಧಿ ನಿಧಿಗಳ ನಿರ್ವಹಣೆ;

(iii) ಕುಲಪತಿಗಳು, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿ ಇವರ ನೇಮಕಾತಿಯ ನಿಬಂಧನೆಗಳು ಹಾಗೂ ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಪ್ರಕಾರ್ಯಗಳು;

(iv) ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ, ಅಧ್ಯಾಪಕರ ಮತ್ತು ನೌಕರರ ನೇಮಕಾತಿ ವಿಧಾನ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(v) ವಿಶ್ವವಿದ್ಯಾಲಯ ಹಾಗೂ ಅದರ ಅಧಿಕಾರಿಗಳು, ವ್ಯಾಸಂಗ ವಿಭಾಗದ (ಫ್ಯಾಕಲ್ಟಿ) ಸದಸ್ಯರು, ನೌಕರರು ಹಾಗೂ ವಿದ್ಯಾರ್ಥಿಗಳ ನಡುವೆ ಉಂಟಾದ ವಿವಾದಗಳನ್ನು ಪರಿಹರಿಸುವ ಕಾರ್ಯವಿಧಾನ;

(vi) ವಿಭಾಗಗಳು ಮತ್ತು ವ್ಯಾಸಂಗ ವಿಭಾಗಗಳ (ಫ್ಯಾಕಲ್ಟಿಗಳ) ಸೃಜನೆ, ರದ್ಧತಿ ಅಥವಾ ಪುನಾರಚನೆ;

(vii) ಇತರ ವಿಶ್ವವಿದ್ಯಾಲಯಗಳು ಅಥವಾ ಉನ್ನತ ಕಲಿಕಾ ಸಂಸ್ಥೆಗಳ ಜೊತೆಯಲ್ಲಿ ಸಹಕರಿಸಬೇಕಾದ ರೀತಿ;

(viii) ಗೌರವ ಪದವಿಗಳ ನೀಡಿಕೆಯ ಕಾರ್ಯವಿಧಾನ;

(ix) ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿವೇತನ ಮಂಜೂರಾತಿಗೆ ಸಂಬಂಧಿಸಿದ ಉಪಬಂಧಗಳು;

(x) ವಿವಿಧ ವ್ಯಾಸಂಗ ಕ್ರಮಗಳಲ್ಲಿನ ಸೀಟುಗಳ ಸಂಖ್ಯೆಗೆ ಸಂಬಂಧಿಸಿದ ಕಾರ್ಯನೀತಿಗಳು ಮತ್ತು ಅಂಥ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಕಾರ್ಯವಿಧಾನ;

(xi) ವಿವಿಧ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳಿಗೆ ವಿಧಿಸಬಹುದಾದ ಶುಲ್ಕಕ್ಕೆ ಸಂಬಂಧಿಸಿದ ಕಾರ್ಯನೀತಿ;

(xii) ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಉಚಿತ ಶಿಕ್ಷಣ, ಪದಕಗಳು ಹಾಗೂ ಬಹುಮಾನಗಳನ್ನು ಪ್ರಾರಂಭಿಸುವುದು;

(xiii) ಪ್ರಬಂಧಕ ಮಂಡಳಿಯು ನಿರ್ಧರಿಸಬಹುದಾದ ಅಥವಾ ಈ ಅಧಿನಿಯಮದ ಅಡಿಯಲ್ಲಿ ಪರಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬೇಕಾದ ಅಗತ್ಯತೆಯುಳ್ಳ ಯಾವುದೇ ಇತರ ವಿಷಯಗಳು.

**33. ಪರಿನಿಯಮಗಳ ರಚನೆ ವಿಧಾನ.–** (1) ವ್ಯವಸ್ಥಾಪನಾ ಮಂಡಳಿಯು ರಚಿಸಿದ ಮೊದಲ ಶಾಸನಗಳನ್ನು ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ವ್ಯವಸ್ಥಾಪನಾ ಮಂಡಳಿಯು ಸಲ್ಲಿಸಿದ ಮೊದಲ ಪರಿನಿಯಮಗಳನ್ನು ಪ್ರಬಂಧಕ ಮಂಡಳಿಯು ಪರಿಗಣಿಸತಕ್ಕದ್ದು ಹಾಗೂ ತಾನು ಅವಶ್ಯವೆಂದು ಭಾವಿಸಬಹುದಾದ ಅಂಥ ಮಾರ್ಪಾಡುಗಳು, ಯಾವುದಾದರು ಇದ್ದಲ್ಲಿ, ಅವುಗಳೊಡನೆ ತನ್ನ ಅನುಮೋದನೆಯನ್ನು ನೀಡತಕ್ಕದ್ದು.

(3) ವಿಶ್ವವಿದ್ಯಾಲಯವು, ಪ್ರಬಂಧಕ ಮಂಡಳಿಯು ಅನುಮೋದಿಸಿದ ಮೊದಲ ಪರಿನಿಯಮಗಳನ್ನು ವಿಶ್ವವಿದ್ಯಾಲಯದ ಅಧಿಸೂಚನೆಯಲ್ಲಿ ಪ್ರಕಟಿಸತಕ್ಕದ್ದು ಮತ್ತು ತದನಂತರ ಮೊದಲ ಪರಿನಿಯಮಗಳ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**34. ಪರಿನಿಯಮಗಳ ತಿದ್ದುಪಡಿಯ ಅಧಿಕಾರ.–** ಪ್ರಬಂಧಕ ಮಂಡಳಿಯು ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸಬಹುದು ಅಥವಾ ಪರಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ಅವನ್ನು ನಿರಸನಗೊಳಿಸಬಹುದು.

**35. ವಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ವಿನಿಯಮಗಳು ಈ ಮುಂದಿನ ವಿಷಯಗಳಿಗೆ ಉಪಬಂಧಗಳನ್ನು ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ ಮತ್ತು ವಿದ್ಯಾರ್ಥಿ ಪಟ್ಟಿಯಲ್ಲಿ ಅವರುಗಳ ದಾಖಲಾತಿ ಹಾಗೂ ಮುಂದುವರಿಕೆ;

(ii) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ನಿಗದಿಪಡಿಸತಕ್ಕ ವ್ಯಾಸಂಗ ಕ್ರಮಗಳು;

(iii) ಪದವಿಗಳ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳ ಪ್ರದಾನ;

(iv) ಸಂಶೋಧನಾ ವೇತನಗಳು (ಫೆಲೋಶಿಪ್), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಪದಕಗಳು ಮತ್ತು ಬಹುಮಾನಗಳನ್ನು ನೀಡಲು ಷರತ್ತುಗಳು;

(v) ಪರೀಕ್ಷೆಗಳನ್ನು ನಡೆಸುವುದು ಹಾಗೂ ಪರೀಕ್ಷೆ ನಡೆಸುವ ಸಂಸ್ಥೆಗಳು, ಪರೀಕ್ಷಕರು, ಪರೀಕ್ಷಾ ಮೇಲ್ವಿಚಾರಕರು, ಟ್ಯಾಬುಲೇಟರ್‌ಗಳು ಮತ್ತು ಮಾಡರೇಟರ್‌ಗಳ ನೇಮಕಾತಿ ಷರತ್ತುಗಳು ಮತ್ತು ವಿಧಾನ ಹಾಗೂ ಅವರ ಕರ್ತವ್ಯಗಳು;

(vi) ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ, ಪದವಿಗಳಿಗೆ ಹಾಗೂ ಇತರ ಶೈಕ್ಷಣಿಕ ಪ್ರಶಸ್ತಿಗಳಿಗೆ ಪ್ರವೇಶಕ್ಕೆ ವಿಧಿಸತಕ್ಕ ಶುಲ್ಕ;

(vii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನಲ್ಲಿ ವಿದ್ಯಾರ್ಥಿಗಳ ನಿವಾಸಕ್ಕಾಗಿ ಷರತ್ತುಗಳು;

(viii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶಿಸ್ತು ಪಾಲನೆ;

(ix) ಈ ಅಧಿನಿಯಮದ ಅಡಿಯಲ್ಲಿನ ಪರಿನಿಯಮಗಳಲ್ಲಿ ಉಪಬಂಧ ಕಲ್ಪಿಸಬಹುದಾಂಥ ಇತರ ಎಲ್ಲಾ ವಿಷಯಗಳು.

**36. ವಿನಿಯಮಗಳ ರಚನೆ ವಿಧಾನ.–** ವಿನಿಯಮಗಳನ್ನು ಶೈಕ್ಷಣಿಕ ಪರಿಷತ್ತು ರಚಿಸತಕ್ಕದ್ದು ಹಾಗೂ ವ್ಯವಸ್ಥಾಪನಾ ಮಂಡಳಿಯು ಅನುಮೋದಿಸತಕ್ಕದ್ದು.

**37. ವಿನಿಯಮಗಳ ತಿದ್ದುಪಡಿಗೆ ಅಧಿಕಾರ.–** ವ್ಯವಸ್ಥಾಪನಾ ಮಂಡಳಿಯ ಅನುಮೋದನೆಯೊಡನೆ ಶೈಕ್ಷಣಿಕ ಪರಿಷತ್ತು ಹೊಸ ವಿನಿಯಮಗಳನ್ನು ಅಥವಾ ಹೆಚ್ಚುವರಿ ವಿನಿಯಮಗಳನ್ನು ರಚಿಸಬಹುದು ಅಥವಾ ವಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

**38. ಶುಲ್ಕ ನಿಯಂತ್ರಣ ಸಮಿತಿ.–** (1) ಸರ್ಕಾರವು ರಚಿಸಿದ ನಿವೃತ್ತ ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಮುಖ್ಯಸ್ಥರಾಗಿರುವ ಮತ್ತು ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ, ಉನ್ನತ ಶಿಕ್ಷಣ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ವೈದ್ಯಕೀಯ ಶಿಕ್ಷಣದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ಒಬ್ಬ ಮಹಿಳೆಯೂ ಸೇರಿದಂತೆ ಪ್ರಬಂಧಕ ಮಂಡಳಿಯು ನಾಮನಿರ್ದೇಶಿಸಿದ ಇಬ್ಬರು ಶಿಕ್ಷಣ ತಜ್ಞರು ಇವರುಗಳನ್ನು ಒಳಗೊಂಡ ಒಂದು ಶುಲ್ಕ ನಿಯಂತ್ರಣ ಸಮಿತಿಯು, 9ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗಾಗಿ ಮೀಸಲಿರಿಸಿದ ವಿಶ್ವವಿದ್ಯಾಲಯದ ಸ್ಥಾನಗಳ ಶುಲ್ಕವನ್ನು ನಿಯಂತ್ರಿಸತಕ್ಕದ್ದು. ಸಮಿತಿಯಲ್ಲಿ ಈ ಉದ್ದೇಶಕ್ಕಾಗಿ ಒಬ್ಬರು ಖ್ಯಾತ ಚಾರ್ಟರ್ಡ್ ಅಕೌಂಟೆಂಟ್ ರವರನ್ನು ಸಹ ಸದಸ್ಯನನ್ನಾಗಿ ಸೇರಿಸಿಕೊಳ್ಳತಕ್ಕದ್ದು.

(2) ಸಮಿತಿಯು ವಿಶ್ವವಿದ್ಯಾಲಯದ ಪ್ರವೇಶಗಳ ಮತ್ತು ಶುಲ್ಕದ ಸಂಗ್ರಹಣೆಯ ಅನುಪಾಲನೆಯನ್ನು ನೋಡಿಕೊಳ್ಳತಕ್ಕದ್ದು.

## ಅಧ್ಯಾಯ – VI

## ಸಂಕೀರ್ಣ

**39. ನೌಕರರ ಸೇವಾ ಷರತ್ತುಗಳು.–** (1) ಪರಿನಿಯಮಗಳ ಮತ್ತು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಥವಾ ನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳು, ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಒಳಪಟ್ಟು ಪ್ರತಿಯೊಬ್ಬ ನೌಕರನು ಲಿಖಿತ ಕರಾರಿನ ಅಡಿಯಲ್ಲಿ ನೇಮಕಗೊಳ್ಳತಕ್ಕದ್ದು ಮತ್ತು ಅದನ್ನು ವಿಶ್ವವಿದ್ಯಾಲಯದಲ್ಲಿ ಇಟ್ಟುಕೊಳ್ಳತಕ್ಕದ್ದು ಹಾಗೂ ಅದರ ಪ್ರತಿಯನ್ನು ಸಂಬಂಧಪಟ್ಟ ನೌಕರನಿಗೆ ನೀಡತಕ್ಕದ್ದು.

(2) ನೌಕರರ ವಿರುದ್ಧ ಶಿಸ್ತು ಕ್ರಮವನ್ನು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಕಾರ್ಯವಿಧಾನಗಳ ಮೂಲಕ ನಿಯಂತ್ರಿಸತಕ್ಕದ್ದು.

(3) ಕರಾರಿನಿಂದಾಗಿ ವಿಶ್ವವಿದ್ಯಾಲಯ ಮತ್ತು ನೌಕರನ ಮಧ್ಯದಲ್ಲಿ ಉದ್ಭವಿಸಬಹುದಾದ ಯಾವುದೇ ವಿವಾದವನ್ನು, ಲಿಖಿತ ಕರಾರಿನಲ್ಲಿ ಉಪಬಂಧಿಸಿದ ವಿಧಾನದಲ್ಲಿ ಹಾಗೂ ಪರಿನಿಯಮಗಳ ಅನುಸಾರವಾಗಿ ಪರಿಹರಿಸತಕ್ಕದ್ದು.

**40. ಮೇಲ್ಮನವಿ ಹಕ್ಕು.–** ವಿಶ್ವವಿದ್ಯಾಲಯವು ತನ್ನ ನೌಕರರ ಅಥವಾ ವಿದ್ಯಾರ್ಥಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಂಡ ಸಂದರ್ಭದಲ್ಲಿ, ಬಾಧಿತ ನೌಕರ ಅಥವಾ ವಿದ್ಯಾರ್ಥಿಗಳು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಮೇಲ್ಮನವಿ ಹಕ್ಕನ್ನು ಹೊಂದಿರತಕ್ಕದ್ದು.

**41. ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿ .–** ವಿಶ್ವವಿದ್ಯಾಲಯವು, ತನ್ನ ನೌಕರರ ಪ್ರಯೋಜನಕ್ಕಾಗಿ, ಪರಿನಿಯಮಗಳು ಮತ್ತು ಜಾರಿಯಲ್ಲಿರುವ ಕಾನೂನುಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿಯನ್ನು ರಚಿಸತಕ್ಕದ್ದು ಹಾಗೂ ಅಂಥ ವಿಮಾ ಯೋಜನೆಗಳನ್ನು ಒದಗಿಸತಕ್ಕದ್ದು.

**42. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ಸಂಸ್ಥೆಗಳ ರಚನೆಯ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ಸಂಸ್ಥೆಯ ಸದಸ್ಯನಾಗಿ ಯಾವೊಬ್ಬ ವ್ಯಕ್ತಿಯು ಸೂಕ್ತವಾಗಿ ಆಯ್ಕೆಯಾಗಿದ್ದಾನೆಯೇ ಅಥವಾ ನೇಮಕಗೊಂಡಿದ್ದಾನೆಯೇ ಅಥವಾ ಅದಕ್ಕೆ ಅರ್ಹನಾಗಿದ್ದಾನೆಯೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆ ವಿಷಯವನ್ನು ತೀರ್ಮಾನಕ್ಕಾಗಿ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**43. ಸಮಿತಿಗಳ ರಚನೆ.–** 22ನೇ ಪ್ರಕರಣದಲ್ಲಿ ನಮೂದಿಸಿದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅಧಿಕಾರವನ್ನು ಹೊಂದಿರುವ ಅಂಥ ಸದಸ್ಯರನ್ನು ಒಳಗೊಂಡ ಅಂಥ ಪ್ರಾಧಿಕಾರದ ಒಂದು ಸಮಿತಿಯನ್ನು ರಚಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**44. ಆಕಸ್ಮಿಕವಾಗಿ ಖಾಲಿಯಾದ ಸ್ಥಾನಗಳನ್ನು ತುಂಬುವುದು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಂಸ್ಥೆಯ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ಪೈಕಿ ಯಾವುದೇ ಸ್ಥಾನವು ಆಕಸ್ಮಿಕವಾಗಿ ಖಾಲಿಯಾದರೆ, ಯಾರ ಸ್ಥಾನವು ಖಾಲಿಯಾಗಿ ತುಂಬಬೇಕಾಗಿ ಬಂದಿದೆಯೋ ಆ ಸದಸ್ಯನನ್ನು ಯಾವ ರೀತಿಯಲ್ಲಿ ಆರಿಸಲಾಗಿತ್ತೋ ಅದೇ ರೀತಿಯಲ್ಲಿ ಹೊಸ ಸದಸ್ಯನನ್ನು ಆರಿಸಿ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ಖಾಲಿ ಸ್ಥಾನವನ್ನು ಭರ್ತಿ ಮಾಡಿದ ವ್ಯಕ್ತಿಯು ಆತನು ಯಾವ ಸದಸ್ಯನ ಸ್ಥಾನದಲ್ಲಿ ಭರ್ತಿಯಾಗಿರುವನೋ ಆ ಸದಸ್ಯನು ಪ್ರಾಧಿಕಾರ ಅಥವಾ ಸಂಸ್ಥೆಯ ಸದಸ್ಯನಾಗಿ ಉಳಿಯುತ್ತಿದ್ದ ಬಾಕಿ ಅವಧಿಯವರೆಗೆ ಮಾತ್ರ ಸದಸ್ಯನಾಗಿರತಕ್ಕದ್ದು.

**45. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಪರಿನಿಯಮಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ನಡೆಸಲು ಅವಕಾಶ ಇರತಕ್ಕದ್ದಲ್ಲ.

**46. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮ ಮತ್ತು ಪರಿನಿಯಮಗಳ ಯಾವುದೇ ಇತರ ಉಪಬಂಧಗಳಲ್ಲಿ ಏನೇ ಇದ್ದರೂ,–

(i) ಮೊದಲ ಕುಲಪತಿ ಮತ್ತು ಸಹಕುಲಪತಿ, ಯಾರಾದರೂ ಇದ್ದರೆ, ಅವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು;

(ii) ಮೊದಲ ಕುಲಸಚಿವರನ್ನು ಮತ್ತು ಮೊದಲ ಹಣಕಾಸು ಅಧಿಕಾರಿಯವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು; ಮತ್ತು

(iii) ಮೊದಲ ವ್ಯವಸ್ಥಾಪನ ಮಂಡಳಿ, ಮೊದಲ ಹಣಕಾಸು ಸಮಿತಿ, ಮೊದಲ ಸಂಶೋಧನೆ ಮತ್ತು ಅನ್ವೇಷಣಾ ಪರಿಷತ್ತು ಹಾಗೂ ಮೊದಲ ಶೈಕ್ಷಣಿಕ ಪರಿಷತ್ತನ್ನು ಕುಲಾಧಿಪತಿಯವರು ರಚಿಸತಕ್ಕದ್ದು.

**47. ಶಾಶ್ವತ ಶಾಸನಬದ್ಧ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಕನಿಷ್ಠ ಇಪ್ಪತ್ತೈದು ಕೋಟಿ ರೂಪಾಯಿಗಳನ್ನುಳ್ಳ ಒಂದು ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು ಇದರ ಪೈಕಿ ಕನಿಷ್ಠ ಹದಿನೈದು ಕೋಟಿ ರೂಪಾಯಿಗಳು ನಗದು ರೂಪದಲ್ಲಿ ಮತ್ತು ಇನ್ನುಳಿದದ್ದು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಇರತಕ್ಕದ್ದು ಮತ್ತು ಇದನ್ನು ತಾನಾಗಿಯೆ ಹೆಚ್ಚಿಸಬಹುದಾಗಿದ್ದು ಆದರೆ ಕಡಿಮೆ ಮಾಡತಕ್ಕದ್ದಲ್ಲ:

ಪರಂತು, ಬೆಂಗಳೂರು ಅಥವಾ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊರಗಿರುವ ವಿಶ್ವವಿದ್ಯಾಲಯದ ಸಂದರ್ಭದಲ್ಲಿ ಕನಿಷ್ಠ ಹತ್ತು ಕೋಟಿ ರೂಪಾಯಿಗಳು ನಗದು ರೂಪದಲ್ಲಿರತಕ್ಕದ್ದು ಮತ್ತು ಉಳಿದ ಐದು ಕೋಟಿ ರೂಪಾಯಿಗಳು ಬ್ಯಾಂಕ್ ಗ್ಯಾರಂಟಿಯ ರೂಪದಲ್ಲಿರತಕ್ಕದ್ದು.

(2) ವಿಶ್ವವಿದ್ಯಾಲಯವು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಹಣವನ್ನು ಹೂಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯವು ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಗೆ ವರ್ಗಾವಣೆ ಮಾಡಬಹುದು. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನೂ ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(4) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಿದ ವರಮಾನದ ಶೇಕಡಾ ಎಪ್ಪತ್ತೈದರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸಗಳ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೆಕಡಾ ಇಪ್ಪತ್ತೈದರಷ್ಟನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಯಲ್ಲಿ ಪುನ: ತೊಡಗಿಸತಕ್ಕದ್ದು.

**48. ವಿಶ್ವವಿದ್ಯಾಲಯದ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ನಿಧಿಗಳನ್ನು ಒಳಗೊಂಡ ವಿಶ್ವವಿದ್ಯಾಲಯದ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದು ಕಾಲಕಾಲಕ್ಕೆ ಸ್ವೀಕರಿಸಬಹುದಾದ ದೇಣಿಗೆಗಳು ಮತ್ತು ಇತರ ನಿಧಿಗಳನ್ನು ಒಳಗೊಂಡಿರತಕ್ಕದ್ದು.

(2) ವಿಶ್ವವಿದ್ಯಾಲಯವು, ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ವಿಧಾನದಲ್ಲಿ ವಿಶ್ವವಿದ್ಯಾಲಯದ ದತ್ತಿನಿಧಿಯನ್ನು ಹೂಡುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯ ದತ್ತಿ ನಿಧಿಯು, ವಿಶ್ವವಿದ್ಯಾಲಯವು ತನ್ನ ಸಾಮಾಜಿಕ ಧ್ಯೇಯೋದ್ದೇಶಗಳನ್ನು ನೆರವೇರಿಸುವ ಸಂದರ್ಭದಲ್ಲಿ ಮತ್ತು/ಅಥವಾ ಮುಂಗಾಣದ ಸನ್ನಿವೇಶದಲ್ಲಿ ಉದ್ಭವಿಸಬಹುದಾದ ಹಣಕಾಸು ಸವಾಲುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸ್ವಇಚ್ಛೆಯಿಂದ ನಿರ್ವಹಿಸಿಕೊಂಡು ಬರಲು ಮತ್ತು ಜವಾಬ್ದಾರಿಯಿಂದ ಹಣ ಹೂಡಿಕೆ ಮಾಡಲು ಇಚ್ಛೆಯುಳ್ಳವರಾಗಿ ಸ್ವಯಂ ವಿಧಿಸಿಕೊಂಡ ನಿಧಿಯಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಗೆ ವರ್ಗಾಯಿಸಬಹುದು. ವಿಶ್ವವಿದ್ಯಾಲಯದ ಸಮಾಪಣೆಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನು ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಬರುವ ವರಮಾನದ ಶೇಕಡಾ ಎಂಭತ್ತರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸದ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತರಷ್ಟನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಯಲ್ಲಿ ಪುನಃ ತೊಡಗಿಸತಕ್ಕದ್ದು.

**49. ಸಾಮಾನ್ಯ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಸಾಮಾನ್ಯ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯವು ವಿಧಿಸಬಹುದಾದ ಎಲ್ಲಾ ಶುಲ್ಕಗಳು;

(ii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವುದೇ ಇತರ ಮೂಲದಿಂದ ಸ್ವೀಕರಿಸಲಾದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ದೇಣಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು;

(2) ಸಾಮಾನ್ಯ ನಿಧಿಗೆ ಜಮಾ ಮಾಡುವ ನಿಧಿಗಳನ್ನು ವಿಶ್ವವಿದ್ಯಾಲಯದ ಎಲ್ಲಾ ಆವರ್ತಕ ವೆಚ್ಚಗಳನ್ನು ಭರಿಸಲು ಉಪಯೋಗಿಸಕೊಳ್ಳತಕ್ಕದ್ದು.

**50. ಅಭಿವೃದ್ಧಿ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಅಭಿವೃದ್ಧಿ ನಿಧಿಯನ್ನು ಸಹ ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿದ್ಯಾರ್ಥಿಗಳಿಂದ ವಿಧಿಸಬಹುದಾದ ಅಭಿವೃದ್ಧಿ ಶುಲ್ಕಗಳು;

(ii) ವಿಶ್ವವಿದ್ಯಾಲಯದ ಅಭಿವೃದ್ಧಿಯ ಉದ್ದೇಶಗಳಿಗಾಗಿ ಯಾವುದೇ ಇತರ ಮೂಲಗಳಿಂದ ಸ್ವೀಕರಿಸಿದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ವಂತಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು; ಮತ್ತು

(v) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಲಾದ ಎಲ್ಲಾ ವರಮಾನಗಳು.

(2) ಅಭಿವೃದ್ಧಿ ನಿಧಿಗೆ ಕಾಲಕಾಲಕ್ಕೆ ಜಮಾ ಮಾಡಿದ ನಿಧಿಯನ್ನು ವಿಶ್ವವಿದ್ಯಾಲಯದ ಅಭಿವೃದ್ಧಿಗಾಗಿ ಉಪಯೋಗಿಸಕೊಳ್ಳತಕ್ಕದ್ದು.

**51. ನಿಧಿಗಳ ನಿರ್ವಹಣೆ.–** 47, 48, 49 ಮತ್ತು 50ನೇ ಪ್ರಕರಣಗಳಡಿಯಲ್ಲಿ ಸ್ಥಾಪಿಸಲಾದ ನಿಧಿಗಳನ್ನು ಪ್ರಬಂಧಕ ಮಂಡಳಿಯ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ನಿಯಂತ್ರಿಸತಕ್ಕದ್ದು ಹಾಗೂ ನಿರ್ವಹಿಸತಕ್ಕದ್ದು.

**52. ವಾರ್ಷಿಕ ವರದಿ.–** (1) ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ಅದರ ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ಪ್ರಬಂಧಕ ಮಂಡಳಿಯು ವಾರ್ಷಿಕ ವರದಿಯನ್ನು ತನ್ನ ಸಭೆಯಲ್ಲಿ ಪರಿಗಣಿಸತಕ್ಕದ್ದು ಹಾಗೂ ಅದನ್ನು ಮಾರ್ಪಾಡುಗಳೊಡನೆ ಅಥವಾ ಮಾರ್ಪಾಡುಗಳಿಲ್ಲದೆ ಅನುಮೋದಿಸಬಹುದು.

(3) ಪ್ರಬಂಧಕ ಮಂಡಳಿಯು ಸೂಕ್ತವಾಗಿ ಅನುಮೋದಿಸಿದ ವಾರ್ಷಿಕ ವರದಿಯ ಒಂದು ಪ್ರತಿಯನ್ನು ಪ್ರತಿವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ಡಿಸೆಂಬರ್ 31ಕ್ಕೆ ಮೊದಲು ಸಂದರ್ಶಕರಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**53. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ ಪತ್ರ ಮತ್ತು ಜಮಾ ಖರ್ಚು ಪಟ್ಟಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಎಲ್ಲಾ ಮೂಲಗಳಿಂದ ಪ್ರಾಪ್ತವಾಗುವ ಅಥವಾ ಸ್ವೀಕರಿಸಲಾಗುವ ಎಲ್ಲಾ ನಿಧಿಗಳು ಹಾಗೂ ವಿತರಿಸಿದ ಅಥವಾ ಸಂದಾಯ ಮಾಡಿದ ಎಲ್ಲಾ ಮೊಬಲಗುಗಳನ್ನು ವಿಶ್ವವಿದ್ಯಾಲಯವು ನಿರ್ವಹಿಸುವ ಲೆಕ್ಕಪತ್ರದಲ್ಲಿ ನಮೂದಿಸತಕ್ಕದ್ದು.

(2) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಪ್ರತಿ ವರ್ಷವೂ ಭಾರತದ ಚಾರ್ಟೆಡ್ ಅಕೌಟೆಂಟ್‌ಗಳ ಸಂಸ್ಥೆಯ ಸದಸ್ಯರಾಗಿರುವ ಒಬ್ಬ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(3) ವಾರ್ಷಿಕ ಲೆಕ್ಕಪತ್ರಗಳು ಮತ್ತು ಜಮಾ ಖರ್ಚು ಪಟ್ಟಿಯನ್ನು ಲೆಕ್ಕಪರಿಶೋಧನಾ ವರದಿಯೊಡನೆ, ಪ್ರತಿ ವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ನವೆಂಬರ್ 30ಕ್ಕೆ ಮೊದಲು ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(4) ವಾರ್ಷಿಕ ಲೆಕ್ಕಪತ್ರಗಳು, ಜಮಾಖರ್ಚು ಪಟ್ಟಿ ಮತ್ತು ಲೆಕ್ಕಪರಿಶೋಧನಾ ವರದಿಯನ್ನು ಪ್ರಬಂಧಕ ಮಂಡಳಿಯು ತನ್ನ ಸಭೆಯಲ್ಲಿ ಪರ್ಯಾಲೋಚಿಸತಕ್ಕದ್ದು ಮತ್ತು ಪ್ರಬಂಧಕ ಮಂಡಳಿಯು ಅದನ್ನು ತನ್ನ ಅಭಿಪ್ರಾಯಗಳೊಡನೆ ಸಂದರ್ಶಕರಿಗೆ ಹಾಗೂ ಸರ್ಕಾರಕ್ಕೆ ಪ್ರತಿ ವರ್ಷದ ಡಿಸೆಂಬರ್ 31ಕ್ಕೆ ಮೊದಲು ಕಳುಹಿಸತಕ್ಕದ್ದು.

(5) ಲೆಕ್ಕಪರಿಶೋಧಕರ ವರದಿಯಲ್ಲಿ ಯಾವುದೇ ಮುಖ್ಯ ಬದಲಾವಣೆ ಇದ್ದ ಸಂದರ್ಭದಲ್ಲಿ, ಅವುಗಳನ್ನು ಸರಿಪಡಿಸಲು, ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಕ್ಕೆ ನಿರ್ದೇಶನಗಳನ್ನು ಹೊರಡಿಸಬಹುದು ಮತ್ತು ಅಂಥ ನಿರ್ದೇಶನಗಳು ವಿಶ್ವವಿದ್ಯಾಲಯದ ಮೇಲೆ ಬಂಧನಕಾರಿಯಾಗಿರತಕ್ಕದ್ದು.

**54. ವಿಶ್ವವಿದ್ಯಾಲಯ ದಾಖಲೆಗಳ ರುಜುವಾತಿನ ಮಾದರಿ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಮಿತಿಯ ಯಾವುದೇ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ ಅಥವಾ ಗೊತ್ತುವಳಿಯು ಅಥವಾ ವಿಶ್ವವಿದ್ಯಾಲಯದ ಸ್ವಾಧೀನದಲ್ಲಿರುವ ಇತರ ದಾಖಲೆಗಳು ಅಥವಾ ವಿಶ್ವವಿದ್ಯಾಲಯವು ಯುಕ್ತವಾಗಿ ನಿರ್ವಹಿಸುವ ಯಾವುದೇ ರಿಜಿಸ್ಟರ್‌ನಲ್ಲಿಯ ಯಾವುದೇ ನಮೂದುಗಳ ಪ್ರತಿಯನ್ನು, ಅದರ ಮೇಲೆ ಕುಲಸಚಿವರು ಪ್ರಮಾಣೀಕರಿಸಿದ್ದರೆ, ಅದನ್ನು ಅಂಥ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ, ಗೊತ್ತುವಳಿ ಅಥವಾ ದಾಖಲೆ ಅಥವಾ ರಿಜಿಸ್ಟರ್‌ನಲ್ಲಿ ಇರುವ ನಮೂದನ್ನು ಮೇಲ್ನೋಟದ ಸಾಕ್ಷ್ಯವೆಂಬುದಾಗಿ ಸ್ವೀಕರಿಸತಕ್ಕದ್ದು ಮತ್ತು ವಿಷಯಗಳ ಸಾಕ್ಷಿಯಾಗಿ ಅಂಗೀಕರಿಸತಕ್ಕದ್ದು ಹಾಗೂ ಮೂಲ ದಾಖಲೆಗಳನ್ನೇ ಸಲ್ಲಿಸಿದ್ದರೆ ಅದನ್ನು, ದಾಖಲಿಸಿರುವ ವಿಷಯಗಳು ಮತ್ತು ವಹಿವಾಟುಗಳ ಸಾಕ್ಷ್ಯವಾಗಿ ಅಂಗೀಕರಿಸಲಾಗುತ್ತಿತ್ತೋ, ಅದೇ ರೀತಿಯಲ್ಲಿ ಇವನ್ನೂ ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು.

**55. ನಿರ್ದೇಶನಗಳನ್ನು ನೀಡಲು ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಥವಾ ಅದರಲ್ಲಿ ಇರುವ ಯಾವುವೇ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳು ಅಥವಾ ಆದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿರ್ದೇಶನ ನೀಡುವುದು ಅವಶ್ಯವೆಂದು ಅಥವಾ ಉಚಿತವೆಂದು ಅಭಿಪ್ರಾಯಪಟ್ಟಲ್ಲಿ ಅದು ಅಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿ ಅಥವಾ ಸಂದರ್ಭಾನುಸಾರವಾಗಿ ವ್ಯವಸ್ಥಾಪನಾ ಮಂಡಳಿಯು ಅಂಥ ಪ್ರತಿಯೊಂದು ನಿರ್ದೇಶನವನ್ನು ಪಾಲಿಸತಕ್ಕದ್ದು.

**56. ದಂಡಗಳು.–** (1) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿತವಾದ ನಿಯಮಗಳು ಉಪಬಂಧಗಳನ್ನು ಅಥವಾ ಯಾವುದೇ ಪರೀಕ್ಷಾ ವಿಷಯಗಳನ್ನು ಅಥವಾ ಪದವಿಗಳನ್ನು ನೀಡುವುದಕ್ಕೆ ಅಥವಾ ಅಂಕಪಟ್ಟಿಗಳನ್ನು ನೀಡುವುದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಉಲ್ಲಂಘನೆಗಳನ್ನು ಮಾಡುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಐವತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಹತ್ತು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಆರು ತಿಂಗಳ ಅವಧಿಗಿಂತ ಕಡಿಮೆಯಲ್ಲದ ಆದರೆ ಎರಡು ವರ್ಷಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು:

ಪರಂತು, ಅಪರಾಧವನ್ನು ಎಸಗುವಲ್ಲಿ ವಿಶ್ವವಿದ್ಯಾಲಯವೂ ಸಹ ಒಳಗೊಂಡಿರುವಲ್ಲಿ, ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ಈ ಅಧಿನಿಯಮದ ಅಡಿಯಲ್ಲಿ ಮಂಜೂರು ಮಾಡಲಾದ ಅನುಮತಿ ಪತ್ರವನ್ನು ಹಿಂತೆಗೆದುಕೊಳ್ಳತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿಯ ದಂಡವನ್ನು ಇತರ ಯಾವುದೇ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಲಾದ ದಂಡಕ್ಕೆ ಬಾಧಕವಾಗದಂತೆ ವಿಧಿಸಬಹುದು.

**57. ಪ್ರವೇಶಿಸುವ ಮತ್ತು ಪರಿಶೋಧಿಸುವ ಅಧಿಕಾರ.–** ಈ ಉದ್ದೇಶಕ್ಕಾಗಿ, ರಾಜ್ಯಸರ್ಕಾರದಿಂದ ಪ್ರಾಧಿಕೃತಗೊಂಡ 'ಎ' ಸಮೂಹದ ಅಧಿಕಾರಿ ದರ್ಜೆಗಿಂತ ಕಡಿಮೆಇಲ್ಲದ ದರ್ಜೆಯ ಯಾವೊಬ್ಬ ಅಧಿಕಾರಿಯು, ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಕ್ಯಾಪಿಟೇಶನ್ ಶುಲ್ಕ ನಿಷೇಧ) ಅಧಿನಿಯಮ, 1984ರ (1984ರ ಕರ್ನಾಟಕ ಅಧಿನಿಯಮ 37) ಅಡಿಯಲ್ಲಿ ನಿರ್ದಿಷ್ಟಪಡಿಸಿರಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಉದ್ದೇಶಗಳಿಗಾಗಿ, ಆ ಅಧಿನಿಯಮದ 9ನೇ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದಂತಹವೇ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನೆರವೇರಿಸಲು ಅಧಿಕೃತನಾದ ಅಧಿಕಾರಿ ಎಂಬುದಾಗಿ ಭಾವಿಸತಕ್ಕದ್ದು.

**58. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸಲು ನಿರ್ದೇಶನವನ್ನು ನೀಡುವ ಅಧಿಕಾರ.–** (1) ವಿಶ್ವವಿದ್ಯಾಲಯವು ತನ್ನ ರಚನೆ ಅಥವಾ ನಿಗಮನವನ್ನು ನಿಯಂತ್ರಿಸುವ ಕಾನೂನಿಗೆ ಅನುಸಾರವಾಗಿ ತನ್ನ ಸಮಾಪನವನ್ನು ಉದ್ದೇಶಿಸಿದ್ದಲ್ಲಿ, ಅದು ಕನಿಷ್ಠ ಆರು ತಿಂಗಳ ಲಿಖಿತ ಪೂರ್ವ ಸೂಚನೆಯನ್ನು (ನೋಟಿಸು) ಸರ್ಕಾರಕ್ಕೆ ನೀಡತಕ್ಕದ್ದು.

(2) ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು, ಈ ಕೆಳಗಿನವುಗಳ ಬಗ್ಗೆ, ಎಂದರೆ:–

(i) ಪದವಿಯನ್ನು ನೀಡುವುದಕ್ಕಾಗಿ ಬೋಧನೆಯ ಗುಣಮಟ್ಟ;

(ii) ಶಿಕ್ಷಣದ ಗುಣಮಟ್ಟ;

(iii) ಉನ್ನತ ಶಿಕ್ಷಣದ ವ್ಯಾಪಾರೀಕರಣವನ್ನು ತಡೆಗಟ್ಟುವುದು;

(iv) ಅಧಿನಿಯಮದ ಉಪಬಂಧಗಳ ಉಲ್ಲಂಘನೆಯ ಬಗ್ಗೆ, ಯಾವುದಾದರೂ ಇದ್ದಲ್ಲಿ,

– ಇವುಗಳ ಬಗ್ಗೆ ನಿಯತಕಾಲಿಕ ಪರಿವೀಕ್ಷಣೆಯನ್ನು ನಡೆಸತಕ್ಕದ್ದು ಮತ್ತು ಸರ್ಕಾರಕ್ಕೆ ವರದಿಯನ್ನು ಕಳುಹಿಸತಕ್ಕದ್ದು.

(3) ದುರ್ವ್ಯವಹರಣೆ, ದುರಾಡಳಿತ ಮತ್ತು ಅಶಿಸ್ತು ಆಗಿದೆ ಎಂಬುದನ್ನು ಗುರುತಿಸಿದರೆ, ಸರ್ಕಾರವು, ವಿಶ್ವವಿದ್ಯಾಲಯದ ಆಡಳಿತವರ್ಗದವರಿಗೆ ಆಡಳಿತವನ್ನು ಸರಿಪಡಿಸಬೇಕೆಂದು ನಿರ್ದೇಶನಗಳನ್ನು ನೀಡತಕ್ಕದ್ದು. ನಿಯಮಿಸಬಹುದಾದ ಅಂಥ ಅವಧಿಯೊಳಗೆ ಆ ನಿರ್ದೇಶನಗಳನ್ನು ಪಾಲಿಸದಿದ್ದಲ್ಲಿ ವಿಶ್ವವಿದ್ಯಾಲಯವನ್ನು ಅಥವಾ ಅದರ ಯಾವುದೇ ವ್ಯಾಸಂಗ ಕ್ರಮವನ್ನು (ಕೋರ್ಸ್) ಸಮಾಪನಗೊಳಿಸುವ ಬಗ್ಗೆ ತೀರ್ಮಾನವನ್ನು ಕೈಗೊಳ್ಳುವ ಹಕ್ಕು ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವನ್ನು ಅಥವಾ ಅದರ ಯಾವುದೇ ವ್ಯಾಸಂಗ ಕ್ರಮವನ್ನು (ಕೋರ್ಸ್) ಸಮಾಪನಗೊಳಿಸುವ ವಿಧಾನವು, ಸರ್ಕಾರವು ಈ ಸಂಬಂಧದಲ್ಲಿ ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ವಿಶ್ವವಿದ್ಯಾಲಯವು ತನ್ನ ಕಾರಣಗಳನ್ನು ಹೇಳಿಕೊಳ್ಳಲು ಸಮಂಜಸ ಅವಕಾಶಗಳನ್ನು ನೀಡಿದ ಹೊರತು ಅಂಥ ಯಾವುದೇ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

(5) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ನೋಟಿಸನ್ನು ಸ್ವೀಕರಿಸಿದ ಮೇಲೆ, ಸರ್ಕಾರವು ಸಂಬಂಧಿಸಿದ ನಿಯಂತ್ರಣಾ ಪ್ರಾಧಿಕಾರದೊಡನೆ ಸಮಾಲೋಚಿಸಿ, ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸಲು ಅಥವಾ ವ್ಯಾಸಂಗ ಕ್ರಮವನ್ನು ಪರಿಸಮಾಪನಗೊಳಿಸಲು ಉದ್ದೇಶಿಸಿದ ದಿನಾಂಕದಿಂದ, ವಿಶ್ವವಿದ್ಯಾಲಯದಲ್ಲಿ ನಿಯತ ವ್ಯಾಸಂಗ ಕ್ರಮಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಕೊನೆಯ ತಂಡ (ಬ್ಯಾಚ್) ತನ್ನ ವ್ಯಾಸಂಗ ಕ್ರಮವನ್ನು ಮುಗಿಸುವವರೆಗೆ ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ವಿಶ್ವವಿದ್ಯಾಲಯದ ಆಡಳಿತಕ್ಕೆ ಸೂಕ್ತ ವ್ಯವಸ್ಥೆಯನ್ನು ಮಾಡತಕ್ಕದ್ದು.

**59. ಸಮಾಪನೆಯ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ವೆಚ್ಚಗಳು.–** (1) 58ನೇ ಪ್ರಕರಣದ (5)ನೇ ಉಪಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವ ಅವಧಿಯಲ್ಲಿ ಅದರ ಆಡಳಿತಾತ್ಮಕ ವೆಚ್ಚಗಳನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿ, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ನೇಮಿಸಬಹುದಾದ ಅಂಥ ವಿಧಾನದಲ್ಲಿ ಭರಿಸತಕ್ಕದ್ದು.

(2) ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವ ಅವಧಿಯಲ್ಲಿ ವಿಶ್ವವಿದ್ಯಾಲಯದ ವೆಚ್ಚವನ್ನು ಭರಿಸಲು 47, 48, 49, ಮತ್ತು 50ನೇ ಪ್ರಕರಣಗಳ ಅಡಿಯಲ್ಲಿ ಉಲ್ಲೇಖಿಸಲಾದ ನಿಧಿಯು ಸಾಕಷ್ಟು ಇಲ್ಲದಿದ್ದಲ್ಲಿ, ಅಂಥ ವೆಚ್ಚವನ್ನು ಸರ್ಕಾರವು, ವಿಶ್ವವಿದ್ಯಾಲಯದ ಸ್ವತ್ತುಗಳು ಮತ್ತು ಆಸ್ತಿಗಳನ್ನು ವಿಲೇ ಮಾಡುವ ಮೂಲಕ ಭರಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಸಮಾಪನೆಯು ದುರ್ವ್ಯವಹರಣೆ ಅಥವಾ ದುರಾಡಳಿತದ ಕಾರಣಗಳಿಗಾಗಿ ಆಗಿದ್ದರೆ, ಸರ್ಕಾರವು ಅಂಥ ದುರ್ವ್ಯವಹಾರಕ್ಕೆ ಅಥವಾ ದುರಾಡಳಿತಕ್ಕೆ ಹೊಣೆಯಾಗಿರುವ ವ್ಯಕ್ತಿಗಳನ್ನು ಗುರುತಿಸುವ ಮತ್ತು ಅವರ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ದಂಡನೆಯನ್ನು ವಿಧಿಸಲು ಸ್ವತಂತ್ರವಾಗಿರತಕ್ಕದ್ದು.

**60. ತೊಂದರೆಗಳ ನಿವಾರಣೆಗೆ ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಅಧಿಸೂಚನೆಯ ಅಥವಾ ಆದೇಶದ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಈ ಪ್ರಕರಣದ ಅಡಿಯಲ್ಲಿ ಅಂಥ ಯಾವುದೇ ಅಧಿಸೂಚನೆ ಅಥವಾ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸತಕ್ಕದ್ದು.

**61. ರಾಜ್ಯ ಸರ್ಕಾರದ ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮೊದಲು ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಉಭಯ ಸದನಗಳು ಒಪ್ಪಿದರೆ ತದನಂತರ ಅಂಥ ನಿಯಮವು ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ಧತಿಯು ಆ ನಿಯಮದ ಅಡಿಯಲ್ಲಿ ಈ ಮೊದಲು ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವನ್ನು ಉಂಟುಮಾಡತಕ್ಕದ್ದಲ್ಲ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಶ್ರೀನಿವಾಸ ನ್ಯಾಸ, ಬೆಂಗಳೂರು ಇವರು ರಾಜ್ಯದಲ್ಲಿ ಖಾಸಗಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಮುಂದೆ ಬಂದಿರುತ್ತಾರೆ. ಪ್ರಖ್ಯಾತ ಸಂಸ್ಥೆಯೊಂದರಿಂದ ಸ್ಥಾಪಿತವಾಗುವ ಖಾಸಗಿ ವಿಶ್ವವಿದ್ಯಾಲಯವು ಶಿಕ್ಷಣ ಆಕಾಂಕ್ಷಿ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣವನ್ನು ವಿಸ್ತರಿಸುವುದಕ್ಕೆ ಖಚಿತವಾಗಿ ನೆರವಾಗುತ್ತದೆ. ಇದು ಕರ್ನಾಟಕದಲ್ಲಿ ಉನ್ನತ ಶಿಕ್ಷಣ ವಲಯದಲ್ಲಿ ಪ್ರಸ್ತುತ ಶೇಕಡಾ 11.5 ಕ್ಕೆ ನಿಂತಿರುವ ಒಟ್ಟು ದಾಖಲಾತಿ ಪ್ರಮಾಣದ ಏರಿಕೆಯನ್ನೂ ಸಹ ತ್ವರಿತಗೊಳಿಸುತ್ತದೆ.

ಮೇಲ್ಕಂಡ ಅಂಶಗಳ ದೃಷ್ಟಿಯಿಂದ, ಶ್ರೀನಿವಾಸ ನ್ಯಾಸ, ಬೆಂಗಳೂರು ಇವರ ಮೂಲಕ ವೈದೇಹಿ ವಿಶ್ವವಿದ್ಯಾಲಯ ಸ್ಥಾಪನೆಗೆ ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಈ ಖಾಸಗಿ ವಿಶ್ವವಿದ್ಯಾಲಯವು ವೈದ್ಯಕೀಯ, ದಂತ ವೈದ್ಯಕೀಯ, ಔಷಧ ವಿಜ್ಞಾನ, ಫಿಸಿಯೋಥೆರಪಿ, ನರ್ಸಿಂಗ್, ಸಂಬಂಧಿತ ಶಿಕ್ಷಣ ವಲಯಗಳು, ಜೀವ ವಿಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ಅವುಗಳಿಗೆ ಆನುಷಂಗಿಕವಾದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಲ್ಲಿನ ಬೋಧನೆ, ತರಬೇತಿ, ಸಂಶೋಧನೆ ಮತ್ತು ಅಭಿವೃದ್ಧಿಯ ಮೇಲೆ ಬೆಳಕನ್ನು ಚೆಲ್ಲುತ್ತದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ

| | |
|---|---|
| **ಖಂಡ 39 :** | ವಿಶ್ವವಿದ್ಯಾಲಯದ ನೌಕರರ ನೇಮಕಾತಿಯ, ನಿಬಂಧನೆಗಳು ಮತ್ತು ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 47 :** | ಶಾಶ್ವತ ಶಾಸನಬದ್ಧ ದತ್ತಿ ನಿಧಿ ಹೂಡಿಕೆಯ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 58 :** | (3)ನೇ ಉಪಖಂಡವು, ವಿಶ್ವವಿದ್ಯಾಲಯದ, ಸರ್ಕಾರವು ನೀಡುವ ನಿರ್ದೇಶನಗಳನ್ನು ಆಡಳಿತ ವರ್ಗವು ಪಾಲಿಸುವ ಕಾಲಮಿತಿಯನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(4)ನೇ ಉಪಖಂಡವು, ವಿಶ್ವವಿದ್ಯಾಲಯದ ಸಮಾಪನಾ ರೀತಿಗೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 59 :** | ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿ, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ವೆಚ್ಚವನ್ನು ಭರಿಸುವ ರೀತಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 61 :** | ಈ ಅಧಿನಿಯಮಗಳ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ

**ಸಿ.ಟಿ. ರವಿ**
ಉನ್ನತ ಶಿಕ್ಷಣ ಸಚಿವರು

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL
## ONE HUNDRED AND TWENTY FIRST SESSION
# VYDEHI UNIVERSITY BILL, 2013
## (L.C. Bill No. 10 of 2013)

A Bill to establish and incorporate in the State of Karnataka a University of unitary nature in private sector by the Srinivasa Trust, Bangalore to promote and undertake the advancement of applied University education in Health Care Education to include Medicine, Dentistry, Pharmacy, Physiotherapy, Nursing, Allied Health sectors, Life Sciences, Biotechnology and allied sectors and for the matters connected therewith or incidental thereto.

Whereas it is expedient to establish and incorporate in the State of Karnataka a University of unitary nature in private sector by the Srinivasa Trust, Bangalore to promote and undertake the advancement of applied University Education in Health Care Education to include Medicine, Dentistry, Pharmacy, Physiotherapy, Nursing, Allied Health sectors, Life Sciences, Biotechnology and allied sectors and for the matters connected therewith or incidental thereto for the matters connected therewith or incidental thereto for the purposes hereinafter appearing;

Be it enacted by the Karnataka State Legislature in the sixty fourth year of the Republic of India as follows:-

## CHAPTER-I
## PRELIMINARY

**1. Short title, extent and commencement:-**(1) This Act may be called the Vydehi University Act, 2013.

(2) It extends to the whole of the State of Karnataka.

(3) It shall come into force on such date as the State Government may, by notification, in the official Gazette, appoint.

**2. Definitions:-**In this Act, unless the context otherwise requires,-

(a) "Academic Council" means the Academic Council of the University as specified in section 25;

(b) "Agenda Matters" means all the matters and businesses to be designated in the Statutes each of which can be either included in the Agenda or be taken up for discussion and decision at a meeting of the Board of Governors or the Board of Management or any Committees, as the case may be, only subject to the prior written approval of the Chancellor, consenting to the passing of such matters and businesses at such a meeting;

(c) "Board of Governors" means the Board of Governors of the University as specified in Section 23;

(d) "Board of Management" means the Board of Management of the University as specified in Section 24;

(e) "Chancellor", "Vice-Chancellor", "Pro Vice-Chancellor" means respectively the Chancellor, Vice Chancellor and Pro Vice Chancellor of the University;

(f) "Campus" means a campus established, maintained by the University wherever situated;

(g) "Committees" means the committees formed under this Act or by the various functionaries of the University as the case may be and includes the Nomination Committee, the Finance Committee and such other committees;

(h) "Constituent College" means a college or institution established and maintained by the University;

(i) "Finance Committee" means the Finance Committee of the University as specified in Section 27;

(j) "Government" means the Government of Karnataka:

(k) "National Accreditation bodies" means a body established by the Central Government for laying down norms and conditions for ensuring academic standards of higher education, such as University Grants Commission, All India Council of Technical Education, National Council of Teacher Education, Medical and Dental Councils of India, Pharmaceutical Council of India, National Council of Assessment and Accreditation, Indian Council of Agriculture Research, Council of Scientific and Industrial Research etc. and includes the Government;

(l) "Prescribed" means prescribed by rules made by the Government under this Act;

(m) "Principal in relation to a Constituent College" means the head of the Constituent College and includes, where there is no Principal or in the absence of a Principal appointed, the Vice-Principal or any other person for the time being appointed to act as Principal;

(n) "Registrar" means the Registrar of the University;

(o) "Regional Centre" means a centre established or maintained by the University for the purpose of co-ordinating and supervising the work of Study Centres in any region and for performing such other functions as may be conferred on such centre by the Board of Management;

(p) "Sponsoring Authority" or "Sponsoring Body" in relation to this Act means Sponsoring Trust;

(q) "Sponsoring Trust" means Srinivasa Trust, Bangalore**,** registered under the Indian Trust Act, 1982.

(r) "State" means State of Karnataka;

(s) "Statutes" and "Regulations" means respectively the Statutes and Regulations of the University made under this Act;

(t) "Study Centre" means a centre established and maintained by the University for the purpose of advising, counseling or for rendering any other assistance required by the students in the context of the education;

(u) "Teacher" means and includes a Professor, Associate Professor, Assistant Professor, Reader or Lecturer or such other person as may be appointed for imparting instruction or conducting or to guide research in the University or in a Constituent College and includes the Principal of Constituent College in conformity with the norms prescribed by the University Grants Commission;

(v) "University Grants Commission" means the Commission established under section 4 of the University Grants Commission Act, 1956 (Central Act 3 of 1956);

(w) "University" means Vydehi University established and incorporated under this Act;

(x) "Visitor" means the visitor of the University as specified in section 13.

## CHAPTER-II

## THE UNIVERSITY AND SPONSORING BODY

**3. Proposal for the establishment of the University:-** (1) Sponsoring Trust shall have the right to establish the University of unitary nature subject to and in accordance with the provisions of this Act.

(2) The proposal to establish a University shall be made to the State Government by Sponsoring Trust.

(3) The proposal shall contain the following particulars, namely:-

(i) the objects of the University along with the details of Sponsoring Trust;

(ii) the extent and status of the University and the availability of land;

(iii) the nature and type of programmes of study and research to be undertaken by the University during a period of five academic years immediately following the commencement date;

(iv) the nature of faculties, courses of study and research proposed to be started;

(v) the campus development such as buildings, equipment and structural amenities;

(vi) the phased outlays of capital expenditure for a period of five academic years immediately following the commencement date;

(vii) the item-wise recurring expenditure, sources of finance and estimated expenditure for each student;

(viii) the scheme for mobilizing resources and the cost of capital thereto and the manner of repayments to each source;

(ix) the scheme of generation of funds internally through the recovery of fee from students, revenues anticipated from consultancy and other activities relating to the objects of the University and other anticipated incomes;

(x) the details of expenditure on unit cost, the extent of concessions or rebates in fee, freeship and scholarship for students belonging to economically weaker sections and the fee structure indicating varying rate of fee, if any, that would be levied on students who are either non resident Indians or persons of Indian origin or sponsored by non resident Indians or persons of Indian origin and students of nationalities other than India;

(xi) the years of experience and expertise in the concerned discipline at the command of Sponsoring Trust; as well as the financial resources;

(xii) the system for selection of students to the courses of study at the University; and

(xiii) status of fulfillment of such other conditions as may be required by the State Government to be fulfilled before the establishment of the University.

(4) A Screening Committee shall be constituted by the State Government consisting of three members who are Ex-officio members of Karnataka State Higher Education Council to examine the proposal received from the Sponsoring Trust which has recommendations to the State Government for establishment of the University.

**4. Establishment of the University**:- (1) Where the State Government, after considering the recommendations of the screening Committee and holding such inquiry as it may deem necessary, is satisfied that-

(i) the Trust has ability to run an University with sufficient infrastructure.

(ii) owns a land to the extent specified below in accordance with its location namely:-

(a) twenty five acres of land if it is within limits of Bruhat Bangalore Mahanagara Palike;

(b) forty acres of land if it is out side the limits of Bruhat Bangalore Mahanagara Palike but within Bangalore Metropolitan Region Development Authority area;

(c) not less than sixty acres of land in the places other than the places specified in Clauses (a) and (b).

The land specified above shall consist of a single block and it shall be in the name of the concerned Trust / foundation / institution / university itself. Based on the furnished particulars required in sub-section (3) of section 3, the Government may direct the Trust to establish the permanent Statutory Endowment Fund as specified in section 47.

(2) After the establishment of the Permanent Statutory Endowment Fund, the State Government may, by notification, in the official Gazette, accord sanction for establishment of the University of unitary nature in the State by the name of "Vydehi University".

(3) The headquarters of the University shall be at Bangalore. The University shall have Campuses or Regional Centres, Study Centres anywhere in Karnataka and subject to the prior permission of the State Government and as per UGC norms.

(4) The First Chancellor, the First Vice-Chancellor, First members of the Board of Governors, First members of the Board of Management and the Academic Council and all persons who may hereafter become such officers or members, so long as they continue to hold such office or membership, shall constitute a body corporate and can sue and be sued in the name of the-University.

(5) On sanction for the establishment of the University under sub-section (2), the land and other movable and immovable properties acquired, created, arranged or built by Sponsoring Trust for the purpose of the University shall vest in the University.

(6) In all suits and other legal proceedings by or against the University, the pleading shall be signed and verified by, and all processes in such suits and proceedings shall be issued to and be served on the Registrar.

(7) The land, building and other properties of the University shall not be used for any purpose other than incidental to the objects of the University.

**5. Grants and Financial Assistance:-** The University shall be self-financing and shall neither make a demand nor shall be entitled to any maintenance grant-in-aid or any other financial assistance from the State or any other body or corporation owned or controlled by the State:

Provided that the State may, provide financial support through grants or otherwise,-

(a) for research, development and other activities for which other State Government organizations are provided financial assistance; or

(b) for any specific research or programmes receiving support from the State Government and

(c) provided to or the benefit of the similar Universities in the State whether subject to a change in State Policy or otherwise;

Provided further that the university may receive any financial support from any other source.

**6. Power to establish constituent College, additional campuses, Regional Centres or Study Centres:-** The University may have Constituent Colleges, Regional Centres, additional campuses and Study Centres at such places in the

State as it deems fit after the completion of five years after its establishment with prior approval of the State Government subject to norms of UGC and other National Accreditation bodies.

**7. Objects of the University:-**The University shall employ a broad range of strategies to achieve its vision and objectives,-

(i) to support, promote and undertake advancement of and innovation in University education leading up to and including post graduate, doctoral and post doctoral courses in the Health Care Education to include Medicine, Dentistry, Pharmacy, Physiotherapy, Nursing, Allied Health sectors, Life Sciences, Biotechnology and allied sectors and make provisions for research, advancement and dissemination of knowledge including consultancy in these fields;

(ii) to collaborate with any other universities, research institutions, non-profit organizations, industry associations, professional associations or other organizations, to conceptualize, design, develop and offer specific educational and research programmes, training programmes and exchange programmes for students, faculty members and others;

(iii) to undertake collaborative research and advocacy with any organizations with prior approval of the State Government;

(iv) to disseminate and advance knowledge by providing instructional and research facilities in such branches of learning as it may deem fit and in particular, to make special provisions for integrated courses in Health Care Education to include Medicine, Dentistry, Pharmacy, Physiotherapy, Nursing, Allied Health sectors, Life Sciences, Biotechnology and allied sectors and to make appropriate measures for promoting interdisciplinary studies and research;

(v) to provide innovative system of University level education, flexible and open with regard to methods and places of learning, combination of courses eligibility for enrolment, age of entry, conduct of examinations and operation of programmes with a view to promoting access and equity in higher learning besides encouraging excellence in new fields of knowledge and placing special emphasis on both academic as well as application oriented learning;

(vi) to develop resource centres to contribute to quality education with prior approval of State Government;

(vii) to establish Campuses, Regional centres, study centres and constituent Colleges at various locations in Karnataka and to contribute and develop an understanding of educational change in professional, general education and social and human development with prior approval of Government;

(viii) to institute degrees, diplomas, certificates and other academic distinctions like award of credits on the basis of successful completion of academic work evaluated through multiple modern methods of assessment;

(ix) to disseminate knowledge and develop a public debate on issues of education and allied development fields through seminars, conferences, executive education programmes, community development programmes, publications and training programmes and events;

(x) to undertake programmes for development and training of faculty and researchers of the University in partnership with any other university of quality with prior approval of the State Government;

(xi) to undertake necessary or expedient action to pursue and promote the objectives of the University;

(xii) to pursue any objectives as may be approved by the Government for the enhancement of education and other development sectors in India.

**8. Powers of the University:-**The University shall have the following powers, namely:-

(i) to establish and maintain such Campuses, Regional Centres and Study Centres in Karnataka as may be determined by the University from time to time in the manner laid down by the Statutes with prior approval of the Government and as per UGC norms;

(ii) to carry out all such other activities as may be necessary or feasible in furtherance of the object of the University;

(iii) to confer degrees or other academic distinctions in the manner and under conditions laid down in the Statutes;

(ಆರ್) "ರಾಜ್ಯ" ಎಂದರೆ, ಕರ್ನಾಟಕ ರಾಜ್ಯ;

(ಎಸ್) "ಪರಿನಿಯಮಗಳು" ಮತ್ತು "ವಿನಿಯಮಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಅನುಕ್ರಮವಾಗಿ ವಿಶ್ವವಿದ್ಯಾಲಯದ ಪರಿನಿಯಮಗಳು ಮತ್ತು ವಿನಿಯಮಗಳು;

(ಟಿ) "ಅಧ್ಯಯನ ಕೇಂದ್ರ" ಎಂದರೆ, ವಿದ್ಯಾರ್ಥಿಗಳಿಗೆ ಅಗತ್ಯವಾದ ಬುದ್ಧಿವಾದ, ಸಲಹೆಗಳನ್ನು ನೀಡುವ ಅಥವಾ ಇತರ ಯಾವುದೇ ನೆರವನ್ನು ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ ಮತ್ತು ನಿರ್ವಹಿಸಿಕೊಂಡುಬಂದ ಒಂದು ಕೇಂದ್ರ;

(ಯು) "ಅಧ್ಯಾಪಕರು" ಎಂದರೆ, ಒಬ್ಬ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಅಥವಾ ವಿಶ್ವವಿದ್ಯಾಲಯದಲ್ಲಿ ಅಥವಾ ಒಂದು ಘಟಕ ಕಾಲೇಜಿನಲ್ಲಿ ಬೋಧಿಸುವುದಕ್ಕೆ ಅಥವಾ ಸಂಶೋಧನೆ ನಡೆಸುವುದಕ್ಕೆ ಅಥವಾ ಸಂಶೋಧನೆಗೆ ಮಾರ್ಗದರ್ಶನ ನೀಡುವುದಕ್ಕೆ ನೇಮಕವಾದ ಅಂಥ ಇತರ ವ್ಯಕ್ತಿ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗವು ನಿಯಮಿಸಿದ ಗುಣಮಟ್ಟಗಳಿಗೆ ಅನುಸಾರವಾಗಿ ಇರುವ ಘಟಕ ಕಾಲೇಜಿನ ಪ್ರಾಂಶುಪಾಲರು ಇದರಲ್ಲಿ ಒಳಗೊಳ್ಳುತ್ತಾರೆ;

(ವಿ) "ವಿಶ್ವವಿದ್ಯಾಲಯ ಅನುದಾನಗಳ ಆಯೋಗ" ಎಂದರೆ, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 3) 4ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಆಯೋಗ;

(ಡಬ್ಲ್ಯೂ) "ವಿಶ್ವವಿದ್ಯಾಲಯ" ಎಂದರೆ, ಈ ಅಧಿನಿಯಮದಡಿಯಲ್ಲಿ ಸ್ಥಾಪಿಸಿ ನಿಗಮಿತಗೊಳಿಸಲಾದ ಗಾರ್ಡನ್ ಸಿಟಿ ವಿಶ್ವವಿದ್ಯಾಲಯ;

(ಎಕ್ಸ್) "ಸಂದರ್ಶಕರು" ಎಂದರೆ, 13ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಸಂದರ್ಶಕರು.

## ಅಧ್ಯಾಯ– II

## ವಿಶ್ವವಿದ್ಯಾಲಯ ಮತ್ತು ಪ್ರಾಯೋಜಕ ಸಂಸ್ಥೆ

**3. ವಿಶ್ವವಿದ್ಯಾಲಯದ ಸ್ಥಾಪನೆಗೆ ಪ್ರಸ್ತಾವ.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಅದಕ್ಕನುಸಾರವಾಗಿ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಹಕ್ಕನ್ನು ಪ್ರಾಯೋಜಕ ನ್ಯಾಸವು ಹೊಂದಿರತಕ್ಕದ್ದು.

(2) ಪ್ರಾಯೋಜಕ ನ್ಯಾಸವು ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು.

(3) ಪ್ರಸ್ತಾವವು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಪ್ರಾಯೋಜಕ ನ್ಯಾಸದ ವಿವರಗಳೊಂದಿಗೆ ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು;

(ii) ವಿಶ್ವವಿದ್ಯಾಲಯದ ವ್ಯಾಪ್ತಿ ಮತ್ತು ಸ್ಥಾನಮಾನ ಹಾಗೂ ಭೂಮಿಯ ಲಭ್ಯತೆ;

(iii) ಪ್ರಾರಂಭದ ದಿನಾಂಕದಿಂದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ವಿಶ್ವವಿದ್ಯಾಲಯವು ಕೈಗೊಳ್ಳಬೇಕೆಂದಿರುವ ಅಧ್ಯಯನ ಮತ್ತು ಸಂಶೋಧನಾ ಕಾರ್ಯಕ್ರಮಗಳ ಸ್ವರೂಪ ಮತ್ತು ಬಗೆಗಳು;

(iv) ಪ್ರಾರಂಭಿಸಬೇಕೆಂದು ಪ್ರಸ್ತಾಪಿಸಿರುವ ವ್ಯಾಸಂಗ ವಿಭಾಗಗಳು (ಫ್ಯಾಕಲ್ಟಿಗಳು), ಅಧ್ಯಯನ ಕ್ರಮಗಳು ಮತ್ತು ಸಂಶೋಧನೆಗಳ ಸ್ವರೂಪ;

(v) ಕಟ್ಟಡಗಳು, ಸಲಕರಣೆಗಳು ಮತ್ತು ರಚನಾ ಸೌಕರ್ಯಗಳನ್ನು ಒದಗಿಸುವಂಥ ಕ್ಯಾಂಪಸ್ ಅಭಿವೃದ್ಧಿ;

(vi) ಪ್ರಾರಂಭದ ದಿನಾಂಕದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಗಾಗಿ ಬಂಡವಾಳ ವೆಚ್ಚದ ಹಂತಗಳು;

(vii) ಬಾಬುವಾರು ಆವರ್ತಕ ವೆಚ್ಚ, ಆರ್ಥಿಕ ಮೂಲಗಳು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಗೆ ತಗಲುವ ಅಂದಾಜು ವೆಚ್ಚ;

(viii) ಸಂಪನ್ಮೂಲ ಸಂಗ್ರಹಣೆಗಾಗಿ ಯೋಜನೆ ಮತ್ತು ಅದಕ್ಕೆ ಬಂಡವಾಳದಿಂದ ತಗಲುವ ವೆಚ್ಚ ಹಾಗೂ ಪ್ರತಿಯೊಂದು ಮೂಲಕ್ಕೂ ಮರು ಸಂದಾಯ ಮಾಡುವ ರೀತಿ;

(ix) ವಿದ್ಯಾರ್ಥಿಗಳಿಂದ ಶುಲ್ಕ ವಸೂಲು ಮಾಡಿ ಆಂತರಿಕವಾಗಿ ನಿಧಿ ಸಂಗ್ರಹಿಸುವ ಯೋಜನೆ, ಸಲಹಾ ಸೇವೆ ಮತ್ತು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳಿಗೆ ಸಂಬಂಧಿಸಿದ ಇತರ ಚಟುವಟಿಕೆಗಳಿಂದ ನಿರೀಕ್ಷಿತ ವರಮಾನಗಳು ಮತ್ತು ಇತರ ನಿರೀಕ್ಷಿತ ವರಮಾನಗಳು;

(x) ಘಟಕವೊಂದಕ್ಕೆ ತಗಲುವ ವೆಚ್ಚದ ವಿವರಗಳು, ಆರ್ಥಿಕವಾಗಿ ದುರ್ಬಲವಾದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಶುಲ್ಕ, ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿ ವೇತನದಲ್ಲಿ ನೀಡುವ ರಿಯಾಯಿತಿ ಅಥವಾ ವಿನಾಯತಿಯ ಪರಿಮಿತಿಯ ವಿವರಗಳನ್ನು ಮತ್ತು ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳಿಗೆ ಅಥವಾ ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳು ಪ್ರಾಯೋಜಿಸಿದ ವಿದ್ಯಾರ್ಥಿಗಳಿಗೆ ಮತ್ತು ಭಾರತವನ್ನುಳಿದು ಇತರ ರಾಷ್ಟ್ರಗಳ ವಿದ್ಯಾರ್ಥಿಗಳಿಗೆ ವಿಧಿಸತಕ್ಕ ಶುಲ್ಕದ ದರಗಳು ಬೇರೆ ಬೇರೆ ಇದ್ದಲ್ಲಿ ಅವುಗಳನ್ನು ಸೂಚಿಸುವ ಶುಲ್ಕ ರಚನೆಯ ವಿವರಗಳು;

(xi) ಸಂಬಂಧಪಟ್ಟ ವಿದ್ಯಾ ವಿಭಾಗದಲ್ಲಿ ಎಷ್ಟು ವರ್ಷಗಳ ಅನುಭವ ಮತ್ತು ಪರಿಣಿತಿಯನ್ನು ಪ್ರಾಯೋಜಕ ನ್ಯಾಸವು ದೊರಕಿಸಿಕೊಡಲಿದೆ ಹಾಗೂ ಅದರ ಹಣಕಾಸಿನ ಸಂಪನ್ಮೂಲಗಳು;

(xii) ವಿಶ್ವವಿದ್ಯಾಲಯದಲ್ಲಿರುವ ಅಧ್ಯಯನ ಕ್ರಮಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕಾಗಿ ಇರುವ ವ್ಯವಸ್ಥೆ;

(xiii) ವಿಶ್ವವಿದ್ಯಾಲಯವು ಸ್ಥಾಪನೆಯಾಗುವುದಕ್ಕೆ ಮೊದಲು ನೆರವೇರಿಸಬೇಕೆಂದು ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದ ಅಂಥ ಇತರ ಷರತ್ತುಗಳ ನೆರವೇರಿಕೆಯ ಹಂತ.

(4) ಪ್ರಾಯೋಜಕ ನ್ಯಾಸದಿಂದ ಸ್ವೀಕರಿಸಿದ ಪ್ರಸ್ತಾವಗಳನ್ನು ಪರೀಕ್ಷಿಸಲು ರಾಜ್ಯ ಸರ್ಕಾರವು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ಪದನಿಮಿತ್ತ ಸದಸ್ಯರಾದ ಮೂರು ಸದಸ್ಯರುಗಳನ್ನು ಒಳಗೊಂಡ ಒಂದು ಶೋಧನಾ ಸಮಿತಿಯನ್ನು ರಚಿಸತಕ್ಕದ್ದು ಮತ್ತು ಅದು ವಿಶ್ವವಿದ್ಯಾಲಯದ ಸ್ಥಾಪನೆಗೆ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡತಕ್ಕದ್ದು.

**4. ವಿಶ್ವವಿದ್ಯಾಲಯದ ಸ್ಥಾಪನೆ.–** (1) ರಾಜ್ಯ ಸರ್ಕಾರವು ಶೋಧನಾ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಪರಿಶೀಲಿಸಿದ ತರುವಾಯ ಮತ್ತು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ,–

(i) ನ್ಯಾಸವು ಸಾಕಷ್ಟು ಮೂಲ ಸೌಕರ್ಯದೊಂದಿಗೆ ವಿಶ್ವವಿದ್ಯಾಲಯವೊಂದನ್ನು ನಡೆಸಲು ಸಮರ್ಥವಾಗಿದೆ ಎಂದು ಅದು ಮನಗಂಡರೆ;

(ii) ಪ್ರದೇಶಕ್ಕನುಸಾರವಾಗಿ ಕೆಳಗೆ ನಿರ್ದಿಷ್ಟ ಪಡಿಸಿದ ವ್ಯಾಪ್ತಿಗೆ ಭೂಮಿಯ ಒಡೆತನವನ್ನು ಹೊಂದಿರತಕ್ಕದ್ದು, ಎಂದರೆ:–

(ಎ) ಭೂಮಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿತಿಯೊಳಗಿದ್ದರೆ ಇಪ್ಪತ್ತೈದು ಎಕರೆಗಳು;

(ಬಿ) ಭೂಮಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿತಿಯಿಂದ ಹೊರಗೆ ಇದ್ದು, ಆದರೆ ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಪ್ರದೇಶದ ಒಳಗೆ ಇದ್ದರೆ ನಲವತ್ತು ಎಕರೆಗಳು;

(ಸಿ) ಭೂಮಿಯು (ಎ) ಮತ್ತು (ಬಿ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳನ್ನು ಹೊರತುಪಡಿಸಿದ್ದರೆ ಅರವತ್ತು ಎಕರೆಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.

ಮೇಲೆ ನಿರ್ದಿಷ್ಟಪಡಿಸಿದ ಭೂಮಿಯು ಏಕ ಘಟಕ (ಸಿಂಗಲ್ ಬ್ಲಾಕ್) ದಲ್ಲಿರತಕ್ಕದ್ದು ಮತ್ತು ಇದು ಸಂಬಂಧಪಟ್ಟ ನ್ಯಾಸ/ಪ್ರತಿಷ್ಠಾನ/ಸಂಸ್ಥೆ/ವಿಶ್ವವಿದ್ಯಾಲಯದ ಹೆಸರಿನಲ್ಲಿರತಕ್ಕದ್ದು. 3ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ ಅಗತ್ಯಪಡಿಸಲಾದಂತೆ ಒದಗಿಸಿದ ವಿವರಗಳ ಆಧಾರದ ಮೇಲೆ ಸರ್ಕಾರವು 47ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸಬೇಕೆಂದು ನ್ಯಾಸಕ್ಕೆ ನಿರ್ದೇಶನ ನೀಡಬಹುದು.

(2) ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಸ್ಥಾಪನೆಯ ತರುವಾಯ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, **"ಗಾರ್ಡನ್ ಸಿಟಿ ವಿಶ್ವವಿದ್ಯಾಲಯ"** ಎಂಬ ಹೆಸರಿನ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ರಾಜ್ಯದಲ್ಲಿ ಸ್ಥಾಪಿಸುವುದಕ್ಕೆ ಮಂಜೂರಾತಿಯನ್ನು ನೀಡಬಹುದು.

(3) ವಿಶ್ವವಿದ್ಯಾಲಯದ ಕೇಂದ್ರ ಕಾರ್ಯಸ್ಥಾನವು ಬೆಂಗಳೂರಿನಲ್ಲಿ ಇರತಕ್ಕದ್ದು. ವಿಶ್ವವಿದ್ಯಾಲಯವು ತನ್ನ ಕ್ಯಾಂಪಸ್ಸುಗಳನ್ನು ಅಥವಾ ಪ್ರಾದೇಶಿಕ ಕೇಂದ್ರಗಳನ್ನು, ಅಧ್ಯಯನ ಕೇಂದ್ರಗಳನ್ನು ಕರ್ನಾಟಕದ ಯಾವುದೇ ಭಾಗದಲ್ಲಿ ಹೊಂದಿರತಕ್ಕದ್ದು ಮತ್ತು ಆ ಬಗ್ಗೆ ರಾಜ್ಯ ಸರ್ಕಾರದ ಪೂರ್ವಾನುಮತಿಯನ್ನು ಪಡೆದುಕೊಳ್ಳುವುದಕ್ಕೊಳಪಟ್ಟು ಹಾಗೂ ವಿಶ್ವವಿದ್ಯಾಲಯದ ಅನುದಾನ ಆಯೋಗದ ಗುಣಮಟ್ಟಗಳಿಗನುಸಾರವಾಗಿ ಹೊಂದಿರತಕ್ಕದ್ದು.

(4) ಮೊದಲ ಕುಲಾಧಿಪತಿಯವರು, ಮೊದಲ ಕುಲಪತಿಯವರು, ಪ್ರಬಂಧಕ ಮಂಡಳಿಯ ಮೊದಲ ಸದಸ್ಯರುಗಳು, ವ್ಯವಸ್ಥಾಪನಾ ಮಂಡಳಿಯ ಹಾಗೂ ಶೈಕ್ಷಣಿಕ ಪರಿಷತ್ತಿನ ಮೊದಲ ಸದಸ್ಯರುಗಳು ಮತ್ತು ಇನ್ನು ಮುಂದೆ, ಅಂಥ ಅಧಿಕಾರಿಗಳು ಅಥವಾ ಸದಸ್ಯರುಗಳಾಗಬಹುದಾದಂಥ ಎಲ್ಲಾ ವ್ಯಕ್ತಿಗಳು, ಅಂಥ ಪದ ಅಥವಾ ಸದಸ್ಯತ್ವವನ್ನು ಹೊಂದಿರುವುದು ಮುಂದುವರೆಯುವವರೆಗೆ, ಒಂದು ನಿಗಮಿತ ನಿಕಾಯವನ್ನು ರಚಿಸತಕ್ಕದ್ದು. ಮತ್ತು ಅದು ವಿಶ್ವವಿದ್ಯಾಲಯದ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೊಳಗಾಗಬಹುದು.

(5) (2)ನೇ ಉಪಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಗೆ ಮಂಜೂರಾತಿಯಾದ ಮೇಲೆ, ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ, ನ್ಯಾಸವು ಆರ್ಜಿಸಿದ, ಸೃಜಿಸಿದ, ಏರ್ಪಾಟು ಮಾಡಿಕೊಂಡ ಅಥವಾ ಕಟ್ಟಲ್ಪಟ್ಟ ಭೂಮಿ ಮತ್ತು ಇತರ ಸ್ಥಿರ ಮತ್ತು ಚರ ಸ್ವತ್ತು, ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರತಕ್ಕದ್ದು.

(6) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(7) ವಿಶ್ವವಿದ್ಯಾಲಯದಲ್ಲಿನ ಭೂಮಿ, ಕಟ್ಟಡ ಮತ್ತು ಇತರ ಸ್ವತ್ತುಗಳನ್ನು ವಿಶ್ವವಿದ್ಯಾಲಯದ ಉದ್ದೇಶಗಳಿಗೆ ಆನುಷಂಗಿಕವಾಗಿರುವುದನ್ನು ಹೊರತುಪಡಿಸಿ ಇತರ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

**5. ಅನುದಾನಗಳು ಮತ್ತು ಹಣಕಾಸು ನೆರವು.–** ವಿಶ್ವವಿದ್ಯಾಲಯವು ಸ್ವಂತ ಧನಮೂಲ ಉಳ್ಳದ್ದಾಗಿರತಕ್ಕದ್ದು ಮತ್ತು ರಾಜ್ಯದಿಂದ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಇತರ ಸಂಸ್ಥೆ ಅಥವಾ ನಿಗಮದಿಂದ ಯಾವುದೇ ನಿರ್ವಹಣಾ ಸಹಾಯ ಅನುದಾನ ಅಥವಾ ಯಾವುದೇ ಹಣಕಾಸು ನೆರವನ್ನು ಹಕ್ಕಿನಿಂದ ಕೇಳತಕ್ಕದ್ದಲ್ಲ ಅಥವಾ ಅದನ್ನು ಪಡೆಯಲು ಹಕ್ಕನ್ನು ಹೊಂದಿರತಕ್ಕದ್ದಲ್ಲ:

ಪರಂತು, ರಾಜ್ಯವು,–

(ಎ) ಇತರ ರಾಜ್ಯ ಸರ್ಕಾರದ ಸಂಘಟನೆಗಳಿಗೆ ಹಣಕಾಸು ನೆರವನ್ನು ಒದಗಿಸುತ್ತಿರುವಂಥದ್ದೇ ಸಂಶೋಧನೆ, ಅಭಿವೃದ್ಧಿ ಮತ್ತಿತರ ಚಟುವಟಿಕೆಗಳಿಗಾಗಿ; ಅಥವಾ

(ಬಿ) ರಾಜ್ಯ ಸರ್ಕಾರದಿಂದ ನೆರವನ್ನು ಪಡೆಯುವ ಯಾವುದೇ ನಿರ್ದಿಷ್ಟ ಸಂಶೋಧನೆ ಅಥವಾ ಕಾರ್ಯಕ್ರಮಗಳಿಗಾಗಿ; ಮತ್ತು

(ಸಿ) ರಾಜ್ಯ ಕಾರ್ಯನೀತಿಯ ಬದಲಾವಣೆಗೆ ಒಳಪಟ್ಟು ಅಥವಾ ಅನ್ಯಥಾ ಇದೇ ಬಗೆಯ ವಿಶ್ವವಿದ್ಯಾಲಯಗಳಿಗೆ ಅವಕಾಶವನ್ನು ಕಲ್ಪಿಸುವುದಕ್ಕೆ ಅಥವಾ ಅವುಗಳ ಪ್ರಯೋಜನಕ್ಕಾಗಿ,

– ಅನುದಾನದ ಮೂಲಕ ಅಥವಾ ಅನ್ಯಥಾ ಹಣಕಾಸು ಬೆಂಬಲವನ್ನು ಒದಗಿಸಬಹುದು:

ಮತ್ತು ಪರಂತು, ವಿಶ್ವವಿದ್ಯಾಲಯವು, ಯಾವುದೇ ಇತರ ಮೂಲದಿಂದ ಯಾವುದೇ ಆರ್ಥಿಕ ನೆರವನ್ನು ಸ್ವೀಕರಿಸಬಹುದು.

**6. ಘಟಕ ಕಾಲೇಜು, ಹೆಚ್ಚುವರಿ ಕ್ಯಾಂಪಸ್‌ಗಳು, ಪ್ರಾದೇಶಿಕ ಕೇಂದ್ರಗಳು ಅಥವಾ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದಕ್ಕೆ ಅಧಿಕಾರ.–** ವಿಶ್ವವಿದ್ಯಾಲಯವು ಸ್ಥಾಪನೆಯಾದ ತರುವಾಯ ಐದು ವರ್ಷಗಳನ್ನು ಪೂರ್ಣಗೊಳಿಸಿದ ನಂತರ, ವಿಶ್ವವಿದ್ಯಾಲಯ ಅನುದಾನ ಆಯೋಗದ ಮತ್ತು ಇತರ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಗುಣಮಟ್ಟಗಳಿಗೆ ಒಳಪಟ್ಟು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ವಿಶ್ವವಿದ್ಯಾಲಯವು, ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂಥ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಹೆಚ್ಚುವರಿ ಕ್ಯಾಂಪಸ್‌ಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಹೊಂದಿರಬಹುದು.

**7. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ವಿಶ್ವವಿದ್ಯಾಲಯವು, ತನ್ನ ಭವಿಷ್ಯದ್‌ದೃಷ್ಟಿ ಮತ್ತು ಧ್ಯೇಯೋದ್ದೇಶಗಳನ್ನು ಸಾಧಿಸಲು ಈ ಮುಂದಿನಂತೆ ವಿವಿಧ ಬಗೆಯ ಕಾರ್ಯತಂತ್ರಗಳನ್ನು ಕೈಗೊಳ್ಳಬಹುದು:–

(i) ತಾಂತ್ರಿಕತೆ, ಆರೋಗ್ಯ, ವ್ಯವಸ್ಥಾಪನೆ, ಜೀವ ವಿಜ್ಞಾನಗಳು ಮತ್ತು ಸಂಬಂಧಿತ ವಲಯಗಳಲ್ಲಿ ಸ್ನಾತಕೋತ್ತರ, ಡಾಕ್ಟೊರಲ್ ಮತ್ತು ಪೋಸ್ಟ್ ಡಾಕ್ಟೊರಲ್ ಕೋರ್ಸುಗಳಿಗೆ ಮುಂದುವರಿಯುವ ಮತ್ತು ಅವುಗಳನ್ನು ಒಳಗೊಳ್ಳುವ ವಿಶ್ವವಿದ್ಯಾಲಯ ಶಿಕ್ಷಣದಲ್ಲಿ ಪ್ರಗತಿಯನ್ನು ಮತ್ತು ಅನ್ವೇಷಣೆಯನ್ನು ಬೆಂಬಲಿಸುವುದು, ಪ್ರೋತ್ಸಾಹಿಸುವುದು ಮತ್ತು ಕೈಗೊಳ್ಳುವುದು ಹಾಗೂ ಈ ಕ್ಷೇತ್ರಗಳಲ್ಲಿ ಸಲಹೆಯನ್ನೂ ಒಳಗೊಂಡಂತೆ ಸಂಶೋಧನೆ, ಪ್ರಗತಿ ಮತ್ತು ಪ್ರಸಾರಕ್ಕೆ ಅವಕಾಶವನ್ನು ಕಲ್ಪಿಸುವುದು;

(ii) ವಿದ್ಯಾರ್ಥಿಗಳಿಗೆ, ಬೋಧಕ ವೃಂದದ (ಫ್ಯಾಕಲ್ಟಿ) ಸದಸ್ಯರಿಗೆ ಮತ್ತು ಇತರರಿಗೆ ನಿರ್ದಿಷ್ಟ ಶೈಕ್ಷಣಿಕ ಮತ್ತು ಸಂಶೋಧನಾ ಕಾರ್ಯಕ್ರಮಗಳನ್ನು, ತರಬೇತಿ ಕಾರ್ಯಕ್ರಮಗಳನ್ನು ಮತ್ತು ವಿನಿಮಯ ಕಾರ್ಯಕ್ರಮಗಳನ್ನು ಪರಿಕಲ್ಪಿಸಲು, ವಿನ್ಯಾಸಗೊಳಿಸಲು, ಅಭಿವೃದ್ಧಿಪಡಿಸಲು ಇತರ ಯಾವುದೇ ವಿಶ್ವವಿದ್ಯಾಲಯಗಳು, ಸಂಶೋಧನಾ ಸಂಸ್ಥೆಗಳು, ಲಾಭರಹಿತ ಸಂಸ್ಥೆಗಳು, ಕೈಗಾರಿಕಾ ಸಂಸ್ಥೆಗಳು, ವೃತ್ತಿಪರ ಸಂಸ್ಥೆಗಳು ಅಥವಾ ಇತರ ಸಂಸ್ಥೆಗಳೊಂದಿಗೆ ಸಹಯೋಗವನ್ನು ಹೊಂದುವುದು;

(iii) ರಾಜ್ಯ ಸರ್ಕಾರದ ಪೂರ್ವ ಅನುಮೋದನೆಯೊಡನೆ, ಯಾವುದೇ ಸಂಸ್ಥೆಯೊಂದಿಗೆ ಸಹಯೋಗ ಹೊಂದಿ ಸಂಶೋಧನೆಯನ್ನು ಮತ್ತು ಹೊಸತನವನ್ನು ಬೆಳಕಿಗೆ ತರುವುದು;

(iv) ತಾನು ಸೂಕ್ತವೆಂದು ಭಾವಿಸಬಹುದಾದಂತೆ, ಕಲಿಕೆಯ ಅಂಥ ಶಾಖೆಗಳಲ್ಲಿ ಬೋಧನಾ ಮತ್ತು ಸಂಶೋಧನಾ ಸೌಲಭ್ಯಗಳನ್ನು ಒದಗಿಸಿ ಜ್ಞಾನ ಪ್ರಸಾರ ಮಾಡುವುದು ಮತ್ತು ಅದನ್ನು ಮುಂದುವರೆಸುವುದು ಹಾಗೂ ವಿಶೇಷವಾಗಿ ತಾಂತ್ರಿಕ, ಆರೋಗ್ಯ, ವ್ಯವಸ್ಥಾಪನೆ, ಜೀವ ವಿಜ್ಞಾನಗಳು ಮತ್ತು ಸಂಬಂಧಿತ ಕೋರ್ಸುಗಳಲ್ಲಿ ಸಮಗ್ರ ವ್ಯಾಸಂಗ ವಿಷಯಗಳಿಗಾಗಿ ವಿಶೇಷ ಉಪಬಂಧ ಕಲ್ಪಿಸುವುದು ಮತ್ತು ವಿಶ್ವವಿದ್ಯಾಲಯದಲ್ಲಿ ಅಂತರವಿದ್ಯಾವಿಷಯಗಳ ಅಧ್ಯಯನ ಮತ್ತು ಸಂಶೋಧನೆಗೆ ಉತ್ತೇಜನ ನೀಡುವುದಕ್ಕಾಗಿ ಸೂಕ್ತ ಕ್ರಮ ಕೈಗೊಳ್ಳುವುದು;

(v) ಇಂಜಿನಿಯರಿಂಗ್ ಪರಿಹಾರಗಳನ್ನೊದಗಿಸುವ ಭವಿಷ್ಯದ ಸಮರ್ಥವಾದ ತಾಂತ್ರಿಕತೆಗಳ ಸಂಶೋಧನೆಯೊಂದಿಗೆ ಮತ್ತು ತಾಂತ್ರಿಕ ವ್ಯವಹಾರ ಮತ್ತು ಬೆಳೆಯುತ್ತಿರುವ ತಾಂತ್ರಿಕತೆಗೆ ಬೆಂಬಲದೊಂದಿಗೆ ಉನ್ನತ ತಾಂತ್ರಿಕ ಮತ್ತು ವೃತ್ತಿಪರ ಕೈಗಾರಿಕೆಗಳ ಬೇಡಿಕೆಗಳನ್ನು ಈಡೇರಿಸುವುದು;

(vi) ಉನ್ನತ ಕಲಿಕೆಗೆ ಪ್ರವೇಶಾವಕಾಶಗಳನ್ನು ಮತ್ತು ನ್ಯಾಯಸಮ್ಮತತೆಗೆ ಉತ್ತೇಜನ ನೀಡುವ ದೃಷ್ಟಿಯಿಂದ, ಕಲಿಕೆಯ ವಿಧಾನಗಳು ಮತ್ತು ಸ್ಥಳಗಳು, ವ್ಯಾಸಂಗ ಕ್ರಮಗಳ ಸಂಯೋಜನೆ, ದಾಖಲಾತಿಗಾಗಿ ಅರ್ಹತೆ, ಪ್ರವೇಶದ ವಯಸ್ಸು, ಪರೀಕ್ಷೆಯನ್ನು ನಡೆಸುವುದು ಮತ್ತು ಕಾರ್ಯಕ್ರಮಗಳ ನಿರ್ವಹಣೆಗೆ ಸಂಬಂಧಿಸಿದಂತೆ ನಮ್ಯವಾದ (ಫ್ಲೆಕ್ಸಿಬಲ್) ಮತ್ತು ಮುಕ್ತವಾದ, ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣದ ಅನ್ವೇಷಣಾ ಪದ್ಧತಿಯನ್ನು ಅಳವಡಿಸುವುದು ಹಾಗೂ ಜ್ಞಾನದ ಹೊಸ ಕ್ಷೇತ್ರಗಳಲ್ಲಿ ಉತ್ಕೃಷ್ಟತೆಗೆ ಪ್ರೋತ್ಸಾಹಿಸುವುದು, ಶೈಕ್ಷಣಿಕ ಮತ್ತು ಸಮನ್ವಯ ಕಲಿಕೆ, ಇವೆರಡಕ್ಕೂ ಸಮನಾದ ಪ್ರಾಮುಖ್ಯತೆಯನ್ನು ನೀಡುವುದು;

(vii) ಗುಣಮಟ್ಟದ ಶಿಕ್ಷಣಕ್ಕಾಗಿ ಕೊಡುಗೆಯನ್ನು ನೀಡಲು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಸಂಪನ್ಮೂಲ ಕೇಂದ್ರಗಳನ್ನು ಅಭಿವೃದ್ಧಿಪಡಿಸುವುದು;

(viii) ಕರ್ನಾಟಕದಲ್ಲಿ ವಿವಿಧ ಸ್ಥಳಗಳಲ್ಲಿ ಕ್ಯಾಂಪಸುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳು ಮತ್ತು ಸಂಯೋಜಿತ ಕಾಲೇಜುಗಳನ್ನು ಸ್ಥಾಪಿಸುವುದು ಮತ್ತು ತಾಂತ್ರಿಕತೆ, ವೃತ್ತಿಪರತೆ, ಸಾಮಾನ್ಯ ಶಿಕ್ಷಣ ಮತ್ತು ಸಮಾಜ ಮತ್ತು ಮಾನವ ಅಭಿವೃದ್ಧಿಯಲ್ಲಿ ಶೈಕ್ಷಣಿಕ ಬದಲಾವಣೆಗೆ ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಕೊಡುಗೆ ನೀಡುವುದು ಮತ್ತು ಜ್ಞಾನವನ್ನು ಅಭಿವೃದ್ಧಿಪಡಿಸುವುದು;

(ix) ಮೌಲ್ಯಮಾಪನದ ವಿವಿಧ ಆಧುನಿಕ ವಿಧಾನಗಳ ಮೂಲಕ ಮಾಡಿದ ಮೌಲ್ಯಮಾಪನಕ್ಕೆ ಅನುಸಾರವಾಗಿ ಶಿಕ್ಷಣವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದುದರ ಆಧಾರದ ಮೇಲೆ ನೀಡಲು ಪದವಿಗಳನ್ನು, ಡಿಪ್ಲೋಮೋಗಳನ್ನು, ಪ್ರಮಾಣಪತ್ರಗಳನ್ನು ಮತ್ತು ಯಶೋಪತ್ರ ಪ್ರದಾನದಂಥ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು;

(x) ಉಪನ್ಯಾಸ ಮಾಲಿಕೆಗಳು, ವಿಚಾರ ಸಂಕಿರಣಗಳು, ಸಮ್ಮೇಳನಗಳು, ಕಾರ್ಯಾಂಗ ಶಿಕ್ಷಣ ಕಾರ್ಯಕ್ರಮಗಳು, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳು, ಪ್ರಕಟಣೆಗಳು ಮತ್ತು ತರಬೇತಿ ಕಾರ್ಯಕ್ರಮಗಳು ಮತ್ತು ಕಾರ್ಯಸೂಚಿಗಳ ಮೂಲಕ ಜ್ಞಾನ ಪ್ರಸಾರ ಮಾಡುವುದು ಮತ್ತು ಶಿಕ್ಷಣ ಮತ್ತು ತತ್ಸಂಬಂಧಿತ ಅಭಿವೃದ್ಧಿ ಕ್ಷೇತ್ರಗಳ ವಿಷಯಗಳ ಬಗ್ಗೆ ಸಾರ್ವಜನಿಕ ಚರ್ಚೆಯನ್ನು ಏರ್ಪಡಿಸುವುದು;

(xi) ರಾಜ್ಯ ಸರ್ಕಾರದ ಪೂರ್ವ ಅನುಮತಿಯೊಂದಿಗೆ, ಉತ್ತಮ ಗುಣಮಟ್ಟದ ಇತರ ಯಾವುವೇ ವಿಶ್ವವಿದ್ಯಾಲಯಗಳೊಂದಿಗೆ ಸಹಭಾಗಿಗಳಾಗಿ ವಿಶ್ವವಿದ್ಯಾಲಯದ ಬೋಧಕ ವೃಂದ (ಫ್ಯಾಕಲ್ಟಿ) ಮತ್ತು ಸಂಶೋಧಕರ ಅಭಿವೃದ್ಧಿ ಮತ್ತು ತರಬೇತಿಗಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದು;

(xii) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಮುಂದುವರಿಸುವುದಕ್ಕಾಗಿ ಮತ್ತು ಉತ್ತೇಜಿಸುವುದಕ್ಕಾಗಿ ಅವಶ್ಯಕವಾದ ಮತ್ತು ಯುಕ್ತವಾದ ಕ್ರಮಗಳನ್ನು ಕೈಗೊಳ್ಳುವುದು;

(xiii) ಭಾರತದಲ್ಲಿ ಶಿಕ್ಷಣ ಮತ್ತು ಇತರ ಅಭಿವೃದ್ಧಿ ವಲಯಗಳನ್ನು ವಿಸ್ತರಿಸುವುದಕ್ಕಾಗಿ ಸರ್ಕಾರವು ಅನುಮೋದಿಸಬಹುದಾದಂತೆ ಯಾವುವೇ ಧ್ಯೇಯೋದ್ದೇಶಗಳನ್ನು ಮುಂದುವರಿಸುವುದು.

**8. ವಿಶ್ವವಿದ್ಯಾಲಯದ ಅಧಿಕಾರಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಮತ್ತು ವಿಶ್ವವಿದ್ಯಾಲಯದ ಅನುದಾನ ಆಯೋಗದ ಗುಣಮಟ್ಟಗಳಿಗೆ ಅನುಸಾರವಾಗಿ ಪರಿನಿಯಮಗಳಲ್ಲಿ ಹೇಳಲಾದ ರೀತಿಯಲ್ಲಿ ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂತೆ ಕ್ಯಾಂಪಸ್ಸುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಕರ್ನಾಟಕದಲ್ಲಿ ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(ii) ವಿಶ್ವವಿದ್ಯಾಲಯದ ಉದ್ದೇಶವನ್ನು ಕಾರ್ಯರೂಪಕ್ಕೆ ತರುವಲ್ಲಿ ಅಗತ್ಯವಾಗಬಹುದಾದ ಅಥವಾ ಕಾರ್ಯಸಾಧ್ಯವಾಗಬಹುದಾದ ಎಲ್ಲಾ ಅಂಥ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು;

(iii) ಪರಿನಿಯಮಗಳಲ್ಲಿ ಹೇಳಲಾದ ರೀತಿಯಲ್ಲಿ ಮತ್ತು ಷರತ್ತುಗಳಿಗೊಳಪಟ್ಟು ಪದವಿಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನಮಾಡುವುದು;

(iv) ಪರಿನಿಯಮಗಳನ್ವಯ ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿ ವೇತನಗಳು ಮತ್ತು ಬಹುಮಾನಗಳು, ಅವಾರ್ಡುಗಳು, ಪಾರಿತೋಷಕಗಳು ಇತ್ಯಾದಿಗಳನ್ನು ಸ್ಥಾಪಿಸುವುದು ಮತ್ತು ನೀಡುವುದು;

(v) ಪರಿನಿಯಮಗಳಲ್ಲಿ ಅಥವಾ ಸಂದರ್ಭಾನುಸಾರವಾಗಿ ನಿಯಮಗಳಲ್ಲಿ ನಿಗದಿಪಡಿಸಬಹುದಾದ ಅಂಥ ಶುಲ್ಕಗಳು, ಬಿಲ್ಲುಗಳು, ಖರೀದಿ ಪಟ್ಟಿಗಳನ್ನು ಕೇಳಿಪಡೆದುಕೊಳ್ಳುವುದು ಮತ್ತು ಸ್ವೀಕರಿಸುವುದು ಹಾಗೂ ಚಾರ್ಜುಗಳನ್ನು ವಸೂಲು ಮಾಡುವುದು;

(vi) ವಿದ್ಯಾರ್ಥಿಗಳಿಗೆ ಮತ್ತು ಸಿಬ್ಬಂದಿಗಳಿಗೆ ಪಠ್ಯೇತರ ಚಟುವಟಿಕೆಗಳಿಗೆ ಅವಕಾಶಗಳನ್ನು ಕಲ್ಪಿಸುವುದು;

(vii) ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ, ಕ್ಯಾಂಪಸುಗಳ, ಪ್ರಾದೇಶಿಕ ಕೇಂದ್ರಗಳ, ಅಧ್ಯಯನ ಕೇಂದ್ರಗಳ ಫ್ಯಾಕಲ್ಟಿ, ಅಧಿಕಾರಿಗಳು ಮತ್ತು ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳುವುದು;

(viii) ವಿಶ್ವವಿದ್ಯಾಲಯದ ಅಥವಾ ಒಂದು ಘಟಕ ಕಾಲೇಜಿನ ಅಥವಾ ಕ್ಯಾಂಪಸ್ಸಿನ, ಪ್ರಾದೇಶಿಕ ಕೇಂದ್ರದ, ಅಧ್ಯಯನ ಕೇಂದ್ರದ ಉದ್ದೇಶಕ್ಕಾಗಿ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದಿರುವ, ಯಾವುದೇ ರೀತಿಯ ಸ್ವಯಂ ದೇಣಿಗೆಗಳು ಮತ್ತು ಕೊಡುಗೆಗಳನ್ನು ಸ್ವೀಕರಿಸುವುದು ಮತ್ತು ನ್ಯಾಸ ಮತ್ತು ದತ್ತಿ ಸ್ವತ್ತುಗಳೂ ಸೇರಿದಂತೆ, ಯಾವುದೇ ಚರ ಅಥವಾ ಸ್ಥಿರ ಸ್ವತ್ತನ್ನು ಆರ್ಜಿಸುವುದು, ಹೊಂದಿರುವುದು, ನಿರ್ವಹಿಸುವುದು, ನಡೆಸುವುದು ಮತ್ತು ಹಸ್ತಾಂತರ ಮಾಡುವುದು;

(ix) ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು ಹಾಗೂ ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ ವಿದ್ಯಾರ್ಥಿಗಳಿಗೆ ವಸತಿ ಸ್ಥಳಗಳಾಗಿ ಮಾನ್ಯತೆ ನೀಡುವುದು;

(x) ವಸತಿಯ ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಣ ಮಾಡುವುದು ಹಾಗೂ ವಿದ್ಯಾರ್ಥಿಗಳು ಮತ್ತು ಎಲ್ಲಾ ಪ್ರವರ್ಗಗಳ ಸಿಬ್ಬಂದಿಗಳಲ್ಲಿ ಶಿಸ್ತು ನಿಯಂತ್ರಣ ಮಾಡುವುದು ಮತ್ತು ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳಿಗೆ ನಡತೆ ಸಂಹಿತೆಯನ್ನು ರೂಪಿಸುವುದೂ ಒಳಗೊಂಡಂತೆ, ಅಂಥ ಸಿಬ್ಬಂದಿಗಳ ಸೇವಾಷರತ್ತುಗಳನ್ನು ನಿರೂಪಿಸುವುದು;

(xi) ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಬೆಂಬಲ ಸಿಬ್ಬಂದಿಯ ಹುದ್ದೆಗಳನ್ನು ಮತ್ತು ಇತರ ಅವಶ್ಯ ಹುದ್ದೆಗಳನ್ನು ಸೃಜಿಸುವುದು;

(xii) ವಿಶ್ವವಿದ್ಯಾಲಯವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರ ವಿಶ್ವವಿದ್ಯಾಲಯಗಳೊಡನೆ ಸಹಕರಿಸುವುದು ಮತ್ತು ಸಹಯೋಗ ಹೊಂದುವುದು;

(xiii) ಶಿಕ್ಷಕರಿಗೆ, ಪಾಠಗಳನ್ನು ರಚಿಸುವವರಿಗೆ, ಮೌಲ್ಯಮಾಪಕರಿಗೆ ಮತ್ತಿತರ ಶೈಕ್ಷಣಿಕ ಸಿಬ್ಬಂದಿಗೆ ಪುನರ್ಮನನ ವ್ಯಾಸಂಗಕ್ರಮಗಳು, ಅಭಿಮುಖ ವ್ಯಾಸಂಗ ಕ್ರಮಗಳು, ಕಾರ್ಯಾಗಾರಗಳು, ವಿಚಾರಗೋಷ್ಠಿಗಳು ಮತ್ತಿತರ ಕಾರ್ಯಕ್ರಮಗಳನ್ನು ಏರ್ಪಡಿಸುವುದು ಮತ್ತು ನಡೆಸುವುದು;

(xiv) ಶೈಕ್ಷಣಿಕ ಪರಿಷತ್ತಿನ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯಕ್ಕೆ ಅಥವಾ ಘಟಕ ಕಾಲೇಜಿಗೆ, ಪ್ರಾದೇಶಿಕ ಕೇಂದ್ರಗಳಿಗೆ, ಅಧ್ಯಯನ ಕೇಂದ್ರಗಳಿಗೆ ಪ್ರವೇಶವನ್ನು ನೀಡುವುದಕ್ಕೆ ಮತ್ತು ಈ ಅಧಿನಿಯಮದಲ್ಲಿ ಕಲ್ಪಿಸಿದ ವ್ಯಾಪ್ತಿಗಿಂತ ಕಡಿಮೆಯಿಲ್ಲದಂತೆ ಕರ್ನಾಟಕದ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ನೀಡುವುದಕ್ಕೆ ಮಾನಕ ಗುಣಮಟ್ಟಗಳನ್ನು ನಿರ್ಧರಿಸುವುದು;

(xv) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅವಶ್ಯವಾಗಬಹುದಾದಂಥ ಇತರ ಎಲ್ಲಾ ಕ್ರಮಗಳನ್ನು ಅಥವಾ ಕಾರ್ಯಗಳನ್ನು, ಅವು ಮೇಲೆ ಹೇಳಿದ ಅಧಿಕಾರಗಳಿಗೆ ಪ್ರಾಸಂಗಿಕವಾಗಿರಲಿ ಅಥವಾ ಇಲ್ಲದಿರಲಿ, ಕೈಗೊಳ್ಳುವುದು;

(xvi) ಪರೀಕ್ಷೆಗಳ ಆಧಾರದ ಮೇಲೆ ಅಥವಾ ಸರ್ಕಾರದಿಂದ ಅನುಮೋದಿತವಾದ ಇತರ ಯಾವುದೇ ಮೌಲ್ಯಮಾಪನ ವಿಧಾನದ ಆಧಾರದ ಮೇಲೆ ನೀಡಲು ಪದವಿಗಳು, ಡಿಪ್ಲೋಮಾಗಳು, ಪ್ರಮಾಣಪತ್ರಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಸ್ಥಾಪಿಸುವುದು;

(xvii) ಫಿಲಂಗಳು, ಕ್ಯಾಸೆಟ್‌ಗಳು, ಧ್ವನಿಸುರುಳಿಗಳು, ದೃಶ್ಯಸುರುಳಿಗಳು, ಸಿ.ಡಿ., ವಿ.ಸಿ.ಡಿ. ಮತ್ತು ಇತರ ತಂತ್ರಾಂಶಗಳೂ ಹಾಗೂ ಇತರ ಸಂಬಂಧಿತ ವಿದ್ಯುನ್ಮಾನ ಮತ್ತು ಮುದ್ರಣ ಮಾಧ್ಯಮ ಸೇರಿದಂತೆ ಬೋಧಕ ಸಾಮಗ್ರಿಗಳನ್ನು ತಯಾರಿಸುವುದಕ್ಕಾಗಿ ಅವಕಾಶ ಕಲ್ಪಿಸುವುದು;

(xviii) ಪ್ರಬಂಧಕ ಮಂಡಳಿಯ ಅನುಮೋದನೆಯೊಡನೆ ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ಸ್ವತ್ತುಗಳನ್ನು ಭದ್ರತೆಯಾಗಿ ನೀಡಿ ಅಥವಾ ನೀಡದೆ ಹಣವನ್ನು ಪಡೆಯುವುದು, ಸಂಗ್ರಹಿಸುವುದು, ಚಂದಾದಾರರಾಗುವುದು ಮತ್ತು ಸಾಲ ಪಡೆಯುವುದು;

(xix) ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗಳ ಆಡಳಿತವನ್ನು ವಶಪಡಿಸಿಕೊಳ್ಳುವುದು, ವಹಿಸಿಕೊಳ್ಳುವುದು ಮತ್ತು ನಡೆಸುವುದು;

(xx) ಕಾರ್ಯಕಾರಿ ಪರಿಷತ್ತು ಪೂರ್ವಾನುಮೋದನೆಯೊಂದಿಗೆ ಸ್ವತ್ತುಗಳನ್ನು ಆರ್ಜಿಸುವುದು;

(xxi) ವಿಶ್ವವಿದ್ಯಾಲಯದ ಮೇಲಿನ ಉದ್ದೇಶಗಳಿಗೆ ಸಂಬಂಧಿಸಿದ ಅಥವಾ ಪ್ರಾಸಂಗಿಕವಾದ ಯಾವುದೇ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು.

**9. ವಿಶ್ವವಿದ್ಯಾಲಯವು ಎಲ್ಲಾ ವರ್ಗ, ಜಾತಿ, ಮತ, ಲಿಂಗ ಅಥವಾ ರಾಷ್ಟ್ರ ಭೇದವಿಲ್ಲದೆ ಎಲ್ಲರಿಗೂ ಮುಕ್ತವಾಗಿರತಕ್ಕದ್ದು.–** ವಿಶ್ವವಿದ್ಯಾಲಯದ ಪ್ರವೇಶಗಳು ವರ್ಗ, ಜಾತಿ, ಮತ, ಲಿಂಗ ಅಥವಾ ರಾಷ್ಟ್ರ ಭೇದವಿಲ್ಲದೆ ಎಲ್ಲಾ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು. ಎಲ್ಲಾ ಪ್ರವೇಶಗಳನ್ನು ಅರ್ಹತಾ ಪರೀಕ್ಷೆಗಳಲ್ಲಿನ ಅರ್ಹತೆಯ ಆಧಾರದ ಮೇಲೆ ಮಾಡತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಎಲ್ಲಾ ಕೋರ್ಸುಗಳ ಪ್ರವೇಶದಲ್ಲಿ ಶೇಕಡಾ ನಲವತ್ತರಷ್ಟನ್ನು ಕರ್ನಾಟಕ ರಾಜ್ಯದ ವಿದ್ಯಾರ್ಥಿಗಳಿಗೆ ಮೀಸಲಿಡತಕ್ಕದ್ದು ಮತ್ತು ಪ್ರವೇಶಗಳನ್ನು ರಾಜ್ಯ ಸರ್ಕಾರವು ಅಥವಾ ಅದರ ಏಜೆನ್ಸಿಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಮಾಡತಕ್ಕದ್ದು ಮತ್ತು ಸೀಟುಗಳನ್ನು ಅರ್ಹತೆ ಮತ್ತು ರಾಜ್ಯ ಸರ್ಕಾರವು ಕಾಲಕಾಲಕ್ಕೆ ರೂಪಿಸುವ ಮೀಸಲಾತಿ ನೀತಿಗೆ ಅನುಸಾರವಾಗಿ ಹಂಚಿಕೆ ಮಾಡತಕ್ಕದ್ದು:

ಮತ್ತು ಪರಂತು, ಯಾವುದೇ ಕೋರ್ಸಿನಲ್ಲಿ ಹತ್ತಕ್ಕಿಂತ ಕಡಿಮೆ ಸೀಟುಗಳು ಇರುವಲ್ಲಿ, ಸ್ನಾತಕೋತ್ತರದಂಥ ಕೋರ್ಸುಗಳನ್ನು ಒಟ್ಟಿಗೆ ಒಂದುಗೂಡಿಸುವ ಮೂಲಕ ಮೀಸಲಿಡತಕ್ಕದ್ದು ಮತ್ತು ಯಾವುದೇ ಕೋರ್ಸಿನಲ್ಲಿ ಮೂರು ಸೀಟುಗಳಿಗಿಂತ ಕಡಿಮೆ ಇರುವಲ್ಲಿ, ಅವುಗಳನ್ನು ಸರದಿ ಸುತ್ತಿನಲ್ಲಿ ಮೀಸಲಿಡತಕ್ಕದ್ದು.

**10. ರಾಷ್ಟ್ರೀಯ ಅಧಿಮಾನ್ಯತೆ.–** ವಿಶ್ವವಿದ್ಯಾಲಯವು ಪ್ರಾರಂಭವಾದ ತರುವಾಯ ಆದಷ್ಟು ಬೇಗನೆ ಸಂಬಂಧಪಟ್ಟ ಶಾಸನಾತ್ಮಕ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳಿಂದ ಅಧಿಮಾನ್ಯತೆಯನ್ನು ಕೋರತಕ್ಕದ್ದು ಮತ್ತು ಖಾಸಗಿ ವಿಶ್ವವಿದ್ಯಾಲಯಗಳು ನಡೆಸುವ ಎಲ್ಲಾ ವ್ಯಾಸಂಗ ಕ್ರಮಗಳು ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ವಿನಿಯಮಗಳಿಗೆ ಅನುಸಾರವಾಗಿ ಇರತಕ್ಕದ್ದು.

**11. ಪ್ರಾಯೋಜಕ ಸಂಸ್ಥೆಯ ಅಧಿಕಾರಗಳು.–** ಪ್ರಾಯೋಜಕ ಸಂಸ್ಥೆಯು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದಂತೆ ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಇವುಗಳಲ್ಲಿ ಪ್ರತಿಯೊಂದನ್ನು ಪ್ರಾಯೋಜಕ ಸಂಸ್ಥೆಯು ತನ್ನ ವಿವೇಚನಾನುಸಾರ ಚಲಾಯಿಸಬಹುದು, ಎಂದರೆ:–

(i) ಕುಲಾಧಿಪತಿಯವರನ್ನು ನೇಮಿಸುವುದು ಅಥವಾ ಪುನರ್‌ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(ii) ವಿಶ್ವವಿದ್ಯಾಲಯದ ಪ್ರಥಮ ಪ್ರಬಂಧಕ ಮಂಡಳಿಯನ್ನು ರಚಿಸುವುದು;

(iii) ಪ್ರಬಂಧಕ ಮಂಡಳಿಯ ಅಧ್ಯಕ್ಷರನ್ನು ನಾಮನಿರ್ದೇಶಿಸುವುದು;

(iv) ಪ್ರಬಂಧಕ ಮಂಡಳಿಯ ಸದಸ್ಯರಾಗಿ ಮೂರು ವ್ಯಕ್ತಿಗಳನ್ನು ನಾಮನಿರ್ದೇಶಿಸುವುದು;

(v) ವ್ಯವಸ್ಥಾಪನಾ ಮಂಡಳಿಯ ಸದಸ್ಯರಾಗಿ ಇಬ್ಬರು ವ್ಯಕ್ತಿಗಳನ್ನು ನಾಮ ನಿರ್ದೇಶಿಸುವುದು;

(vi) ವಿಶ್ವವಿದ್ಯಾಲಯದ ದತ್ತಿ ನಿಧಿಗೆ ದೇಣಿಗೆ ನೀಡಲು ನಿಧಿ ಮೂಲಗಳನ್ನು ನಿರ್ಧರಿಸುವುದು;

(vii) ವಿಶ್ವವಿದ್ಯಾಲಯದ ಹಣದ ವಿನಿಯೋಗ ಮತ್ತು ವೆಚ್ಚ ಮಾಡುವುದನ್ನು ನಿರ್ಧರಿಸುವುದು;

(viii) ಈ ಅಧಿನಿಯಮದಲ್ಲಿ ಉಪಬಂಧಿಸಿರುವ ವಿಧಾನದಲ್ಲಿ ಪ್ರಬಂಧಕ ಮಂಡಳಿಯ ಸಭೆಯಲ್ಲಿಯ ವಿವಾದಗಳನ್ನು ಬಗೆಹರಿಸುವುದು;

## ಅಧ್ಯಾಯ –III

## ವಿಶ್ವವಿದ್ಯಾಲಯದ ಅಧಿಕಾರಿಗಳು

**12. ವಿಶ್ವವಿದ್ಯಾಲಯದ ಅಧಿಕಾರಿಗಳು.–** ಈ ಮುಂದಿನವರು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು, ಎಂದರೆ:–

(i) ಸಂದರ್ಶಕರು;

(ii) ಸಹ–ಸಂದರ್ಶಕರು;

(iii) ಕುಲಾಧಿಪತಿಗಳು;

(iv) ಕುಲಪತಿಗಳು;

(v) ಸಹಕುಲಪತಿಗಳು;

(vi) ಕುಲಸಚಿವರು;

(vii) ಹಣಕಾಸು ಅಧಿಕಾರಿ; ಮತ್ತು

(viii) ಪರಿನಿಯಮಗಳ ಮೂಲಕ ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಘೋಷಿಸಬಹುದಾದಂಥ ಇತರ ಅಧಿಕಾರಿಗಳು.

**13. ಸಂದರ್ಶಕರು.–** (1) ಕರ್ನಾಟಕದ ಘನತೆವೆತ್ತ ರಾಜ್ಯಪಾಲರು ವಿಶ್ವವಿದ್ಯಾಲಯದ ಸಂದರ್ಶಕರಾಗಿರತಕ್ಕದ್ದು ಮತ್ತು ಸಂದರ್ಶಕರು ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಯ ಸುಧಾರಣೆಗಾಗಿ ಸಲಹೆಗಳನ್ನು ನೀಡಬಹುದು.

(2) ಸಂದರ್ಶಕರು, ಪದವಿಗಳನ್ನು ಮತ್ತು ಡಿಪ್ಲೋಮೊಗಳನ್ನು ಪ್ರದಾನ ಮಾಡಲು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಸಂದರ್ಶಕರು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ, ಯಾವುದೇ ಪತ್ರ ಅಥವಾ ಮಾಹಿತಿಯನ್ನು ತರಿಸಿಕೊಳ್ಳುವುದು.

(ii) ಸಂದರ್ಶಕರು, ಅವರು ಸ್ವೀಕರಿಸಿದ ಮಾಹಿತಿಯ ಆಧಾರದ ಮೇಲೆ ವಿಶ್ವವಿದ್ಯಾಲಯಗಳ ಯಾವುದೇ ಪ್ರಾಧಿಕಾರವು ಮಾಡಿದ ಯಾವುದೇ ಆದೇಶ, ನಡೆಸಿದ ವ್ಯವಹರಣೆಗಳು ಅಥವಾ ಕೈಗೊಂಡ ತೀರ್ಮಾನಗಳು, ಈ ಅಧಿನಿಯಮ, ವಿನಿಯಮಗಳು ಅಥವಾ ನಿಯಮಗಳಿಗೆ ಪೂರಕವಾಗಿಲ್ಲವೆಂದು ಮನಗಂಡರೆ ಅವರು ವಿಶ್ವವಿದ್ಯಾಲಯದ ಹಿತಾಸಕ್ತಿಯಿಂದ ತಾವು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಹೊರಡಿಸಬಹುದು ಮತ್ತು ಹಾಗೆ ಹೊರಡಿಸಿದ ನಿರ್ದೇಶನಗಳನ್ನು ಸಂಬಂಧಪಟ್ಟವರೆಲ್ಲರೂ ಪಾಲಿಸತಕ್ಕದ್ದು.

**14. ಸಹ–ಸಂದರ್ಶಕರು.–** (1) ಕರ್ನಾಟಕ ಸರ್ಕಾರದ ಮಾನ್ಯ ಉನ್ನತ ಶಿಕ್ಷಣ ಸಚಿವರು ವಿಶ್ವವಿದ್ಯಾಲಯದ ಸಹ–ಸಂದರ್ಶಕರಾಗಿರತಕ್ಕದ್ದು.

(2) ಸಂದರ್ಶಕರ ಅನುಪಸ್ಥಿತಿಯಲ್ಲಿ ಸಹ–ಸಂದರ್ಶಕರು ಪದವಿಗಳನ್ನು ಮತ್ತು ಡಿಪ್ಲೋಮೊಗಳನ್ನು ಪ್ರದಾನ ಮಾಡಲು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**15. ಕುಲಾಧಿಪತಿಗಳು.–** (1) ಕುಲಾಧಿಪತಿಯವರನ್ನು ಪ್ರಾಯೋಜಕ ಸಂಸ್ಥೆಯು ನೇಮಿಸತಕ್ಕದ್ದು.

(2) ಪ್ರಾಯೋಜಕ ಸಂಸ್ಥೆಯ ಪ್ರಸ್ತುತ ಅಧ್ಯಕ್ಷರು ಮೊದಲನೇ ಕುಲಾಧಿಪತಿಗಳಾಗಿರತಕ್ಕದ್ದು, ಅವರು ತಮ್ಮ ಜೀವನಪರ್ಯಂತ ಅಥವಾ ಅವರು ತಮ್ಮ ಪದವನ್ನು ಬಿಟ್ಟುಕೊಡುವವರೆಗೆ ಕುಲಾಧಿಪತಿಗಳಾಗಿ ಪದಧಾರಣ ಮಾಡಿರತಕ್ಕದ್ದು.

(3) ತದನಂತರದ ಕುಲಾಧಿಪತಿಗಳು, ಅಂಥ ನೇಮಕಾತಿಯನ್ನು ಪರಿಗಣಿಸುವ ಸಂದರ್ಭದಲ್ಲಿ ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ, ಪ್ರಾಯೋಜಕ ಸಂಸ್ಥೆಯ ನ್ಯಾಸಧಾರಿಯಾಗಿರತಕ್ಕದ್ದು ಅಥವಾ ಶಿಕ್ಷಣ, ವಿಜ್ಞಾನ, ಸಂಸ್ಕೃತಿ ಅಥವಾ ಸಾರ್ವಜನಿಕ ಜೀವನ ಕ್ಷೇತ್ರಗಳಲ್ಲಿ ರಾಷ್ಟ್ರೀಯ ಮಟ್ಟದ ಛಾಪನ್ನು ಪಡೆದಿರುವ ಅಂಥ ಇತರ ವ್ಯಕ್ತಿಯಾಗಿರತಕ್ಕದ್ದು.

(4) ಹಾಗೆ ನೇಮಕಗೊಂಡ ತದನಂತರದ ಕುಲಾಧಿಪತಿಗಳು ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ಪದಧಾರಣ ಮಾಡತಕ್ಕದ್ದು.

(5) ಕುಲಾಧಿಪತಿಗಳು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿದ ಪರಿನಿಯಮಗಳ ಅಡಿಯಲ್ಲಿ ಅವರಿಗೆ ಪ್ರದಾನ ಮಾಡಬಹುದಾದಂಥ ಅಧಿಕಾರಗಳನ್ನು ಹೊಂದಿರತಕ್ಕದ್ದು, ಅವುಗಳಲ್ಲಿ ಈ ಮುಂದಿನ ಅಧಿಕಾರಗಳು ಒಳಗೊಂಡಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು;

(ii) ಸಂದರ್ಶಕರ ಮತ್ತು ಸಹ–ಸಂದರ್ಶಕರಿಬ್ಬರ ಗೈರುಹಾಜರಿಯಲ್ಲಿ ವಿಶ್ವವಿದ್ಯಾಲಯದ ಎಲ್ಲಾ ಘಟಿಕೋತ್ಸವಗಳಲ್ಲಿ ಅಧ್ಯಕ್ಷತೆಯನ್ನು ವಹಿಸುವುದು;

(iii) ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುವುದು;

(iv) ಈ ಅಧಿನಿಯಮ ಮತ್ತು ಪರಿನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಕುಲಪತಿಗಳನ್ನು ನೇಮಿಸುವುದು ಅಥವಾ ಪುನರ್ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(v) ಈ ಅಧಿನಿಯಮದ 16ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ನಾಮನಿರ್ದೇಶಕ ಸಮಿತಿಯ ಸದಸ್ಯರಾಗಿ ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡುವುದು;

(vi) ಸಹಕುಲಪತಿಗಳು, ಡೀನ್, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿಗಳ ನೇಮಕಾತಿಯನ್ನು ಪೂರ್ವಾನುಮೋದಿಸುವುದು;

(vii) ಪ್ರಬಂಧಕ ಮಂಡಳಿಯ ಸದಸ್ಯರನ್ನಾಗಿ ಇಬ್ಬರು ಶಿಕ್ಷಣ ತಜ್ಞರನ್ನು ನಾಮನಿರ್ದೇಶಿಸುವುದು;

(viii) ಮೊದಲ ಸಹಕುಲಪತಿಗಳು ಮತ್ತು ಹಣಕಾಸು ಅಧಿಕಾರಿಗಳನ್ನು ನೇಮಿಸುವುದು;

(ix) ಮೊದಲ ವ್ಯವಸ್ಥಾಪನಾ ಮಂಡಳಿ, ಹಣಕಾಸು ಸಮಿತಿ, ಸಂಶೋಧನಾ ಪರಿಷತ್ತು ಹಾಗೂ ಶೈಕ್ಷಣಿಕ ಪರಿಷತ್ತುಗಳನ್ನು ರಚಿಸುವುದು;

(x) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ ಕಾರ್ಯಸೂಚಿ ವಿಷಯಗಳನ್ನು ಪೂರ್ವಾನುಮೋದಿಸುವುದು;

(xi) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ (ಪ್ರಬಂಧಕ ಮಂಡಳಿಯ ಸಭೆಯಲ್ಲಿ ಉಂಟಾದ ವಿವಾದಗಳನ್ನು ಹೊರತುಪಡಿಸಿ) ವಿವಾದಗಳನ್ನು ಪರಿಹರಿಸುವುದು.

(6) ಪದಾಧಿಕಾರಿ ಅಥವಾ ಸಂಸ್ಥೆ ಮತ್ತು ವಿಶ್ವವಿದ್ಯಾಲಯದ ಯಾವುದೇ ಇತರ ಪದಾಧಿಕಾರಿ ಅಥವಾ ಸಂಸ್ಥೆಯ ನಡುವೆ ವಿವಾದಗಳು ಉಂಟಾದಲ್ಲಿ, ಆ ವಿವಾದವನ್ನು ಕುಲಾಧಿಪತಿಯವರ ಪರ್ಯಾಲೋಚನೆಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿವಾದದ ಸಂದರ್ಭದಲ್ಲಿ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**16. ಕುಲಪತಿಗಳು.–** (1) (2)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ನಾಮನಿರ್ದೇಶಕ ಸಮಿತಿಯು ಶಿಫಾರಸ್ಸು ಮಾಡಿದ ಮೂರು ವ್ಯಕ್ತಿಗಳ ಪೈಕಿಯಿಂದ ಒಬ್ಬರನ್ನು ಮೂರು ವರ್ಷಗಳ ಅವಧಿಗಾಗಿ ಕುಲಪತಿಗಳನ್ನಾಗಿ, ಪರಿನಿಯಮಗಳಲ್ಲಿ ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕುಲಾಧಿಪತಿಯವರು ನೇಮಿಸತಕ್ಕದ್ದು. ಮೂರು ವರ್ಷಗಳ ಅವಧಿಯು ಮುಗಿದ ತರುವಾಯ, ಇದನ್ನು ಮೂರು ವರ್ಷಗಳ ಮತ್ತೊಂದು ಅವಧಿಗೆ ನವೀಕರಿಸಬಹುದು:

ಪರಂತು, ಕುಲಪತಿಯವರು, ತಮ್ಮ ಅವಧಿ ಮುಗಿದ ನಂತರವೂ ಹೊಸ ಕುಲಪತಿಯವರು ಸೇರಿಕೊಳ್ಳುವವರೆಗೆ ಪದದಲ್ಲಿ ಮುಂದುವರೆಯತಕ್ಕದ್ದು. ಆದಾಗ್ಯೂ ಈ ಅವಧಿಯು ಯಾವುದೇ ಸಂದರ್ಭದಲ್ಲಿ ಒಂದು ವರ್ಷವನ್ನು ಮೀರತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಹೇಳಿರುವ ನಾಮನಿರ್ದೇಶಕ ಸಮಿತಿಯಲ್ಲಿ ಈ ಮುಂದಿನ ವ್ಯಕ್ತಿಗಳು ಇರತಕ್ಕದ್ದು, ಎಂದರೆ:-

(i) ಕುಲಾಧಿಪತಿಯವರು ನಾಮನಿರ್ದೇಶಿಸಿದ ಒಬ್ಬ ವ್ಯಕ್ತಿ;

(ii) ಪ್ರಬಂಧಕ ಮಂಡಳಿಯ ಇಬ್ಬರು ನಾಮ ನಿರ್ದೇಶಿತರು, ಇವರಲ್ಲಿ ಒಬ್ಬರನ್ನು ಪ್ರಬಂಧಕ ಮಂಡಳಿಯು ಸಮಿತಿಯ ಸಂಚಾಲಕರೆಂದು ನಾಮನಿರ್ದೇಶಿಸತಕ್ಕದ್ದು.

(3) ನಾಮನಿರ್ದೇಶನ ಸಮಿತಿಯು, ಅರ್ಹತೆಯ ಆಧಾರದ ಮೇಲೆ ಕುಲಪತಿಯ ಹುದ್ದೆಗೆ ಸೂಕ್ತವಾದ ಮೂರು ವ್ಯಕ್ತಿಗಳ ಹೆಸರನ್ನು ಶಿಫಾರಸ್ಸು ಮಾಡತಕ್ಕದ್ದು ಮತ್ತು ಅದನ್ನು ಪ್ರತಿಯೊಬ್ಬ ವ್ಯಕ್ತಿಯ ವಿದ್ಯಾರ್ಹತೆ ಮತ್ತಿತರ ವಿಶಿಷ್ಟ ಪ್ರಶಸ್ತಿಗಳನ್ನು ತಿಳಿಸುವ ಒಂದು ಸಂಕ್ಷಿಪ್ತ ವರದಿಯೊಂದಿಗೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು.

(4) ಕುಲಪತಿಯವರು ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಮತ್ತು ಶೈಕ್ಷಣಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ವ್ಯವಹಾರಗಳ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ಚಲಾಯಿಸತಕ್ಕದ್ದು ಹಾಗೂ ವಿಶ್ವವಿದ್ಯಾಲಯದ ಪ್ರಾಧಿಕಾರಗಳ ತೀರ್ಮಾನಗಳನ್ನು ಜಾರಿಗೊಳಿಸತಕ್ಕದ್ದು:

ಪರಂತು, ಶಿಕ್ಷಕರ ನೇಮಕಾತಿಯನ್ನು ಹೊರತುಪಡಿಸಿ ಕೂಡಲೇ ಕ್ರಮವನ್ನು ಕೈಗೊಳ್ಳಬೇಕಾದ ತುರ್ತು ಸ್ವರೂಪದ ಯಾವುದೇ ಇತರ ವಿಷಯಗಳಲ್ಲಿ ಮತ್ತು ಅದನ್ನು ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ವಿಶ್ವವಿದ್ಯಾಲಯವು ಇದಕ್ಕಾಗಿ ಅಧಿಕೃತಗೊಳಿಸಿದ್ದ ಯಾವೊಬ್ಬ ಅಧಿಕಾರಿ ಅಥವಾ ಪ್ರಾಧಿಕಾರ ಅಥವಾ ಇತರ ಸಂಸ್ಥೆಯು ಕೂಡಲೇ ಕ್ರಮಕೈಗೊಳ್ಳುವುದು ಸಾಧ್ಯವಿರದಿರುವಾಗ ಕುಲಪತಿಯವರು ತಾನು ಸೂಕ್ತವೆಂದು ಭಾವಿಸಬಹುದಾದಂತಹ ಕ್ರಮವನ್ನು ಕುಲಾಧಿಪತಿಯವರ ಲಿಖಿತ ಪೂರ್ವಾನುಮೋದನೆಯನ್ನು ಪಡೆದು ಕೈಗೊಳ್ಳತಕ್ಕದ್ದು.

(5) ಕುಲಪತಿಯವರು ಪರಿನಿಯಮಗಳು ಅಥವಾ ನಿಯಮಗಳಲ್ಲಿ ಹೇಳಲಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು:

ಪರಂತು, ಕುಲಪತಿಗಳ ಅಭಿಪ್ರಾಯದಲ್ಲಿ, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಯಾವುದೇ ನಿರ್ಣಯವು, ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಿದ ಪರಿನಿಯಮಗಳು, ವಿನಿಯಮಗಳು ಅಥವಾ ನಿಯಮಗಳ ಮೂಲಕ ಪ್ರದತ್ತವಾದ ಅಧಿಕಾರದ ಹೊರಗಿದ್ದರೆ ಅಥವಾ ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಪ್ರತಿಕೂಲವಾಗಬಹುದಾಗಿದ್ದರೆ, ಅದರ ನಿರ್ಣಯದ ದಿನಾಂಕದಿಂದ ಹದಿನೈದು ದಿನಗಳ ಒಳಗೆ ತನ್ನ ನಿರ್ಣಯವನ್ನು ಪರಿಷ್ಕರಿಸಲು ಸಂಬಂಧಪಟ್ಟ ಪ್ರಾಧಿಕಾರವನ್ನು ಆತನು ಕೋರತಕ್ಕದ್ದು ಮತ್ತು ಪ್ರಾಧಿಕಾರವು ಅಂಥ ನಿರ್ಣಯವನ್ನು ಸಂಪೂರ್ಣವಾಗಿ ಅಥವಾ ಭಾಗಶಃವಾಗಿ ಪರಿಷ್ಕರಿಸಲು ನಿರಾಕರಿಸಿದ ಸಂದರ್ಭದಲ್ಲಿ ಅಥವಾ ಹದಿನೈದು ದಿನಗಳೊಳಗೆ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳಲು ವಿಫಲವಾದಲ್ಲಿ, ನಂತರ ಅಂಥ ವಿಷಯವನ್ನು ಕುಲಾಧಿಪತಿಗಳಿಗೆ ಕಳುಹಿಸತಕ್ಕದ್ದು ಮತ್ತು ಈ ಬಗ್ಗೆ ಇವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(6) ಕುಲಪತಿಯವರ ಸೇವೆಗಳನ್ನು, ಪ್ರಬಂಧಕ ಮಂಡಳಿಯ ಅನುಮೋದನೆಯೊಂದಿಗೆ ಮತ್ತು ಸಹಜ ನ್ಯಾಯದ ತತ್ವಗಳನ್ನು ಅನುಸರಿಸಿದ ನಂತರ ಹಾಗೂ ಶಿಸ್ತಿನ ಆಧಾರದ ಮೇಲೆ ಅಂತ್ಯಗೊಳಿಸುವ ಸಂದರ್ಭವೂ ಸೇರಿದಂತೆ, ಪ್ರಕರಣದ ಬಗ್ಗೆ ಕುಲಪತಿಯು ತನ್ನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ತರುವಾಯ, ಕುಲಾಧಿಪತಿಯವರು ಅಂತ್ಯಗೊಳಿಸಬಹುದು.

(7) ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಸಂದರ್ಶಕರು, ಸಹ-ಸಂದರ್ಶಕರು ಮತ್ತು ಕುಲಾಧಿಪತಿಯವರು ಇವರುಗಳ ಗೈರು ಹಾಜರಿಯ ಸಂದರ್ಭದಲ್ಲಿ ಕುಲಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**17. ಸಹಕುಲಪತಿಗಳು.-** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಮೂರು ಜನರನ್ನು ಮೀರದಂತೆ ಸಹಕುಲಪತಿಗಳನ್ನು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನೇಮಕಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**18. ವ್ಯಾಸಂಗ ವಿಭಾಗಗಳ ಡೀನ್‌ಗಳು.-** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ವಿಧಾನದಲ್ಲಿ ವ್ಯಾಸಂಗ ವಿಭಾಗಗಳ ಡೀನ್‌ಗಳನ್ನು ನೇಮಕಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**19. ಕುಲಸಚಿವರು.-** (1) ಕುಲಾಧಿಪತಿಯವರು, ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ನಿಬಂಧನೆ ಮತ್ತು ಷರತ್ತುಗಳ ಮೇಲೆ ಕುಲಸಚಿವರನ್ನು ನೇಮಕ ಮಾಡತಕ್ಕದ್ದು.

(2) ಪರಿನಿಯಮಗಳಲ್ಲಿ ಪರಿಭಾಷಿಸಿರುವಂಥ ಎಲ್ಲಾ ಕರಾರುಗಳನ್ನು ವಿಶ್ವವಿದ್ಯಾಲಯದ ಪರವಾಗಿ ಕುಲಸಚಿವರು ಮಾಡಿಕೊಳ್ಳತಕ್ಕದ್ದು ಮತ್ತು ಅದಕ್ಕೆ ಸಹಿ ಹಾಕತಕ್ಕದ್ದು.

(3) ಕುಲಸಚಿವರು ವಿಶ್ವವಿದ್ಯಾಲಯದ ಪರವಾಗಿ ದಾಖಲೆಗಳನ್ನು ಅಧಿಕೃತಗೊಳಿಸುವ ಅಧಿಕಾರವನ್ನು ಹೊಂದಿರತಕ್ಕದ್ದು ಹಾಗೂ ಪರಿನಿಯಮಗಳಿಂದ ಪ್ರದತ್ತಗೊಳಿಸಬಹುದಾದಂಥ ಅಥವಾ ಕುಲಾಧಿಪತಿಯವರು ಮತ್ತು ಕುಲಪತಿಯವರು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(4) ಕುಲಸಚಿವರು ವಿಶ್ವವಿದ್ಯಾಲಯದ ದಾಖಲೆಗಳು ಮತ್ತು ಸಾಮಾನ್ಯ ಮೊಹರನ್ನು ಸರಿಯಾದ ರೀತಿಯಲ್ಲಿ ರಕ್ಷಿಸಿಕೊಂಡು ಬರುವ ಹೊಣೆಗಾರಿಕೆಯನ್ನು ಹೊಂದಿರತಕ್ಕದ್ದು ಮತ್ತು ಕುಲಾಧಿಪತಿಯವರು, ಕುಲಪತಿಯವರು ಅಥವಾ ಇತರ ಯಾವುದೇ ಪ್ರಾಧಿಕಾರವು ಕೋರಿದಂಥ ಎಲ್ಲಾ ಅಂಥ ಮಾಹಿತಿಯನ್ನು ಮತ್ತು ದಾಖಲೆಗಳನ್ನು ಅವರ ಮುಂದೆ ಮಂಡಿಸಲು ಬದ್ಧರಾಗಿತಕ್ಕದ್ದು.

**20. ಹಣಕಾಸು ಅಧಿಕಾರಿ.–** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು, ಪರಿನಿಯಮಗಳ ಮೂಲಕ ಪ್ರದತ್ತಗೊಳಿಸಬಹುದಾದ ಅಂಥ ವಿಧಾನದಲ್ಲಿ ಹಣಕಾಸು ಅಧಿಕಾರಿಯನ್ನು ನೇಮಕ ಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**21. ಇತರ ಅಧಿಕಾರಿಗಳು.–** ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ ನೇಮಕಾತಿಯ ವಿಧಾನ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಕರ್ತವ್ಯಗಳು ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**22. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವುಗಳು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(i) ಪ್ರಬಂಧಕ ಮಂಡಳಿ;

(ii) ವ್ಯವಸ್ಥಾಪನಾ ಮಂಡಳಿ;

(iii) ಶೈಕ್ಷಣಿಕ ಪರಿಷತ್ತು;

(iv) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು;

(v) ಹಣಕಾಸು ಸಮಿತಿ; ಮತ್ತು

(vi) ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಪರಿನಿಯಮಗಳ ಮೂಲಕ ಘೋಷಿಸಬಹುದಾದ ಅಂಥ ಇತರ ಪ್ರಾಧಿಕಾರಗಳು.

**23. ಪ್ರಬಂಧಕ ಮಂಡಳಿ ಮತ್ತು ಇದರ ಅಧಿಕಾರಗಳು.–** (1) ಪ್ರಬಂಧಕ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು – ಅಧ್ಯಕ್ಷರು;

(ii) ಕುಲಪತಿಯವರು – ಸದಸ್ಯರು;

(iii) ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(iv) ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(v) ರಾಜ್ಯ ಸರ್ಕಾರವು ನಾಮ ನಿರ್ದೇಶನ ಮಾಡಿದ ಆಡಳಿತವನ್ನು ಒಳಗೊಂಡಂತೆ ವ್ಯವಸ್ಥಾಪನೆ, ಹಣಕಾಸು ಅಥವಾ ಯಾವುದೇ ಇತರ ವಿಶೇಷ ಕ್ಷೇತ್ರದಲ್ಲಿನ ಒಬ್ಬರು ತಜ್ಞರು;

(vi) ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶಿಸಿದ ಇಬ್ಬರು ವ್ಯಕ್ತಿಗಳು ಅವರ ಪೈಕಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(vii) ಸಹ ಕುಲಪತಿಯವರು ಮತದಾನದ ಹಕ್ಕಿಲ್ಲದ ಸದಸ್ಯರಾಗಿರತಕ್ಕದ್ದು;

(viii) ವಿಶ್ವವಿದ್ಯಾಲಯ ಅನುದಾನ ಆಯೋಗದ ನಾಮನಿರ್ದೇಶಿತ ಒಬ್ಬ ಸುಪ್ರಸಿದ್ಧ ಶಿಕ್ಷಣ ತಜ್ಞರು.

(2) ಕುಲಸಚಿವರು ಪ್ರಬಂಧಕ ಮಂಡಳಿಯ ಮತ ದಾನದ ಹಕ್ಕಿರದ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ಪ್ರಬಂಧಕ ಮಂಡಳಿಯ ಸದಸ್ಯರ ಪದಾವಧಿ, ಸರ್ಕಾರದಿಂದ ನಾಮನಿರ್ದೇಶಿತರಾದ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ನೇಮಕಾತಿ, ನವೀಕರಣ ಮತ್ತು ತೆಗೆದುಹಾಕುವುದು ಮುಂತಾದವುಗಳು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಲ್ಲಿ ಕುಲಾಧಿಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಗೈರುಹಾಜರಿಯಲ್ಲಿ ಕುಲಾಧಿಪತಿಯವರಿಂದ ನಾಮನಿರ್ದೇಶಿತರಾದ ಯಾರಾದರೂ ಒಬ್ಬರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಅಂಥ ಸಭೆಯ ಅಧ್ಯಕ್ಷತೆಯನ್ನು ವಹಿಸುವುದಕ್ಕೆ ಕುಲಾಧಿಪತಿಯವರು ಯಾವೊಬ್ಬ ವ್ಯಕ್ತಿಯನ್ನೂ ನಾಮನಿರ್ದೇಶನ ಮಾಡಿರದಿದ್ದಲ್ಲಿ, ಸಭೆಯಲ್ಲಿ ಹಾಜರಿರುವ ಸದಸ್ಯರು ಸರಳ ಬಹುಮತದ ಮೂಲಕ ಅವರುಗಳ ಪೈಕಿಯಿಂದಲೇ ಆ ಸಭೆಗೆ ಮಾತ್ರವೇ ಅಧ್ಯಕ್ಷನನ್ನು ಚುನಾಯಿಸತಕ್ಕದ್ದು.

(5) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಿಗೆ, ಅಂಥ ಸಭೆಯಲ್ಲಿ ಹಾಜರಾಗುವ ಮತ್ತು ಮತದಾನ ನೀಡುವ ಮೂರು ಜನ ಸದಸ್ಯರು ಗಣಪೂರ್ತಿ (ಕೋರಂ) ಆಗಿರತಕ್ಕದ್ದು:

ಪರಂತು, ಪ್ರಬಂಧಕ ಮಂಡಳಿಯ ಯಾವುದೇ ಸಭೆಯ ಕೋರಂ ಪೂರ್ಣವಾಗಬೇಕಾದರೆ ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು ಹಾಜರಿರುವುದು ಮತ್ತು ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ನಾಮನಿರ್ದೇಶಿತರು ಹಾಜರಾಗದೇ ಇದ್ದಾಗ ಕುಲಪತಿಯವರು ಹಾಜರಿರುವುದು ಯಾವಾಗಲೂ ಅವಶ್ಯವಾಗಿರತಕ್ಕದ್ದು.

(6) ಪ್ರಬಂಧಕ ಮಂಡಳಿಯು ವಿಶ್ವವಿದ್ಯಾಲಯದ ಪ್ರಧಾನ ಪ್ರಬಂಧಕ ಸಂಸ್ಥೆಯಾಗಿರತಕ್ಕದ್ದು ಮತ್ತು ಅದು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಶಾಸನಬದ್ಧ ಲೆಕ್ಕಪರಿಶೋಧಕರನ್ನು ನೇಮಕಗೊಳಿಸುವುದು;

(ii) ವಿಶ್ವವಿದ್ಯಾಲಯವು ಅನುಸರಿಸಬೇಕಾದ ಕಾರ್ಯನೀತಿಗಳನ್ನು ರಚಿಸುವುದು;

(iii) ಈ ಅಧಿನಿಯಮದ ಅಥವಾ ಪರಿನಿಯಮಗಳ ಅಥವಾ ನಿಯಮಗಳ ಉಪಬಂಧಗಳಿಗೆ ಅನುಗುಣವಾಗಿ ಇರದ ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ತೀರ್ಮಾನಗಳನ್ನು ಪುನರೀಕ್ಷಿಸುವುದು;

(iv) ವಿಶ್ವವಿದ್ಯಾಲಯದ ಆಯವ್ಯಯ ಮತ್ತು ವಾರ್ಷಿಕ ವರದಿಗಳನ್ನು ಅನುಮೋದಿಸುವುದು;

(v) ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸುವುದು ಅಥವಾ ಈಗಾಗಲೇ ಇರುವ ಪರಿನಿಯಮಗಳು ಮತ್ತು ನಿಯಮಗಳನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

(vi) ವಿಶ್ವವಿದ್ಯಾಲಯವನ್ನು ಸ್ವಯಂಸಮಾಪನಗೊಳಿಸುವ ನಿರ್ಧಾರವನ್ನು ತೆಗೆದುಕೊಳ್ಳುವುದು;

(vii) ಸರ್ಕಾರಕ್ಕೆ ಸಲ್ಲಿಸುವ ಪ್ರಸ್ತಾವಗಳನ್ನು ಅನುಮೋದಿಸುವುದು;

(viii) ಶುಲ್ಕ ನಿಯಂತ್ರಣ ಸಮಿತಿಗೆ ಮೂವರು ಸದಸ್ಯರನ್ನು ನಾಮನಿರ್ದೇಶನ ಮಾಡುವುದು;

(ix) ವಿಶ್ವವಿದ್ಯಾಲಯದ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕೆ ಅಪೇಕ್ಷಣೀಯವೆಂದು ಕಂಡುಬರುವಂಥ ತೀರ್ಮಾನಗಳನ್ನು ಮತ್ತು ಕ್ರಮಗಳನ್ನು ಕೈಗೊಳ್ಳುವುದು.

(7) ಪ್ರಬಂಧಕ ಮಂಡಳಿಯು ಒಂದು ವರ್ಷದಲ್ಲಿ ಕನಿಷ್ಠ ಮೂರು ಸಲ ಸಭೆ ಸೇರತಕ್ಕದ್ದು.

(8) ಪ್ರಬಂಧಕ ಮಂಡಳಿಯು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಸಮಯ ಮತ್ತು ಸ್ಥಳದಲ್ಲಿ ಸಭೆ ಸೇರತಕ್ಕದ್ದು.

**24. ವ್ಯವಸ್ಥಾಪನಾ ಮಂಡಳಿ.**– (1) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಗಳು;

(ii) ಸಹಕುಲಪತಿಗಳು;

(iii) ಕುಲಸಚಿವರು;

(iv) ಪ್ರಾಯೋಜಕ ಸಂಸ್ಥೆಯ ಇಬ್ಬರು ನಾಮನಿರ್ದೇಶಿತರು;

(v) ಕುಲಪತಿಗಳು ನಾಮನಿರ್ದೇಶಿಸಬಹುದಾದ ವಿದ್ಯಾಲಯಗಳ ಇಬ್ಬರು ಡೀನ್‌ಗಳು;

(2) ಕುಲಪತಿಯವರು ವ್ಯವಸ್ಥಾಪನಾ ಮಂಡಳಿಯ ಅಧ್ಯಕ್ಷರಾಗಿರತಕ್ಕದ್ದು ಮತ್ತು ಕುಲಸಚಿವರು ವ್ಯವಸ್ಥಾಪನಾ ಮಂಡಳಿಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ವ್ಯವಸ್ಥಾಪನಾ ಮಂಡಳಿಯು ವಿಶ್ವವಿದ್ಯಾಲಯದ ಕಾರ್ಯನಿರ್ವಾಹಕ ಸಂಸ್ಥೆಯಾಗಿರತಕ್ಕದ್ದು. ವ್ಯವಸ್ಥಾಪನಾ ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

(4) ವ್ಯವಸ್ಥಾಪನಾ ಮಂಡಳಿಯ ಎಲ್ಲಾ ಸಭೆಗಳಲ್ಲಿ ಯಾವಾಗಲೂ ಕುಲಪತಿಯವರು ಅಧ್ಯಕ್ಷತೆ ವಹಿಸತಕ್ಕದ್ದು ಹಾಗೂ ಕುಲಪತಿಯವರ ಗೈರುಹಾಜರಿಯಲ್ಲಿ ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶನ ಮಾಡಿದವರು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪ್ರಾಯೋಜಕ ಸಂಸ್ಥೆಯು ಯಾರನ್ನೂ ನಾಮನಿರ್ದೇಶನ ಮಾಡದೇ ಇದ್ದ ಸಂದರ್ಭದಲ್ಲಿ ಸಭೆಯಲ್ಲಿ ಹಾಜರಿರುವ ಸದಸ್ಯರು ಚುನಾಯಿಸಿದ ಯಾವುದೇ ಇತರ ಸದಸ್ಯರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(5) ವ್ಯವಸ್ಥಾಪನಾ ಮಂಡಳಿಯ ಸಭೆಯಲ್ಲಿ ಯಾವುದೇ ವಿಷಯವನ್ನು ಕುರಿತು ವಿವಾದ ಉಂಟಾದಲ್ಲಿ ಸದರಿ ವಿಷಯವನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿಷಯದ ಬಗ್ಗೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**25. ಶೈಕ್ಷಣಿಕ ಪರಿಷತ್ತು.**–(1) ಶೈಕ್ಷಣಿಕ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

| | | |
|---|---|---|
| (i) | ಕುಲಪತಿಯವರು | – ಅಧ್ಯಕ್ಷರು |
| (ii) | ಸಹಕುಲಪತಿಯವರು | – ಸದಸ್ಯರು |
| (iii) | ಕುಲಸಚಿವರು | – ಕಾರ್ಯದರ್ಶಿಗಳು |
| (iv) | ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು. | |

(2) ಶೈಕ್ಷಣಿಕ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಶೈಕ್ಷಣಿಕ ಸಂಸ್ಥೆಯಾಗಿರತಕ್ಕದ್ದು ಮತ್ತು ಈ ಅಧಿನಿಯಮದ, ಪರಿನಿಯಮಗಳ, ವಿನಿಯಮಗಳ ಹಾಗೂ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**26. ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು.**– (1) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಸಂಶೋಧನಾ ಮತ್ತು ಅನ್ವೇಷಣಾ ಸಮಿತಿಯಾಗಿರತಕ್ಕದ್ದು ಹಾಗೂ ಸಂಶೋಧನಾ ಕ್ಷೇತ್ರಗಳ ಆದ್ಯತೆಯೂ ಒಳಗೊಂಡಂತೆ, ವಿಶ್ವವಿದ್ಯಾಲಯವು ಕೈಗೊಳ್ಳಬೇಕಾದ ಸಂಶೋಧನೆಯ ಬಗ್ಗೆ ಒಂದು ವ್ಯಾಪಕವಾದ ಪರಿಪೂರ್ಣ ಭವಿಷ್ಯದ್ ದೃಷ್ಟಿಯನ್ನು ಒದಗಿಸತಕ್ಕದ್ದು. ಈ ಪರಿಷತ್ತು, ಈ ಅಧಿನಿಯಮದ, ಪರಿನಿಯಮಗಳ, ವಿನಿಯಮಗಳ ಮತ್ತು ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಸಂಶೋಧನೆ ಮತ್ತು ಅನ್ವೇಷಣಾ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಯವರು – ಅಧ್ಯಕ್ಷರು

(ii) ಸಹಕುಲಪತಿಯವರು – ಸದಸ್ಯರು

(iii) ಸಂಶೋಧನೆಯ ಡೀನ್ – ಕಾರ್ಯದರ್ಶಿ

(iv) ಅನ್ವೇಷಣಾ ವಿಭಾಗದ ಮುಖ್ಯಸ್ಥರು – ಸದಸ್ಯರು

(v) ಎಲ್ಲಾ ವ್ಯಾಸಂಗ ವಿಭಾಗಗಳ ಡೀನ್‌ಗಳು – ಸದಸ್ಯರು ಮತ್ತು

(vi) ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

**27. ಹಣಕಾಸು ಸಮಿತಿ.–** (1) ಹಣಕಾಸು ಸಮಿತಿ ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು ಅಥವಾ ಅವರ ನಾಮನಿರ್ದೇಶಿತರು – ಅಧ್ಯಕ್ಷರು

(ii) ಕುಲಪತಿಯವರು – ಸದಸ್ಯರು

(iii) ಕುಲಸಚಿವರು – ಸದಸ್ಯರು

(iv) ಹಣಕಾಸು ಅಧಿಕಾರಿ – ಕಾರ್ಯದರ್ಶಿ

(v) ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು – ಸದಸ್ಯರು; ಮತ್ತು

(vi) ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

(2) ಹಣಕಾಸು ಸಮಿತಿಯು ಹಣಕಾಸಿನ ವಿಷಯಗಳನ್ನು ಕೈಗೊಳ್ಳುವ ವಿಶ್ವವಿದ್ಯಾಲಯದ ಪ್ರಧಾನ ಹಣಕಾಸು ಸಂಸ್ಥೆಯಾಗಿರತಕ್ಕದ್ದು ಹಾಗೂ ಅದು ಈ ಅಧಿನಿಯಮ, ನಿಯಮಗಳು ಮತ್ತು ಪರಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಹಣಕಾಸು ವಿಷಯಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**28. ಇತರ ಪ್ರಾಧಿಕಾರಗಳು.–** ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಹಾಗೂ ಪ್ರಕಾರ್ಯಗಳು ಪರಿನಿಯಮಗಳಿಂದ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**29. ಒಂದು ಪ್ರಾಧಿಕಾರದ ಅಥವಾ ಸಂಸ್ಥೆಯ ಸದಸ್ಯತ್ವಕ್ಕೆ ಅನರ್ಹತೆ.–** ವಿಶ್ವವಿದ್ಯಾಲಯದ ಸಂಸ್ಥೆಗಳ ಯಾವುವೇ ಪ್ರಾಧಿಕಾರಗಳ ಒಬ್ಬ ವ್ಯಕ್ತಿಯು,–

(ಎ) ಅಸ್ವಸ್ಥ ಚಿತ್ತನಾಗಿದ್ದು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲ್ಪಟ್ಟಿದ್ದರೆ;

(ಬಿ) ಅವಿಮುಕ್ತ ದಿವಾಳಿಯಾಗಿದ್ದರೆ;

(ಸಿ) ನೈತಿಕ ಅಧ:ಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದರೆ;

(ಡಿ) ಖಾಸಗಿ ಬೋಧನಾ ತರಗತಿಗಳನ್ನು ನಡೆಸುತ್ತಿದ್ದರೆ ಅಥವಾ ಸ್ವತ: ನಿರತನಾಗಿದ್ದರೆ;

(ಈ) ಯಾವುದೇ ವಿಧದಲ್ಲಿ, ಎಲ್ಲಿಯೇ, ಯಾವುದೇ ಪರೀಕ್ಷೆಯನ್ನು ನಡೆಸುವಲ್ಲಿ ಅನುಚಿತ ಅಭ್ಯಾಸದಲ್ಲಿ ತೊಡಗಿದ್ದಕ್ಕಾಗಿ ಅಥವಾ ಉತ್ತೇಜಿಸಿದ್ದಕ್ಕಾಗಿ ದಂಡಿತನಾಗಿದ್ದರೆ;

(ಎಫ್) ಪ್ರಾಯೋಜಿತ ಸಂಸ್ಥೆಯು ಯಾವುವೇ ಪ್ರಾಧಿಕಾರಗಳ ಅಥವಾ ಸಂಸ್ಥೆಗಳ ಯಾವೊಬ್ಬ ಸದಸ್ಯನನ್ನು ಆ ಪದವನ್ನು ಹೊಂದಿರುವುದಕ್ಕೆ ಅರ್ಹನಲ್ಲನೆಂದು ಲಿಖಿತದಲ್ಲಿ ಅಭಿಪ್ರಾಯ ನೀಡಿದಾಗಲೆಲ್ಲಾ,

–ಸದಸ್ಯನಾಗಿರುವುದಕ್ಕೆ ಅನರ್ಹನಾಗತಕ್ಕದ್ದು.

**30. ಖಾಲಿಸ್ಥಾನ ಇರುವ ಕಾರಣದಿಂದಾಗಿ ವ್ಯವಹರಣೆಗಳು ಅಸಿಂಧುವಾಗತಕ್ಕದ್ದಲ್ಲ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಕಾರ್ಯ ಅಥವಾ ವ್ಯವಹರಣೆಗಳು ಕೇವಲ ಅದರಲ್ಲಿ ಯಾವುದೇ ಖಾಲಿಸ್ಥಾನ ಇದೆ ಎಂಬ ಕಾರಣದಿಂದ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆ ಎಂಬ ಕಾರಣದಿಂದ ಮಾತ್ರವೇ ಅಸಿಂಧುವಾಗತಕ್ಕದ್ದಲ್ಲ.

**31. ಕಾರ್ಯಸೂಚಿ ವಿಷಯಗಳ ಬಗ್ಗೆ ಉಪಬಂಧಗಳು.–** (1) ಯಾವುವೇ ಕಾರ್ಯಸೂಚಿ ವಿಷಯಗಳನ್ನು ಕುಲಾಧಿಪತಿಯವರ ಪೂರ್ವಾನುಮೋದನೆಯನ್ನು ಪಡೆಯದೇ ಪ್ರಬಂಧಕ ಮಂಡಳಿಯ ಅಥವಾ ಕಾರ್ಯಕಾರಿ ಪರಿಷತ್ತು ಅಥವಾ ಯಾವುದೇ ಸಮಿತಿಯ ಸಭೆಗಳ ಕಾರ್ಯಸೂಚಿ ವಿಷಯಗಳಲ್ಲಿ ಸೇರಿಸತಕ್ಕದ್ದಲ್ಲ ಅಥವಾ ಚರ್ಚೆಗೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ತೀರ್ಮಾನಿಸತಕ್ಕದ್ದಲ್ಲ.

(2) ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಪಾಲಿಸದೆ ಇರುವ ಸಂದರ್ಭದಲ್ಲಿ, ಕುಲಾಧಿಪತಿಯವರು ವಿಶ್ವವಿದ್ಯಾಲಯದ ಯಾವುದೇ ಪದಾಧಿಕಾರಿ ಅಥವಾ ಸಂಸ್ಥೆಯು ತೆಗೆದುಕೊಂಡ ಎಲ್ಲಾ ತೀರ್ಮಾನಗಳನ್ನು ವಿಪರ್ಯಯಗೊಳಿಸುವ ಮೂಲಕ ಪರಿಹಾರ ಕ್ರಮಗಳನ್ನು ಕೂಡಲೇ ಕೈಗೊಳ್ಳಲು ಅಧಿಕಾರವನ್ನು ಎಲ್ಲಾ ಸಮಯದಲ್ಲಿ ಹೊಂದಿರತಕ್ಕದ್ದು ಮತ್ತು ಅಂಥ ಪರಿಹಾರ ಕ್ರಮದ ಪರಿಣಾಮವಾಗಿ ಅಧಿನಿಯಮದ ಉಪಬಂಧಗಳನ್ನು ಪಾಲಿಸದೇ ವಿಶ್ವವಿದ್ಯಾಲಯದ ಪದಾಧಿಕಾರಿ ಅಥವಾ ಸಂಸ್ಥೆಯು ಕೈಗೊಂಡಿದ್ದ ಎಲ್ಲಾ ಅಂಥ ಕ್ರಮಗಳು, ಮೊದಲಿನಿಂದಲೂ ಶೂನ್ಯ ಮತ್ತು ಅಕೃತ ಎಂದು ಭಾವಿಸತಕ್ಕದ್ದು ಹಾಗೂ ತತ್ಪರಿಣಾಮವಾಗಿ, ಉಪಬಂಧ ಪಾಲಿಸದೇ ಇದ್ದ ವಿಷಯ ಅಥವಾ ನಿರ್ಧಾರದ ಸಂಬಂಧದಲ್ಲಿ ಅದಕ್ಕೆ ಮುಂಚೆ ಇದ್ದ ವಸ್ತುಸ್ಥಿತಿಯೇ ಮುಂದುವರಿಯತಕ್ಕದ್ದು.

## ಅಧ್ಯಾಯ – V

## ಪರಿನಿಯಮಗಳು ಮತ್ತು ವಿನಿಯಮಗಳು

**32. ಪರಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಪರಿನಿಯಮಗಳು ವಿಶ್ವವಿದ್ಯಾಲಯಕ್ಕೆ ಮತ್ತು ಸಿಬ್ಬಂದಿಗೆ ಸಂಬಂಧಿಸಿದ ಎಲ್ಲಾ ಅಥವಾ ಯಾವುದೇ ವಿಷಯಕ್ಕೆ ಈ ಕೆಳಗಿನಂತೆ ಉಪಬಂಧ ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಕಾರ್ಯಕಲಾಪಗಳನ್ನು ನಡೆಸುವ ಮತ್ತು ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸದಿರುವ ಸಂಸ್ಥೆಗಳ ರಚನೆಯ ಕಾರ್ಯವಿಧಾನ;

(ii) ಶಾಶ್ವತ ಶಾಸನಬದ್ಧ ದತ್ತಿ ನಿಧಿ, ವಿಶ್ವವಿದ್ಯಾಲಯ ದತ್ತಿ ನಿಧಿ, ಸಾಮಾನ್ಯ ನಿಧಿ ಹಾಗೂ ಅಭಿವೃದ್ಧಿ ನಿಧಿಗಳ ನಿರ್ವಹಣೆ;

(iii) ಕುಲಪತಿಗಳು, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿ ಇವರ ನೇಮಕಾತಿಯ ನಿಬಂಧನೆಗಳು ಹಾಗೂ ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಪ್ರಕಾರ್ಯಗಳು;

(iv) ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ, ಅಧ್ಯಾಪಕರ ಮತ್ತು ನೌಕರರ ನೇಮಕಾತಿ ವಿಧಾನ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(v) ವಿಶ್ವವಿದ್ಯಾಲಯ ಹಾಗೂ ಅದರ ಅಧಿಕಾರಿಗಳು, ವ್ಯಾಸಂಗ ವಿಭಾಗದ (ಫ್ಯಾಕಲ್ಟಿ) ಸದಸ್ಯರು, ನೌಕರರು ಹಾಗೂ ವಿದ್ಯಾರ್ಥಿಗಳ ನಡುವೆ ಉಂಟಾದ ವಿವಾದಗಳನ್ನು ಪರಿಹರಿಸುವ ಕಾರ್ಯವಿಧಾನ;

(vi) ವಿಭಾಗಗಳು ಮತ್ತು ವ್ಯಾಸಂಗ ವಿಭಾಗಗಳ (ಫ್ಯಾಕಲ್ಟಿಗಳ) ಸೃಜನೆ, ರದ್ಧತಿ ಅಥವಾ ಪುನಾರಚನೆ;

(vii) ಇತರ ವಿಶ್ವವಿದ್ಯಾಲಯಗಳು ಅಥವಾ ಉನ್ನತ ಕಲಿಕಾ ಸಂಸ್ಥೆಗಳ ಜೊತೆಯಲ್ಲಿ ಸಹಕರಿಸಬೇಕಾದ ರೀತಿ;

(viii) ಗೌರವ ಪದವಿಗಳ ನೀಡಿಕೆಯ ಕಾರ್ಯವಿಧಾನ;

(ix) ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿವೇತನ ಮಂಜೂರಾತಿಗೆ ಸಂಬಂಧಿಸಿದ ಉಪಬಂಧಗಳು;

(x) ವಿವಿಧ ವ್ಯಾಸಂಗ ಕ್ರಮಗಳಲ್ಲಿನ ಸೀಟುಗಳ ಸಂಖ್ಯೆಗೆ ಸಂಬಂಧಿಸಿದ ಕಾರ್ಯನೀತಿಗಳು ಮತ್ತು ಅಂಥ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಕಾರ್ಯವಿಧಾನ;

(xi) ವಿವಿಧ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳಿಗೆ ವಿಧಿಸಬಹುದಾದ ಶುಲ್ಕಕ್ಕೆ ಸಂಬಂಧಿಸಿದ ಕಾರ್ಯನೀತಿ;

(xii) ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಉಚಿತ ಶಿಕ್ಷಣ, ಪದಕಗಳು ಹಾಗೂ ಬಹುಮಾನಗಳನ್ನು ಪ್ರಾರಂಭಿಸುವುದು;

(xiii) ಪ್ರಬಂಧಕ ಮಂಡಳಿಯು ನಿರ್ಧರಿಸಬಹುದಾದ ಅಥವಾ ಈ ಅಧಿನಿಯಮದ ಅಡಿಯಲ್ಲಿ ಪರಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬೇಕಾದ ಅಗತ್ಯತೆಯುಳ್ಳ ಯಾವುದೇ ಇತರ ವಿಷಯಗಳು.

**33. ಪರಿನಿಯಮಗಳ ರಚನೆ ವಿಧಾನ.–** (1) ವ್ಯವಸ್ಥಾಪನಾ ಮಂಡಳಿಯು ರಚಿಸಿದ ಮೊದಲ ಶಾಸನಗಳನ್ನು ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ವ್ಯವಸ್ಥಾಪನಾ ಮಂಡಳಿಯು ಸಲ್ಲಿಸಿದ ಮೊದಲ ಪರಿನಿಯಮಗಳನ್ನು ಪ್ರಬಂಧಕ ಮಂಡಳಿಯು ಪರಿಗಣಿಸತಕ್ಕದ್ದು ಹಾಗೂ ತಾನು ಅವಶ್ಯವೆಂದು ಭಾವಿಸಬಹುದಾದ ಅಂಥ ಮಾರ್ಪಾಡುಗಳು, ಯಾವುದಾದರು ಇದ್ದಲ್ಲಿ, ಅವುಗಳೊಡನೆ ತನ್ನ ಅನುಮೋದನೆಯನ್ನು ನೀಡತಕ್ಕದ್ದು.

(3) ವಿಶ್ವವಿದ್ಯಾಲಯವು, ಪ್ರಬಂಧಕ ಮಂಡಳಿಯು ಅನುಮೋದಿಸಿದ ಮೊದಲ ಪರಿನಿಯಮಗಳನ್ನು ವಿಶ್ವವಿದ್ಯಾಲಯದ ಅಧಿಸೂಚನೆಯಲ್ಲಿ ಪ್ರಕಟಿಸತಕ್ಕದ್ದು ಮತ್ತು ತದನಂತರ ಮೊದಲ ಪರಿನಿಯಮಗಳ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**34. ಪರಿನಿಯಮಗಳ ತಿದ್ದುಪಡಿಯ ಅಧಿಕಾರ.–** ಪ್ರಬಂಧಕ ಮಂಡಳಿಯು ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸಬಹುದು ಅಥವಾ ಪರಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ಅವನ್ನು ನಿರಸನಗೊಳಿಸಬಹುದು.

**35. ವಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ವಿನಿಯಮಗಳು ಈ ಮುಂದಿನ ವಿಷಯಗಳಿಗೆ ಉಪಬಂಧಗಳನ್ನು ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ ಮತ್ತು ವಿದ್ಯಾರ್ಥಿ ಪಟ್ಟಿಯಲ್ಲಿ ಅವರುಗಳ ದಾಖಲಾತಿ ಹಾಗೂ ಮುಂದುವರಿಕೆ;

(ii) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ನಿಗದಿಪಡಿಸತಕ್ಕ ವ್ಯಾಸಂಗ ಕ್ರಮಗಳು;

(iii) ಪದವಿಗಳ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳ ಪ್ರದಾನ;

(iv) ಸಂಶೋಧನಾ ವೇತನಗಳು (ಫೆಲೋಶಿಪ್), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಪದಕಗಳು ಮತ್ತು ಬಹುಮಾನಗಳನ್ನು ನೀಡಲು ಷರತ್ತುಗಳು;

(v) ಪರೀಕ್ಷೆಗಳನ್ನು ನಡೆಸುವುದು ಹಾಗೂ ಪರೀಕ್ಷೆ ನಡೆಸುವ ಸಂಸ್ಥೆಗಳು, ಪರೀಕ್ಷಕರು, ಪರೀಕ್ಷಾ ಮೇಲ್ವಿಚಾರಕರು, ಟ್ಯಾಬುಲೇಟರ್‌ಗಳು ಮತ್ತು ಮಾಡರೇಟರ್‌ಗಳ ನೇಮಕಾತಿ ಷರತ್ತುಗಳು ಮತ್ತು ವಿಧಾನ ಹಾಗೂ ಅವರ ಕರ್ತವ್ಯಗಳು;

(vi) ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ, ಪದವಿಗಳಿಗೆ ಹಾಗೂ ಇತರ ಶೈಕ್ಷಣಿಕ ಪ್ರಶಸ್ತಿಗಳಿಗೆ ಪ್ರವೇಶಕ್ಕೆ ವಿಧಿಸತಕ್ಕ ಶುಲ್ಕ;

(vii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನಲ್ಲಿ ವಿದ್ಯಾರ್ಥಿಗಳ ನಿವಾಸಕ್ಕಾಗಿ ಷರತ್ತುಗಳು;

(viii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶಿಸ್ತು ಪಾಲನೆ;

(ix) ಈ ಅಧಿನಿಯಮದ ಅಡಿಯಲ್ಲಿನ ಪರಿನಿಯಮಗಳಲ್ಲಿ ಉಪಬಂಧ ಕಲ್ಪಿಸಬಹುದಾಂಥ ಇತರ ಎಲ್ಲಾ ವಿಷಯಗಳು.

**36. ವಿನಿಯಮಗಳ ರಚನೆ ವಿಧಾನ.–** ವಿನಿಯಮಗಳನ್ನು ಶೈಕ್ಷಣಿಕ ಪರಿಷತ್ತು ರಚಿಸತಕ್ಕದ್ದು ಹಾಗೂ ವ್ಯವಸ್ಥಾಪನಾ ಮಂಡಳಿಯು ಅನುಮೋದಿಸತಕ್ಕದ್ದು.

**37. ವಿನಿಯಮಗಳ ತಿದ್ದುಪಡಿಗೆ ಅಧಿಕಾರ.–** ವ್ಯವಸ್ಥಾಪನಾ ಮಂಡಳಿಯ ಅನುಮೋದನೆಯೊಡನೆ ಶೈಕ್ಷಣಿಕ ಪರಿಷತ್ತು ಹೊಸ ವಿನಿಯಮಗಳನ್ನು ಅಥವಾ ಹೆಚ್ಚುವರಿ ವಿನಿಯಮಗಳನ್ನು ರಚಿಸಬಹುದು ಅಥವಾ ವಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

**38. ಶುಲ್ಕ ನಿಯಂತ್ರಣ ಸಮಿತಿ.–** (1) ಸರ್ಕಾರವು ರಚಿಸಿದ ನಿವೃತ್ತ ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಮುಖ್ಯಸ್ಥರಾಗಿರುವ ಮತ್ತು ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ, ಉನ್ನತ ಶಿಕ್ಷಣ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ವೈದ್ಯಕೀಯ ಶಿಕ್ಷಣದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ಒಬ್ಬ ಮಹಿಳೆಯೂ ಸೇರಿದಂತೆ ಪ್ರಬಂಧಕ ಮಂಡಳಿಯು ನಾಮನಿರ್ದೇಶಿಸಿದ ಇಬ್ಬರು ಶಿಕ್ಷಣ ತಜ್ಞರು ಇವರುಗಳನ್ನು ಒಳಗೊಂಡ ಒಂದು ಶುಲ್ಕ ನಿಯಂತ್ರಣ ಸಮಿತಿಯು, 9ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗಾಗಿ ಮೀಸಲಿರಿಸಿದ ವಿಶ್ವವಿದ್ಯಾಲಯದ ಸ್ಥಾನಗಳ ಶುಲ್ಕವನ್ನು ನಿಯಂತ್ರಿಸತಕ್ಕದ್ದು. ಸಮಿತಿಯಲ್ಲಿ ಈ ಉದ್ದೇಶಕ್ಕಾಗಿ ಒಬ್ಬರು ಖ್ಯಾತ ಚಾರ್ಟರ್ಡ್ ಅಕೌಂಟೆಂಟ್ ರವರನ್ನು ಸಹ ಸದಸ್ಯನನ್ನಾಗಿ ಸೇರಿಸಿಕೊಳ್ಳತಕ್ಕದ್ದು.

(2) ಸಮಿತಿಯು ವಿಶ್ವವಿದ್ಯಾಲಯದ ಪ್ರವೇಶಗಳ ಮತ್ತು ಶುಲ್ಕದ ಸಂಗ್ರಹಣೆಯ ಅನುಪಾಲನೆಯನ್ನು ನೋಡಿಕೊಳ್ಳತಕ್ಕದ್ದು.

## ಅಧ್ಯಾಯ – VI

## ಸಂಕೀರ್ಣ

**39. ನೌಕರರ ಸೇವಾ ಷರತ್ತುಗಳು.–** (1) ಪರಿನಿಯಮಗಳ ಮತ್ತು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಥವಾ ನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳು, ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಒಳಪಟ್ಟು ಪ್ರತಿಯೊಬ್ಬ ನೌಕರನು ಲಿಖಿತ ಕರಾರಿನ ಅಡಿಯಲ್ಲಿ ನೇಮಕಗೊಳ್ಳತಕ್ಕದ್ದು ಮತ್ತು ಅದನ್ನು ವಿಶ್ವವಿದ್ಯಾಲಯದಲ್ಲಿ ಇಟ್ಟುಕೊಳ್ಳತಕ್ಕದ್ದು ಹಾಗೂ ಅದರ ಪ್ರತಿಯನ್ನು ಸಂಬಂಧಪಟ್ಟ ನೌಕರನಿಗೆ ನೀಡತಕ್ಕದ್ದು.

(2) ನೌಕರರ ವಿರುದ್ಧ ಶಿಸ್ತು ಕ್ರಮವನ್ನು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಕಾರ್ಯವಿಧಾನಗಳ ಮೂಲಕ ನಿಯಂತ್ರಿಸತಕ್ಕದ್ದು.

(3) ಕರಾರಿನಿಂದಾಗಿ ವಿಶ್ವವಿದ್ಯಾಲಯ ಮತ್ತು ನೌಕರನ ಮಧ್ಯದಲ್ಲಿ ಉದ್ಭವಿಸಬಹುದಾದ ಯಾವುದೇ ವಿವಾದವನ್ನು, ಲಿಖಿತ ಕರಾರಿನಲ್ಲಿ ಉಪಬಂಧಿಸಿದ ವಿಧಾನದಲ್ಲಿ ಹಾಗೂ ಪರಿನಿಯಮಗಳ ಅನುಸಾರವಾಗಿ ಪರಿಹರಿಸತಕ್ಕದ್ದು.

**40. ಮೇಲ್ಮನವಿ ಹಕ್ಕು.–** ವಿಶ್ವವಿದ್ಯಾಲಯವು ತನ್ನ ನೌಕರರ ಅಥವಾ ವಿದ್ಯಾರ್ಥಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಂಡ ಸಂದರ್ಭದಲ್ಲಿ, ಬಾಧಿತ ನೌಕರ ಅಥವಾ ವಿದ್ಯಾರ್ಥಿಗಳು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಮೇಲ್ಮನವಿ ಹಕ್ಕನ್ನು ಹೊಂದಿರತಕ್ಕದ್ದು.

**41. ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿ .–** ವಿಶ್ವವಿದ್ಯಾಲಯವು, ತನ್ನ ನೌಕರರ ಪ್ರಯೋಜನಕ್ಕಾಗಿ, ಪರಿನಿಯಮಗಳು ಮತ್ತು ಜಾರಿಯಲ್ಲಿರುವ ಕಾನೂನುಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿಯನ್ನು ರಚಿಸತಕ್ಕದ್ದು ಹಾಗೂ ಅಂಥ ವಿಮಾ ಯೋಜನೆಗಳನ್ನು ಒದಗಿಸತಕ್ಕದ್ದು.

**42. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ಸಂಸ್ಥೆಗಳ ರಚನೆಯ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ಸಂಸ್ಥೆಯ ಸದಸ್ಯನಾಗಿ ಯಾವೊಬ್ಬ ವ್ಯಕ್ತಿಯು ಸೂಕ್ತವಾಗಿ ಆಯ್ಕೆಯಾಗಿದ್ದಾನೆಯೇ ಅಥವಾ ನೇಮಕಗೊಂಡಿದ್ದಾನೆಯೇ ಅಥವಾ ಅದಕ್ಕೆ ಅರ್ಹನಾಗಿದ್ದಾನೆಯೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆ ವಿಷಯವನ್ನು ತೀರ್ಮಾನಕ್ಕಾಗಿ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**43. ಸಮಿತಿಗಳ ರಚನೆ.–** 22ನೇ ಪ್ರಕರಣದಲ್ಲಿ ನಮೂದಿಸಿದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅಧಿಕಾರವನ್ನು ಹೊಂದಿರುವ ಅಂಥ ಸದಸ್ಯರನ್ನು ಒಳಗೊಂಡ ಅಂಥ ಪ್ರಾಧಿಕಾರದ ಒಂದು ಸಮಿತಿಯನ್ನು ರಚಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**44. ಆಕಸ್ಮಿಕವಾಗಿ ಖಾಲಿಯಾದ ಸ್ಥಾನಗಳನ್ನು ತುಂಬುವುದು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಂಸ್ಥೆಯ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ಪೈಕಿ ಯಾವುದೇ ಸ್ಥಾನವು ಆಕಸ್ಮಿಕವಾಗಿ ಖಾಲಿಯಾದರೆ, ಯಾರ ಸ್ಥಾನವು ಖಾಲಿಯಾಗಿ ತುಂಬಬೇಕಾಗಿ ಬಂದಿದೆಯೋ ಆ ಸದಸ್ಯನನ್ನು ಯಾವ ರೀತಿಯಲ್ಲಿ ಆರಿಸಲಾಗಿತ್ತೋ ಅದೇ ರೀತಿಯಲ್ಲಿ ಹೊಸ ಸದಸ್ಯನನ್ನು ಆರಿಸಿ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ಖಾಲಿ ಸ್ಥಾನವನ್ನು ಭರ್ತಿ ಮಾಡಿದ ವ್ಯಕ್ತಿಯು ಆತನು ಯಾವ ಸದಸ್ಯನ ಸ್ಥಾನದಲ್ಲಿ ಭರ್ತಿಯಾಗಿರುವನೋ ಆ ಸದಸ್ಯನು ಪ್ರಾಧಿಕಾರ ಅಥವಾ ಸಂಸ್ಥೆಯ ಸದಸ್ಯನಾಗಿ ಉಳಿಯುತ್ತಿದ್ದ ಬಾಕಿ ಅವಧಿಯವರೆಗೆ ಮಾತ್ರ ಸದಸ್ಯನಾಗಿರತಕ್ಕದ್ದು.

**45. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಪರಿನಿಯಮಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ನಡೆಸಲು ಅವಕಾಶ ಇರತಕ್ಕದ್ದಲ್ಲ.

**46. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮ ಮತ್ತು ಪರಿನಿಯಮಗಳ ಯಾವುದೇ ಇತರ ಉಪಬಂಧಗಳಲ್ಲಿ ಏನೇ ಇದ್ದರೂ,–

(i) ಮೊದಲ ಕುಲಪತಿ ಮತ್ತು ಸಹಕುಲಪತಿ, ಯಾರಾದರೂ ಇದ್ದರೆ, ಅವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು;

(ii) ಮೊದಲ ಕುಲಸಚಿವರನ್ನು ಮತ್ತು ಮೊದಲ ಹಣಕಾಸು ಅಧಿಕಾರಿಯವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು; ಮತ್ತು

(iii) ಮೊದಲ ವ್ಯವಸ್ಥಾಪನ ಮಂಡಳಿ, ಮೊದಲ ಹಣಕಾಸು ಸಮಿತಿ, ಮೊದಲ ಸಂಶೋಧನೆ ಮತ್ತು ಅನ್ವೇಷಣಾ ಪರಿಷತ್ತು ಹಾಗೂ ಮೊದಲ ಶೈಕ್ಷಣಿಕ ಪರಿಷತ್ತನ್ನು ಕುಲಾಧಿಪತಿಯವರು ರಚಿಸತಕ್ಕದ್ದು.

**47. ಶಾಶ್ವತ ಶಾಸನಬದ್ಧ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಕನಿಷ್ಠ ಇಪ್ಪತ್ತೈದು ಕೋಟಿ ರೂಪಾಯಿಗಳನ್ನುಳ್ಳ ಒಂದು ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು ಇದರ ಪೈಕಿ ಕನಿಷ್ಠ ಹದಿನೈದು ಕೋಟಿ ರೂಪಾಯಿಗಳು ನಗದು ರೂಪದಲ್ಲಿ ಮತ್ತು ಇನ್ನುಳಿದದ್ದು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಇರತಕ್ಕದ್ದು ಮತ್ತು ಇದನ್ನು ತಾನಾಗಿಯೆ ಹೆಚ್ಚಿಸಬಹುದಾಗಿದ್ದು ಆದರೆ ಕಡಿಮೆ ಮಾಡತಕ್ಕದ್ದಲ್ಲ.

ಪರಂತು, ಬೆಂಗಳೂರು ಅಥವಾ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊರಗಿರುವ ವಿಶ್ವವಿದ್ಯಾಲಯದ ಸಂದರ್ಭದಲ್ಲಿ ಕನಿಷ್ಠ ಹತ್ತು ಕೋಟಿ ರೂಪಾಯಿಗಳು ನಗದು ರೂಪದಲ್ಲಿರತಕ್ಕದ್ದು ಮತ್ತು ಉಳಿದ ಐದು ಕೋಟಿ ರೂಪಾಯಿಗಳು ಬ್ಯಾಂಕ್ ಗ್ಯಾರಂಟಿಯ ರೂಪದಲ್ಲಿರತಕ್ಕದ್ದು.

(2) ವಿಶ್ವವಿದ್ಯಾಲಯವು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಹಣವನ್ನು ಹೂಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯವು ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಗೆ ವರ್ಗಾವಣೆ ಮಾಡಬಹುದು. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನೂ ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(4) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಿದ ವರಮಾನದ ಶೇಕಡಾ ಎಪ್ಪತ್ತೈದರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸಗಳ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತೈದರಷ್ಟನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಯಲ್ಲಿ ಪುನ: ತೊಡಗಿಸತಕ್ಕದ್ದು.

**48. ವಿಶ್ವವಿದ್ಯಾಲಯದ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ನಿಧಿಗಳನ್ನು ಒಳಗೊಂಡ ವಿಶ್ವವಿದ್ಯಾಲಯದ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದು ಕಾಲಕಾಲಕ್ಕೆ ಸ್ವೀಕರಿಸಬಹುದಾದ ದೇಣಿಗೆಗಳು ಮತ್ತು ಇತರ ನಿಧಿಗಳನ್ನು ಒಳಗೊಂಡಿರತಕ್ಕದ್ದು.

(2) ವಿಶ್ವವಿದ್ಯಾಲಯವು, ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ವಿಧಾನದಲ್ಲಿ ವಿಶ್ವವಿದ್ಯಾಲಯದ ದತ್ತಿನಿಧಿಯನ್ನು ಹೂಡುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯ ದತ್ತಿ ನಿಧಿಯು, ವಿಶ್ವವಿದ್ಯಾಲಯವು ತನ್ನ ಸಾಮಾಜಿಕ ಧ್ಯೇಯೋದ್ದೇಶಗಳನ್ನು ನೆರವೇರಿಸುವ ಸಂದರ್ಭದಲ್ಲಿ ಮತ್ತು/ಅಥವಾ ಮುಂಗಾಣದ ಸನ್ನಿವೇಶದಲ್ಲಿ ಉದ್ಭವಿಸಬಹುದಾದ ಹಣಕಾಸು ಸವಾಲುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸ್ವಇಚ್ಛೆಯಿಂದ ನಿರ್ವಹಿಸಿಕೊಂಡು ಬರಲು ಮತ್ತು ಜವಾಬ್ದಾರಿಯಿಂದ ಹಣ ಹೂಡಿಕೆ ಮಾಡಲು ಇಚ್ಛೆಯುಳ್ಳವರಾಗಿ ಸ್ವಯಂ ವಿಧಿಸಿಕೊಂಡ ನಿಧಿಯಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಗೆ ವರ್ಗಾಯಿಸಬಹುದು. ವಿಶ್ವವಿದ್ಯಾಲಯದ ಸಮಾಪಣೆಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನು ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಬರುವ ವರಮಾನದ ಶೇಕಡಾ ಎಂಭತ್ತರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸದ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತರಷ್ಟನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಯಲ್ಲಿ ಪುನಃ ತೊಡಗಿಸತಕ್ಕದ್ದು.

**49. ಸಾಮಾನ್ಯ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಸಾಮಾನ್ಯ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯವು ವಿಧಿಸಬಹುದಾದ ಎಲ್ಲಾ ಶುಲ್ಕಗಳು;

(ii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವುದೇ ಇತರ ಮೂಲದಿಂದ ಸ್ವೀಕರಿಸಲಾದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ದೇಣಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು;

(2) ಸಾಮಾನ್ಯ ನಿಧಿಗೆ ಜಮಾ ಮಾಡುವ ನಿಧಿಗಳನ್ನು ವಿಶ್ವವಿದ್ಯಾಲಯದ ಎಲ್ಲಾ ಆವರ್ತಕ ವೆಚ್ಚಗಳನ್ನು ಭರಿಸಲು ಉಪಯೋಗಿಸಕೊಳ್ಳತಕ್ಕದ್ದು.

**50. ಅಭಿವೃದ್ಧಿ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಅಭಿವೃದ್ಧಿ ನಿಧಿಯನ್ನು ಸಹ ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ವಿದ್ಯಾರ್ಥಿಗಳಿಂದ ವಿಧಿಸಬಹುದಾದ ಅಭಿವೃದ್ಧಿ ಶುಲ್ಕಗಳು;

(ii) ವಿಶ್ವವಿದ್ಯಾಲಯದ ಅಭಿವೃದ್ಧಿಯ ಉದ್ದೇಶಗಳಿಗಾಗಿ ಯಾವುದೇ ಇತರ ಮೂಲಗಳಿಂದ ಸ್ವೀಕರಿಸಿದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ವಂತಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು; ಮತ್ತು

(v) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಲಾದ ಎಲ್ಲಾ ವರಮಾನಗಳು.

(2) ಅಭಿವೃದ್ಧಿ ನಿಧಿಗೆ ಕಾಲಕಾಲಕ್ಕೆ ಜಮಾ ಮಾಡಿದ ನಿಧಿಯನ್ನು ವಿಶ್ವವಿದ್ಯಾಲಯದ ಅಭಿವೃದ್ಧಿಗಾಗಿ ಉಪಯೋಗಿಸಕೊಳ್ಳತಕ್ಕದ್ದು.

**51. ನಿಧಿಗಳ ನಿರ್ವಹಣೆ.–** 47, 48, 49 ಮತ್ತು 50ನೇ ಪ್ರಕರಣಗಳಡಿಯಲ್ಲಿ ಸ್ಥಾಪಿಸಲಾದ ನಿಧಿಗಳನ್ನು ಪ್ರಬಂಧಕ ಮಂಡಳಿಯ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ನಿಯಂತ್ರಿಸತಕ್ಕದ್ದು ಹಾಗೂ ನಿರ್ವಹಿಸತಕ್ಕದ್ದು.

**52. ವಾರ್ಷಿಕ ವರದಿ.–** (1) ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ಅದರ ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ಪ್ರಬಂಧಕ ಮಂಡಳಿಯು ವಾರ್ಷಿಕ ವರದಿಯನ್ನು ತನ್ನ ಸಭೆಯಲ್ಲಿ ಪರಿಗಣಿಸತಕ್ಕದ್ದು ಹಾಗೂ ಅದನ್ನು ಮಾರ್ಪಾಡುಗಳೊಡನೆ ಅಥವಾ ಮಾರ್ಪಾಡುಗಳಿಲ್ಲದೆ ಅನುಮೋದಿಸಬಹುದು.

(3) ಪ್ರಬಂಧಕ ಮಂಡಳಿಯು ಸೂಕ್ತವಾಗಿ ಅನುಮೋದಿಸಿದ ವಾರ್ಷಿಕ ವರದಿಯ ಒಂದು ಪ್ರತಿಯನ್ನು ಪ್ರತಿವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ಡಿಸೆಂಬರ್ 31ಕ್ಕೆ ಮೊದಲು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**53. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ ಪತ್ರ ಮತ್ತು ಜಮಾ ಖರ್ಚು ಪಟ್ಟಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಎಲ್ಲಾ ಮೂಲಗಳಿಂದ ಪ್ರಾಪ್ತವಾಗುವ ಅಥವಾ ಸ್ವೀಕರಿಸಲಾಗುವ ಎಲ್ಲಾ ನಿಧಿಗಳು ಹಾಗೂ ವಿತರಿಸಿದ ಅಥವಾ ಸಂದಾಯ ಮಾಡಿದ ಎಲ್ಲಾ ಮೊಬಲಗುಗಳನ್ನು ವಿಶ್ವವಿದ್ಯಾಲಯವು ನಿರ್ವಹಿಸುವ ಲೆಕ್ಕಪತ್ರದಲ್ಲಿ ನಮೂದಿಸತಕ್ಕದ್ದು.

**(2) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಪ್ರತಿ ವರ್ಷವೂ ಭಾರತದ ಚಾರ್ಟೆಡ್ ಅಕೌಂಟೆಂಟ್‌ಗಳ ಸಂಸ್ಥೆಯ ಸದಸ್ಯರಾಗಿರುವ ಒಬ್ಬ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.**

(3) ವಾರ್ಷಿಕ ಲೆಕ್ಕಪತ್ರಗಳು ಮತ್ತು ಜಮಾ ಖರ್ಚು ಪಟ್ಟಿಯನ್ನು ಲೆಕ್ಕಪರಿಶೋಧನಾ ವರದಿಯೊಡನೆ, ಪ್ರತಿ ವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ನವೆಂಬರ್ 30ಕ್ಕೆ ಮೊದಲು ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(4) ವಾರ್ಷಿಕ ಲೆಕ್ಕಪತ್ರಗಳು, ಜಮಾಖರ್ಚು ಪಟ್ಟಿ ಮತ್ತು ಲೆಕ್ಕಪರಿಶೋಧನಾ ವರದಿಯನ್ನು ಪ್ರಬಂಧಕ ಮಂಡಳಿಯು ತನ್ನ ಸಭೆಯಲ್ಲಿ ಪರ್ಯಾಲೋಚಿಸತಕ್ಕದ್ದು ಮತ್ತು ಪ್ರಬಂಧಕ ಮಂಡಳಿಯು ಅದನ್ನು ತನ್ನ ಅಭಿಪ್ರಾಯಗಳೊಡನೆ ಸಂದರ್ಶಕರಿಗೆ ಹಾಗೂ ಸರ್ಕಾರಕ್ಕೆ ಪ್ರತಿ ವರ್ಷದ ಡಿಸೆಂಬರ್ 31ಕ್ಕೆ ಮೊದಲು ಕಳುಹಿಸತಕ್ಕದ್ದು.

(5) ಲೆಕ್ಕಪರಿಶೋಧಕರ ವರದಿಯಲ್ಲಿ ಯಾವುದೇ ಮುಖ್ಯ ಬದಲಾವಣೆ ಇದ್ದ ಸಂದರ್ಭದಲ್ಲಿ, ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಕ್ಕೆ ನಿರ್ದೇಶನಗಳನ್ನು ಹೊರಡಿಬಹುದು ಮತ್ತು ಅಂಥ ನಿರ್ದೇಶನಗಳು ವಿಶ್ವವಿದ್ಯಾಲಯದ ಮೇಲೆ ಬಂಧನಕಾರಿಯಾಗಿರತಕ್ಕದ್ದು.

**54. ವಿಶ್ವವಿದ್ಯಾಲಯ ದಾಖಲೆಗಳ ರುಜುವಾತಿನ ಮಾದರಿ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಮಿತಿಯ ಯಾವುದೇ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ ಅಥವಾ ಗೊತ್ತುವಳಿಯು ಅಥವಾ ವಿಶ್ವವಿದ್ಯಾಲಯದ ಸ್ವಾಧೀನದಲ್ಲಿರುವ ಇತರ ದಾಖಲೆಗಳು ಅಥವಾ ವಿಶ್ವವಿದ್ಯಾಲಯವು ಯುಕ್ತವಾಗಿ ನಿರ್ವಹಿಸುವ ಯಾವುದೇ ರಿಜಿಸ್ಟರ್‌ನಲ್ಲಿಯ ಯಾವುದೇ ನಮೂದುಗಳ ಪ್ರತಿಯನ್ನು, ಅದರ ಮೇಲೆ ಕುಲಸಚಿವರು ಪ್ರಮಾಣೀಕರಿಸಿದ್ದರೆ, ಅದನ್ನು ಅಂಥ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ, ಗೊತ್ತುವಳಿ ಅಥವಾ ದಾಖಲೆ ಅಥವಾ ರಿಜಿಸ್ಟರ್‌ನಲ್ಲಿ ಇರುವ ನಮೂದನ್ನು ಮೇಲ್ನೋಟದ ಸಾಕ್ಷ್ಯವೆಂಬುದಾಗಿ ಸ್ವೀಕರಿಸತಕ್ಕದ್ದು ಮತ್ತು ವಿಷಯಗಳ ಸಾಕ್ಷಿಯಾಗಿ ಅಂಗೀಕರಿಸತಕ್ಕದ್ದು ಹಾಗೂ ಮೂಲ ದಾಖಲೆಗಳನ್ನೇ ಸಲ್ಲಿಸಿದ್ದರೆ ಅದನ್ನು, ದಾಖಲಿಸಿರುವ ವಿಷಯಗಳು ಮತ್ತು ವಹಿವಾಟುಗಳ ಸಾಕ್ಷ್ಯವಾಗಿ ಅಂಗೀಕರಿಸಲಾಗುತ್ತಿತ್ತೋ, ಅದೇ ರೀತಿಯಲ್ಲಿ ಇವನ್ನೂ ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು.

**55. ನಿರ್ದೇಶನಗಳನ್ನು ನೀಡಲು ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಥವಾ ಅದರಲ್ಲಿ ಇರುವ ಯಾವುವೇ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳು ಅಥವಾ ಆದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿರ್ದೇಶನ ನೀಡುವುದು ಅವಶ್ಯವೆಂದು ಅಥವಾ ಉಚಿತವೆಂದು ಅಭಿಪ್ರಾಯಪಟ್ಟಲ್ಲಿ ಅದು ಅಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿ ಅಥವಾ ಸಂದರ್ಭಾನುಸಾರವಾಗಿ ವ್ಯವಸ್ಥಾಪನಾ ಮಂಡಳಿಯು ಅಂಥ ಪ್ರತಿಯೊಂದು ನಿರ್ದೇಶನವನ್ನು ಪಾಲಿಸತಕ್ಕದ್ದು.

**56. ದಂಡಗಳು.–** (1) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿತವಾದ ನಿಯಮಗಳು ಉಪಬಂಧಗಳನ್ನು ಅಥವಾ ಯಾವುದೇ ಪರೀಕ್ಷಾ ವಿಷಯಗಳನ್ನು ಅಥವಾ ಪದವಿಗಳನ್ನು ನೀಡುವುದಕ್ಕೆ ಅಥವಾ ಅಂಕಪಟ್ಟಿಗಳನ್ನು ನೀಡುವುದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಉಲ್ಲಂಘನೆಗಳನ್ನು ಮಾಡುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಐವತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಹತ್ತು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಆರು ತಿಂಗಳ ಅವಧಿಗಿಂತ ಕಡಿಮೆಯಲ್ಲದ ಆದರೆ ಎರಡು ವರ್ಷಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು:

ಪರಂತು, ವಿಶ್ವವಿದ್ಯಾಲಯವೂ ಸಹ ಒಳಗೊಂಡಿರುವಲ್ಲಿ, ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ಈ ಅಧಿನಿಯಮದ ಅಡಿಯಲ್ಲಿ ಮಂಜೂರು ಮಾಡಲಾದ ಅನುಮತಿ ಪತ್ರವನ್ನು ಹಿಂತೆಗೆದುಕೊಳ್ಳತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿಯ ದಂಡವನ್ನು ಇತರ ಯಾವುದೇ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಲಾದ ದಂಡಕ್ಕೆ ಬಾಧಕವಾಗದಂತೆ ವಿಧಿಸಬಹುದು.

**20. ಹಣಕಾಸು ಅಧಿಕಾರಿ.–** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು, ಪರಿನಿಯಮಗಳ ಮೂಲಕ ಪ್ರದತ್ತಗೊಳಿಸಬಹುದಾದ ಅಂಥ ವಿಧಾನದಲ್ಲಿ ಹಣಕಾಸು ಅಧಿಕಾರಿಯನ್ನು ನೇಮಕ ಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**21. ಇತರ ಅಧಿಕಾರಿಗಳು.–** ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ ನೇಮಕಾತಿಯ ವಿಧಾನ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಕರ್ತವ್ಯಗಳು ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**22. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವುಗಳು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(i) ಪ್ರಬಂಧಕ ಮಂಡಳಿ;

(ii) ವ್ಯವಸ್ಥಾಪನಾ ಮಂಡಳಿ;

(iii) ಶೈಕ್ಷಣಿಕ ಪರಿಷತ್ತು;

(iv) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು;

(v) ಹಣಕಾಸು ಸಮಿತಿ; ಮತ್ತು

(vi) ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಪರಿನಿಯಮಗಳ ಮೂಲಕ ಘೋಷಿಸಬಹುದಾದ ಅಂಥ ಇತರ ಪ್ರಾಧಿಕಾರಗಳು.

**23. ಪ್ರಬಂಧಕ ಮಂಡಳಿ ಮತ್ತು ಇದರ ಅಧಿಕಾರಗಳು.–** (1) ಪ್ರಬಂಧಕ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು – ಅಧ್ಯಕ್ಷರು;

(ii) ಕುಲಪತಿಯವರು – ಸದಸ್ಯರು;

(iii) ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(iv) ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(v) ರಾಜ್ಯ ಸರ್ಕಾರವು ನಾಮ ನಿರ್ದೇಶನ ಮಾಡಿದ ಆಡಳಿತವನ್ನು ಒಳಗೊಂಡಂತೆ ವ್ಯವಸ್ಥಾಪನೆ, ಹಣಕಾಸು ಅಥವಾ ಯಾವುದೇ ಇತರ ವಿಶೇಷ ಕ್ಷೇತ್ರದಲ್ಲಿನ ಒಬ್ಬರು ತಜ್ಞರು;

(vi) ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶಿಸಿದ ಇಬ್ಬರು ವ್ಯಕ್ತಿಗಳು ಅವರ ಪೈಕಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(vii) ಸಹ ಕುಲಪತಿಯವರು ಮತದಾನದ ಹಕ್ಕಿಲ್ಲದ ಸದಸ್ಯರಾಗಿರತಕ್ಕದ್ದು;

(viii) ವಿಶ್ವವಿದ್ಯಾಲಯ ಅನುದಾನ ಆಯೋಗದ ನಾಮನಿರ್ದೇಶಿತ ಒಬ್ಬ ಸುಪ್ರಸಿದ್ಧ ಶಿಕ್ಷಣ ತಜ್ಞರು.

(2) ಕುಲಸಚಿವರು ಪ್ರಬಂಧಕ ಮಂಡಳಿಯ ಮತ ದಾನದ ಹಕ್ಕಿರದ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ಪ್ರಬಂಧಕ ಮಂಡಳಿಯ ಸದಸ್ಯರ ಪದಾವಧಿ, ಸರ್ಕಾರದಿಂದ ನಾಮನಿರ್ದೇಶಿತರಾದ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ನೇಮಕಾತಿ, ನವೀಕರಣ ಮತ್ತು ತೆಗೆದುಹಾಕುವುದು ಮುಂತಾದವುಗಳು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಲ್ಲಿ ಕುಲಾಧಿಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಗೈರುಹಾಜರಿಯಲ್ಲಿ ಕುಲಾಧಿಪತಿಯವರಿಂದ ನಾಮನಿರ್ದೇಶಿತರಾದ ಯಾರಾದರೂ ಒಬ್ಬರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಅಂಥ ಸಭೆಯ ಅಧ್ಯಕ್ಷತೆಯನ್ನು ವಹಿಸುವುದಕ್ಕೆ ಕುಲಾಧಿಪತಿಯವರು ಯಾವೊಬ್ಬ ವ್ಯಕ್ತಿಯನ್ನೂ ನಾಮನಿರ್ದೇಶನ ಮಾಡಿರದಿದ್ದಲ್ಲಿ, ಸಭೆಯಲ್ಲಿ ಹಾಜರಿರುವ ಸದಸ್ಯರು ಸರಳ ಬಹುಮತದ ಮೂಲಕ ಅವರುಗಳ ಪೈಕಿಯಿಂದಲೇ ಆ ಸಭೆಗೆ ಮಾತ್ರವೇ ಅಧ್ಯಕ್ಷನನ್ನು ಚುನಾಯಿಸತಕ್ಕದ್ದು.

(5) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಿಗೆ, ಅಂಥ ಸಭೆಯಲ್ಲಿ ಹಾಜರಾಗುವ ಮತ್ತು ಮತದಾನ ನೀಡುವ ಮೂರು ಜನ ಸದಸ್ಯರು ಗಣಪೂರ್ತಿ (ಕೋರಂ) ಆಗಿರತಕ್ಕದ್ದು:

ಪರಂತು, ಪ್ರಬಂಧಕ ಮಂಡಳಿಯ ಯಾವುದೇ ಸಭೆಯ ಕೋರಂ ಪೂರ್ಣವಾಗಬೇಕಾದರೆ ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು ಹಾಜರಿರುವುದು ಮತ್ತು ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ನಾಮನಿರ್ದೇಶಿತರು ಹಾಜರಾಗದೇ ಇದ್ದಾಗ ಕುಲಪತಿಯವರು ಹಾಜರಿರುವುದು ಯಾವಾಗಲೂ ಅವಶ್ಯವಾಗಿರತಕ್ಕದ್ದು.

(6) ಪ್ರಬಂಧಕ ಮಂಡಳಿಯು ವಿಶ್ವವಿದ್ಯಾಲಯದ ಪ್ರಧಾನ ಪ್ರಬಂಧಕ ಸಂಸ್ಥೆಯಾಗಿರತಕ್ಕದ್ದು ಮತ್ತು ಅದು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಶಾಸನಬದ್ಧ ಲೆಕ್ಕಪರಿಶೋಧಕರನ್ನು ನೇಮಕಗೊಳಿಸುವುದು;

(ii) ವಿಶ್ವವಿದ್ಯಾಲಯವು ಅನುಸರಿಸಬೇಕಾದ ಕಾರ್ಯನೀತಿಗಳನ್ನು ರಚಿಸುವುದು;

(iii) ಈ ಅಧಿನಿಯಮದ ಅಥವಾ ಪರಿನಿಯಮಗಳ ಅಥವಾ ನಿಯಮಗಳ ಉಪಬಂಧಗಳಿಗೆ ಅನುಗುಣವಾಗಿ ಇರದ ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ತೀರ್ಮಾನಗಳನ್ನು ಪುನರೀಕ್ಷಿಸುವುದು;

(iv) ವಿಶ್ವವಿದ್ಯಾಲಯದ ಆಯವ್ಯಯ ಮತ್ತು ವಾರ್ಷಿಕ ವರದಿಗಳನ್ನು ಅನುಮೋದಿಸುವುದು;

(v) ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸುವುದು ಅಥವಾ ಈಗಾಗಲೇ ಇರುವ ಪರಿನಿಯಮಗಳು ಮತ್ತು ನಿಯಮಗಳನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

(vi) ವಿಶ್ವವಿದ್ಯಾಲಯವನ್ನು ಸ್ವಯಂಸಮಾಪನಗೊಳಿಸುವ ನಿರ್ಧಾರವನ್ನು ತೆಗೆದುಕೊಳ್ಳುವುದು;

(vii) ಸರ್ಕಾರಕ್ಕೆ ಸಲ್ಲಿಸುವ ಪ್ರಸ್ತಾವಗಳನ್ನು ಅನುಮೋದಿಸುವುದು;

(viii) ಶುಲ್ಕ ನಿಯಂತ್ರಣ ಸಮಿತಿಗೆ ಮೂವರು ಸದಸ್ಯರನ್ನು ನಾಮನಿರ್ದೇಶನ ಮಾಡುವುದು;

(ix) ವಿಶ್ವವಿದ್ಯಾಲಯದ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕೆ ಅಪೇಕ್ಷಣೀಯವೆಂದು ಕಂಡುಬರುವಂಥ ತೀರ್ಮಾನಗಳನ್ನು ಮತ್ತು ಕ್ರಮಗಳನ್ನು ಕೈಗೊಳ್ಳುವುದು.

(7) ಪ್ರಬಂಧಕ ಮಂಡಳಿಯು ಒಂದು ವರ್ಷದಲ್ಲಿ ಕನಿಷ್ಠ ಮೂರು ಸಲ ಸಭೆ ಸೇರತಕ್ಕದ್ದು.

(8) ಪ್ರಬಂಧಕ ಮಂಡಳಿಯು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಸಮಯ ಮತ್ತು ಸ್ಥಳದಲ್ಲಿ ಸಭೆ ಸೇರತಕ್ಕದ್ದು.

**24. ವ್ಯವಸ್ಥಾಪನಾ ಮಂಡಳಿ.–** (1) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಗಳು;

(ii) ಸಹಕುಲಪತಿಗಳು;

(iii) ಕುಲಸಚಿವರು;

(iv) ಪ್ರಾಯೋಜಕ ಸಂಸ್ಥೆಯ ಇಬ್ಬರು ನಾಮನಿರ್ದೇಶಿತರು;

(v) ಕುಲಪತಿಗಳು ನಾಮನಿರ್ದೇಶಿಸಬಹುದಾದ ವಿದ್ಯಾಲಯಗಳ ಇಬ್ಬರು ಡೀನ್‌ಗಳು;

(2) ಕುಲಪತಿಯವರು ವ್ಯವಸ್ಥಾಪನಾ ಮಂಡಳಿಯ ಅಧ್ಯಕ್ಷರಾಗಿರತಕ್ಕದ್ದು ಮತ್ತು ಕುಲಸಚಿವರು ವ್ಯವಸ್ಥಾಪನಾ ಮಂಡಳಿಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ವ್ಯವಸ್ಥಾಪನಾ ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

(4) ವ್ಯವಸ್ಥಾಪನಾ ಮಂಡಳಿಯ ಎಲ್ಲಾ ಸಭೆಗಳಲ್ಲಿ ಯಾವಾಗಲೂ ಕುಲಪತಿಯವರು ಅಧ್ಯಕ್ಷತೆ ವಹಿಸತಕ್ಕದ್ದು ಹಾಗೂ ಕುಲಪತಿಯವರ ಗೈರುಹಾಜರಿಯಲ್ಲಿ ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶನ ಮಾಡಿದವರು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪ್ರಾಯೋಜಕ ಸಂಸ್ಥೆಯು ಯಾರನ್ನೂ ನಾಮನಿರ್ದೇಶನ ಮಾಡದೇ ಇದ್ದ ಸಂದರ್ಭದಲ್ಲಿ ಸಭೆಯಲ್ಲಿ ಹಾಜರಿರುವ ಸದಸ್ಯರು ಚುನಾಯಿಸಿದ ಯಾವುದೇ ಇತರ ಸದಸ್ಯರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(5) ವ್ಯವಸ್ಥಾಪನಾ ಮಂಡಳಿಯ ಸಭೆಯಲ್ಲಿ ಯಾವುದೇ ವಿಷಯವನ್ನು ಕುರಿತು ವಿವಾದ ಉಂಟಾದಲ್ಲಿ ಸದರಿ ವಿಷಯವನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿಷಯದ ಬಗ್ಗೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**25. ಶೈಕ್ಷಣಿಕ ಪರಿಷತ್ತು.**–(1) ಶೈಕ್ಷಣಿಕ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಯವರು – ಅಧ್ಯಕ್ಷರು

(ii) ಸಹಕುಲಪತಿಯವರು – ಸದಸ್ಯರು

(iii) ಕುಲಸಚಿವರು – ಕಾರ್ಯದರ್ಶಿಗಳು

(iv) ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

(2) ಶೈಕ್ಷಣಿಕ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಶೈಕ್ಷಣಿಕ ಸಂಸ್ಥೆಯಾಗಿರತಕ್ಕದ್ದು ಮತ್ತು ಈ ಅಧಿನಿಯಮದ, ಪರಿನಿಯಮಗಳ, ವಿನಿಯಮಗಳ ಹಾಗೂ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**26. ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು.–** (1) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಸಂಶೋಧನಾ ಮತ್ತು ಅನ್ವೇಷಣಾ ಸಮಿತಿಯಾಗಿರತಕ್ಕದ್ದು ಹಾಗೂ ಸಂಶೋಧನಾ ಕ್ಷೇತ್ರಗಳ ಆದ್ಯತೆಯೂ ಒಳಗೊಂಡಂತೆ, ವಿಶ್ವವಿದ್ಯಾಲಯವು ಕೈಗೊಳ್ಳಬೇಕಾದ ಸಂಶೋಧನೆಯ ಬಗ್ಗೆ ಒಂದು ವ್ಯಾಪಕವಾದ ಪರಿಪೂರ್ಣ ಭವಿಷ್ಯದ್ ದೃಷ್ಟಿಯನ್ನು ಒದಗಿಸತಕ್ಕದ್ದು. ಈ ಪರಿಷತ್ತು, ಈ ಅಧಿನಿಯಮದ, ಪರಿನಿಯಮಗಳ, ವಿನಿಯಮಗಳ ಮತ್ತು ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಸಂಶೋಧನೆ ಮತ್ತು ಅನ್ವೇಷಣಾ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಯವರು – ಅಧ್ಯಕ್ಷರು

(ii) ಸಹಕುಲಪತಿಯವರು – ಸದಸ್ಯರು

(iii) ಸಂಶೋಧನೆಯ ಡೀನ್ – ಕಾರ್ಯದರ್ಶಿ

(iv) ಅನ್ವೇಷಣಾ ವಿಭಾಗದ ಮುಖ್ಯಸ್ಥರು – ಸದಸ್ಯರು

(v) ಎಲ್ಲಾ ವ್ಯಾಸಂಗ ವಿಭಾಗಗಳ ಡೀನ್‌ಗಳು – ಸದಸ್ಯರು ಮತ್ತು

(vi) ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

**27. ಹಣಕಾಸು ಸಮಿತಿ.–** (1) ಹಣಕಾಸು ಸಮಿತಿ ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು ಅಥವಾ ಅವರ ನಾಮನಿರ್ದೇಶಿತರು – ಅಧ್ಯಕ್ಷರು

(ii) ಕುಲಪತಿಯವರು – ಸದಸ್ಯರು

(iii) ಕುಲಸಚಿವರು – ಸದಸ್ಯರು

(iv) ಹಣಕಾಸು ಅಧಿಕಾರಿ – ಕಾರ್ಯದರ್ಶಿ

(v) ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು – ಸದಸ್ಯರು; ಮತ್ತು

(vi) ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

(2) ಹಣಕಾಸು ಸಮಿತಿಯು ಹಣಕಾಸಿನ ವಿಷಯಗಳನ್ನು ಕೈಗೊಳ್ಳುವ ವಿಶ್ವವಿದ್ಯಾಲಯದ ಪ್ರಧಾನ ಹಣಕಾಸು ಸಂಸ್ಥೆಯಾಗಿರತಕ್ಕದ್ದು ಹಾಗೂ ಅದು ಈ ಅಧಿನಿಯಮ, ನಿಯಮಗಳು ಮತ್ತು ಪರಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಹಣಕಾಸು ವಿಷಯಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**28. ಇತರ ಪ್ರಾಧಿಕಾರಗಳು.–** ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಹಾಗೂ ಪ್ರಕಾರ್ಯಗಳು ಪರಿನಿಯಮಗಳಿಂದ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**29. ಒಂದು ಪ್ರಾಧಿಕಾರದ ಅಥವಾ ಸಂಸ್ಥೆಯ ಸದಸ್ಯತ್ವಕ್ಕೆ ಅನರ್ಹತೆ.–** ವಿಶ್ವವಿದ್ಯಾಲಯದ ಸಂಸ್ಥೆಗಳ ಯಾವುವೇ ಪ್ರಾಧಿಕಾರಗಳ ಒಬ್ಬ ವ್ಯಕ್ತಿಯು,–

(ಎ) ಅಸ್ವಸ್ಥ ಚಿತ್ತನಾಗಿದ್ದು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲ್ಪಟ್ಟಿದ್ದರೆ;

(ಬಿ) ಅವಿಮುಕ್ತ ದಿವಾಳಿಯಾಗಿದ್ದರೆ;

(ಸಿ) ನೈತಿಕ ಅಧ:ಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದರೆ;

(ಡಿ) ಖಾಸಗಿ ಬೋಧನಾ ತರಗತಿಗಳನ್ನು ನಡೆಸುತ್ತಿದ್ದರೆ ಅಥವಾ ಸ್ವತ: ನಿರತನಾಗಿದ್ದರೆ;

(ಇ) ಯಾವುದೇ ವಿಧದಲ್ಲಿ, ಎಲ್ಲಿಯೇ, ಯಾವುದೇ ಪರೀಕ್ಷೆಯನ್ನು ನಡೆಸುವಲ್ಲಿ ಅನುಚಿತ ಅಭ್ಯಾಸದಲ್ಲಿ ತೊಡಗಿದ್ದಕ್ಕಾಗಿ ಅಥವಾ ಉತ್ತೇಜಿಸಿದ್ದಕ್ಕಾಗಿ ದಂಡಿತನಾಗಿದ್ದರೆ;

(ಎಫ್) ಪ್ರಾಯೋಜಿತ ಸಂಸ್ಥೆಯು ಯಾವುವೇ ಪ್ರಾಧಿಕಾರಗಳ ಅಥವಾ ಸಂಸ್ಥೆಗಳ ಯಾವೊಬ್ಬ ಸದಸ್ಯನನ್ನು ಆ ಪದವನ್ನು ಹೊಂದಿರುವುದಕ್ಕೆ ಅರ್ಹನಲ್ಲನೆಂದು ಲಿಖಿತದಲ್ಲಿ ಅಭಿಪ್ರಾಯ ನೀಡಿದಾಗಲೆಲ್ಲಾ,

–ಸದಸ್ಯನಾಗಿರುವುದಕ್ಕೆ ಅನರ್ಹನಾಗತಕ್ಕದ್ದು.

**30. ಖಾಲಿಸ್ಥಾನ ಇರುವ ಕಾರಣದಿಂದಾಗಿ ವ್ಯವಹರಣೆಗಳು ಅಸಿಂಧುವಾಗತಕ್ಕದ್ದಲ್ಲ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಕಾರ್ಯ ಅಥವಾ ವ್ಯವಹರಣೆಗಳು ಕೇವಲ ಅದರಲ್ಲಿ ಯಾವುದೇ ಖಾಲಿಸ್ಥಾನ ಇದೆ ಎಂಬ ಕಾರಣದಿಂದ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆ ಎಂಬ ಕಾರಣದಿಂದ ಮಾತ್ರವೇ ಅಸಿಂಧುವಾಗತಕ್ಕದ್ದಲ್ಲ.

**31. ಕಾರ್ಯಸೂಚಿ ವಿಷಯಗಳ ಬಗ್ಗೆ ಉಪಬಂಧಗಳು.–** (1) ಯಾವುವೇ ಕಾರ್ಯಸೂಚಿ ವಿಷಯಗಳನ್ನು ಕುಲಾಧಿಪತಿಯವರ ಪೂರ್ವಾನುಮೋದನೆಯನ್ನು ಪಡೆಯದೇ ಪ್ರಬಂಧಕ ಮಂಡಳಿಯ ಅಥವಾ ಕಾರ್ಯಕಾರಿ ಪರಿಷತ್ತು ಅಥವಾ ಯಾವುದೇ ಸಮಿತಿಯ ಸಭೆಗಳ ಕಾರ್ಯಸೂಚಿ ವಿಷಯಗಳಲ್ಲಿ ಸೇರಿಸತಕ್ಕದ್ದಲ್ಲ ಅಥವಾ ಚರ್ಚೆಗೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ತೀರ್ಮಾನಿಸತಕ್ಕದ್ದಲ್ಲ.

(2) ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಪಾಲಿಸದೆ ಇರುವ ಸಂದರ್ಭದಲ್ಲಿ, ಕುಲಾಧಿಪತಿಯವರು ವಿಶ್ವವಿದ್ಯಾಲಯದ ಯಾವುದೇ ಪದಾಧಿಕಾರಿ ಅಥವಾ ಸಂಸ್ಥೆಯು ತೆಗೆದುಕೊಂಡ ಎಲ್ಲಾ ತೀರ್ಮಾನಗಳನ್ನು ವಿಪರ್ಯಯಗೊಳಿಸುವ ಮೂಲಕ ಪರಿಹಾರ ಕ್ರಮಗಳನ್ನು ಕೂಡಲೇ ಕೈಗೊಳ್ಳಲು ಅಧಿಕಾರವನ್ನು ಎಲ್ಲಾ ಸಮಯದಲ್ಲಿ ಹೊಂದಿರತಕ್ಕದ್ದು ಮತ್ತು ಅಂಥ ಪರಿಹಾರ ಕ್ರಮದ ಪರಿಣಾಮವಾಗಿ ಅಧಿನಿಯಮದ ಉಪಬಂಧಗಳನ್ನು ಪಾಲಿಸದೇ ವಿಶ್ವವಿದ್ಯಾಲಯದ ಪದಾಧಿಕಾರಿ ಅಥವಾ ಸಂಸ್ಥೆಯು ಕೈಗೊಂಡಿದ್ದ ಎಲ್ಲಾ ಅಂಥ ಕ್ರಮಗಳು, ಮೊದಲಿನಿಂದಲೂ ಶೂನ್ಯ ಮತ್ತು ಅಕೃತ ಎಂದು ಭಾವಿಸತಕ್ಕದ್ದು ಹಾಗೂ ತತ್ಪರಿಣಾಮವಾಗಿ, ಉಪಬಂಧ ಪಾಲಿಸದೇ ಇದ್ದ ವಿಷಯ ಅಥವಾ ನಿರ್ಧಾರದ ಸಂಬಂಧದಲ್ಲಿ ಅದಕ್ಕೆ ಮುಂಚೆ ಇದ್ದ ವಸ್ತುಸ್ಥಿತಿಯೇ ಮುಂದುವರಿಯತಕ್ಕದ್ದು.

## ಅಧ್ಯಾಯ – V

## ಪರಿನಿಯಮಗಳು ಮತ್ತು ವಿನಿಯಮಗಳು

**32. ಪರಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಪರಿನಿಯಮಗಳು ವಿಶ್ವವಿದ್ಯಾಲಯಕ್ಕೆ ಮತ್ತು ಸಿಬ್ಬಂದಿಗೆ ಸಂಬಂಧಿಸಿದ ಎಲ್ಲಾ ಅಥವಾ ಯಾವುದೇ ವಿಷಯಕ್ಕೆ ಈ ಕೆಳಗಿನಂತೆ ಉಪಬಂಧ ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಕಾರ್ಯಕಲಾಪಗಳನ್ನು ನಡೆಸುವ ಮತ್ತು ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸದಿರುವ ಸಂಸ್ಥೆಗಳ ರಚನೆಯ ಕಾರ್ಯವಿಧಾನ;

(ii) ಶಾಶ್ವತ ಶಾಸನಬದ್ಧ ದತ್ತಿ ನಿಧಿ, ವಿಶ್ವವಿದ್ಯಾಲಯ ದತ್ತಿ ನಿಧಿ, ಸಾಮಾನ್ಯ ನಿಧಿ ಹಾಗೂ ಅಭಿವೃದ್ಧಿ ನಿಧಿಗಳ ನಿರ್ವಹಣೆ;

(iii) ಕುಲಪತಿಗಳು, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿ ಇವರ ನೇಮಕಾತಿಯ ನಿಬಂಧನೆಗಳು ಹಾಗೂ ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಪ್ರಕಾರ್ಯಗಳು;

(iv) ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ, ಅಧ್ಯಾಪಕರ ಮತ್ತು ನೌಕರರ ನೇಮಕಾತಿ ವಿಧಾನ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(v) ವಿಶ್ವವಿದ್ಯಾಲಯ ಹಾಗೂ ಅದರ ಅಧಿಕಾರಿಗಳು, ವ್ಯಾಸಂಗ ವಿಭಾಗದ (ಫ್ಯಾಕಲ್ಟಿ) ಸದಸ್ಯರು, ನೌಕರರು ಹಾಗೂ ವಿದ್ಯಾರ್ಥಿಗಳ ನಡುವೆ ಉಂಟಾದ ವಿವಾದಗಳನ್ನು ಪರಿಹರಿಸುವ ಕಾರ್ಯವಿಧಾನ;

(vi) ವಿಭಾಗಗಳು ಮತ್ತು ವ್ಯಾಸಂಗ ವಿಭಾಗಗಳ (ಫ್ಯಾಕಲ್ಟಿಗಳ) ಸೃಜನೆ, ರದ್ದತಿ ಅಥವಾ ಪುನಾರಚನೆ;

(vii) ಇತರ ವಿಶ್ವವಿದ್ಯಾಲಯಗಳು ಅಥವಾ ಉನ್ನತ ಕಲಿಕಾ ಸಂಸ್ಥೆಗಳ ಜೊತೆಯಲ್ಲಿ ಸಹಕರಿಸಬೇಕಾದ ರೀತಿ;

(viii) ಗೌರವ ಪದವಿಗಳ ನೀಡಿಕೆಯ ಕಾರ್ಯವಿಧಾನ;

(ix) ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿವೇತನ ಮಂಜೂರಾತಿಗೆ ಸಂಬಂಧಿಸಿದ ಉಪಬಂಧಗಳು;

(x) ವಿವಿಧ ವ್ಯಾಸಂಗ ಕ್ರಮಗಳಲ್ಲಿನ ಸೀಟುಗಳ ಸಂಖ್ಯೆಗೆ ಸಂಬಂಧಿಸಿದ ಕಾರ್ಯನೀತಿಗಳು ಮತ್ತು ಅಂಥ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಕಾರ್ಯವಿಧಾನ;

(xi) ವಿವಿಧ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳಿಗೆ ವಿಧಿಸಬಹುದಾದ ಶುಲ್ಕಕ್ಕೆ ಸಂಬಂಧಿಸಿದ ಕಾರ್ಯನೀತಿ;

(xii) ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಉಚಿತ ಶಿಕ್ಷಣ, ಪದಕಗಳು ಹಾಗೂ ಬಹುಮಾನಗಳನ್ನು ಪ್ರಾರಂಭಿಸುವುದು;

(xiii) ಪ್ರಬಂಧಕ ಮಂಡಳಿಯು ನಿರ್ಧರಿಸಬಹುದಾದ ಅಥವಾ ಈ ಅಧಿನಿಯಮದ ಅಡಿಯಲ್ಲಿ ಪರಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬೇಕಾದ ಅಗತ್ಯತೆಯುಳ್ಳ ಯಾವುದೇ ಇತರ ವಿಷಯಗಳು.

**33. ಪರಿನಿಯಮಗಳ ರಚನೆ ವಿಧಾನ.–** (1) ವ್ಯವಸ್ಥಾಪನಾ ಮಂಡಳಿಯು ರಚಿಸಿದ ಮೊದಲ ಶಾಸನಗಳನ್ನು ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ವ್ಯವಸ್ಥಾಪನಾ ಮಂಡಳಿಯು ಸಲ್ಲಿಸಿದ ಮೊದಲ ಪರಿನಿಯಮಗಳನ್ನು ಪ್ರಬಂಧಕ ಮಂಡಳಿಯು ಪರಿಗಣಿಸತಕ್ಕದ್ದು ಹಾಗೂ ತಾನು ಅವಶ್ಯವೆಂದು ಭಾವಿಸಬಹುದಾದ ಅಂಥ ಮಾರ್ಪಾಡುಗಳು, ಯಾವುದಾದರು ಇದ್ದಲ್ಲಿ, ಅವುಗಳೊಡನೆ ತನ್ನ ಅನುಮೋದನೆಯನ್ನು ನೀಡತಕ್ಕದ್ದು.

(3) ವಿಶ್ವವಿದ್ಯಾಲಯವು, ಪ್ರಬಂಧಕ ಮಂಡಳಿಯು ಅನುಮೋದಿಸಿದ ಮೊದಲ ಪರಿನಿಯಮಗಳನ್ನು ವಿಶ್ವವಿದ್ಯಾಲಯದ ಅಧಿಸೂಚನೆಯಲ್ಲಿ ಪ್ರಕಟಿಸತಕ್ಕದ್ದು ಮತ್ತು ತದನಂತರ ಮೊದಲ ಪರಿನಿಯಮಗಳ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**34. ಪರಿನಿಯಮಗಳ ತಿದ್ದುಪಡಿಯ ಅಧಿಕಾರ.–** ಪ್ರಬಂಧಕ ಮಂಡಳಿಯು ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸಬಹುದು ಅಥವಾ ಪರಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ಅವನ್ನು ನಿರಸನಗೊಳಿಸಬಹುದು.

**35. ವಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ವಿನಿಯಮಗಳು ಈ ಮುಂದಿನ ವಿಷಯಗಳಿಗೆ ಉಪಬಂಧಗಳನ್ನು ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ ಮತ್ತು ವಿದ್ಯಾರ್ಥಿ ಪಟ್ಟಿಯಲ್ಲಿ ಅವರುಗಳ ದಾಖಲಾತಿ ಹಾಗೂ ಮುಂದುವರಿಕೆ;

(ii) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ನಿಗದಿಪಡಿಸತಕ್ಕ ವ್ಯಾಸಂಗ ಕ್ರಮಗಳು;

(iii) ಪದವಿಗಳ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳ ಪ್ರದಾನ;

(iv) ಸಂಶೋಧನಾ ವೇತನಗಳು (ಫೆಲೋಶಿಪ್), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಪದಕಗಳು ಮತ್ತು ಬಹುಮಾನಗಳನ್ನು ನೀಡಲು ಷರತ್ತುಗಳು;

(v) ಪರೀಕ್ಷೆಗಳನ್ನು ನಡೆಸುವುದು ಹಾಗೂ ಪರೀಕ್ಷೆ ನಡೆಸುವ ಸಂಸ್ಥೆಗಳು, ಪರೀಕ್ಷಕರು, ಪರೀಕ್ಷಾ ಮೇಲ್ವಿಚಾರಕರು, ಟ್ಯಾಬುಲೇಟರ್‌ಗಳು ಮತ್ತು ಮಾಡರೇಟರ್‌ಗಳ ನೇಮಕಾತಿ ಷರತ್ತುಗಳು ಮತ್ತು ವಿಧಾನ ಹಾಗೂ ಅವರ ಕರ್ತವ್ಯಗಳು;

(vi) ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ, ಪದವಿಗಳಿಗೆ ಹಾಗೂ ಇತರ ಶೈಕ್ಷಣಿಕ ಪ್ರಶಸ್ತಿಗಳಿಗೆ ಪ್ರವೇಶಕ್ಕೆ ವಿಧಿಸತಕ್ಕ ಶುಲ್ಕ;

(vii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನಲ್ಲಿ ವಿದ್ಯಾರ್ಥಿಗಳ ನಿವಾಸಕ್ಕಾಗಿ ಷರತ್ತುಗಳು;

(viii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶಿಸ್ತು ಪಾಲನೆ;

(ix) ಈ ಅಧಿನಿಯಮದ ಅಡಿಯಲ್ಲಿನ ಪರಿನಿಯಮಗಳಲ್ಲಿ ಉಪಬಂಧ ಕಲ್ಪಿಸಬಹುದಾಂಥ ಇತರ ಎಲ್ಲಾ ವಿಷಯಗಳು.

**36. ವಿನಿಯಮಗಳ ರಚನೆ ವಿಧಾನ.–** ವಿನಿಯಮಗಳನ್ನು ಶೈಕ್ಷಣಿಕ ಪರಿಷತ್ತು ರಚಿಸತಕ್ಕದ್ದು ಹಾಗೂ ವ್ಯವಸ್ಥಾಪನಾ ಮಂಡಳಿಯು ಅನುಮೋದಿಸತಕ್ಕದ್ದು.

**37. ವಿನಿಯಮಗಳ ತಿದ್ದುಪಡಿಗೆ ಅಧಿಕಾರ.–** ವ್ಯವಸ್ಥಾಪನಾ ಮಂಡಳಿಯ ಅನುಮೋದನೆಯೊಡನೆ ಶೈಕ್ಷಣಿಕ ಪರಿಷತ್ತು ಹೊಸ ವಿನಿಯಮಗಳನ್ನು ಅಥವಾ ಹೆಚ್ಚುವರಿ ವಿನಿಯಮಗಳನ್ನು ರಚಿಸಬಹುದು ಅಥವಾ ವಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

**38. ಶುಲ್ಕ ನಿಯಂತ್ರಣ ಸಮಿತಿ.–** (1) ಸರ್ಕಾರವು ರಚಿಸಿದ ನಿವೃತ್ತ ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಮುಖ್ಯಸ್ಥರಾಗಿರುವ ಮತ್ತು ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ, ಉನ್ನತ ಶಿಕ್ಷಣ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ವೈದ್ಯಕೀಯ ಶಿಕ್ಷಣದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ಒಬ್ಬ ಮಹಿಳೆಯೂ ಸೇರಿದಂತೆ ಪ್ರಬಂಧಕ ಮಂಡಳಿಯು ನಾಮನಿರ್ದೇಶಿಸಿದ ಇಬ್ಬರು ಶಿಕ್ಷಣ ತಜ್ಞರು ಇವರುಗಳನ್ನು ಒಳಗೊಂಡ ಒಂದು ಶುಲ್ಕ ನಿಯಂತ್ರಣ ಸಮಿತಿಯು, 9ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗಾಗಿ ಮೀಸಲಿರಿಸಿದ ವಿಶ್ವವಿದ್ಯಾಲಯದ ಸ್ಥಾನಗಳ ಶುಲ್ಕವನ್ನು ನಿಯಂತ್ರಿಸತಕ್ಕದ್ದು. ಸಮಿತಿಯಲ್ಲಿ ಈ ಉದ್ದೇಶಕ್ಕಾಗಿ ಒಬ್ಬರು ಖ್ಯಾತ ಚಾರ್ಟರ್ಡ್ ಅಕೌಂಟೆಂಟ್ ರವರನ್ನು ಸಹ ಸದಸ್ಯನನ್ನಾಗಿ ಸೇರಿಸಿಕೊಳ್ಳತಕ್ಕದ್ದು.

(2) ಸಮಿತಿಯು ವಿಶ್ವವಿದ್ಯಾಲಯದ ಪ್ರವೇಶಗಳ ಮತ್ತು ಶುಲ್ಕದ ಸಂಗ್ರಹಣೆಯ ಅನುಪಾಲನೆಯನ್ನು ನೋಡಿಕೊಳ್ಳತಕ್ಕದ್ದು.

## ಅಧ್ಯಾಯ – VI

## ಸಂಕೀರ್ಣ

**39. ನೌಕರರ ಸೇವಾ ಷರತ್ತುಗಳು.–** (1) ಪರಿನಿಯಮಗಳ ಮತ್ತು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಥವಾ ನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳು, ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಒಳಪಟ್ಟು ಪ್ರತಿಯೊಬ್ಬ ನೌಕರನು ಲಿಖಿತ ಕರಾರಿನ ಅಡಿಯಲ್ಲಿ ನೇಮಕಗೊಳ್ಳತಕ್ಕದ್ದು ಮತ್ತು ಅದನ್ನು ವಿಶ್ವವಿದ್ಯಾಲಯದಲ್ಲಿ ಇಟ್ಟುಕೊಳ್ಳತಕ್ಕದ್ದು ಹಾಗೂ ಅದರ ಪ್ರತಿಯನ್ನು ಸಂಬಂಧಪಟ್ಟ ನೌಕರನಿಗೆ ನೀಡತಕ್ಕದ್ದು.

(2) ನೌಕರರ ವಿರುದ್ಧ ಶಿಸ್ತು ಕ್ರಮವನ್ನು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಕಾರ್ಯವಿಧಾನಗಳ ಮೂಲಕ ನಿಯಂತ್ರಿಸತಕ್ಕದ್ದು.

(3) ಕರಾರಿನಿಂದಾಗಿ ವಿಶ್ವವಿದ್ಯಾಲಯ ಮತ್ತು ನೌಕರನ ಮಧ್ಯದಲ್ಲಿ ಉದ್ಭವಿಸಬಹುದಾದ ಯಾವುದೇ ವಿವಾದವನ್ನು, ಲಿಖಿತ ಕರಾರಿನಲ್ಲಿ ಉಪಬಂಧಿಸಿದ ವಿಧಾನದಲ್ಲಿ ಹಾಗೂ ಪರಿನಿಯಮಗಳ ಅನುಸಾರವಾಗಿ ಪರಿಹರಿಸತಕ್ಕದ್ದು.

**40. ಮೇಲ್ಮನವಿ ಹಕ್ಕು.–** ವಿಶ್ವವಿದ್ಯಾಲಯವು ತನ್ನ ನೌಕರರ ಅಥವಾ ವಿದ್ಯಾರ್ಥಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಂಡ ಸಂದರ್ಭದಲ್ಲಿ, ಬಾಧಿತ ನೌಕರ ಅಥವಾ ವಿದ್ಯಾರ್ಥಿಗಳು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಮೇಲ್ಮನವಿ ಹಕ್ಕನ್ನು ಹೊಂದಿರತಕ್ಕದ್ದು.

**41. ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿ .–** ವಿಶ್ವವಿದ್ಯಾಲಯವು, ತನ್ನ ನೌಕರರ ಪ್ರಯೋಜನಕ್ಕಾಗಿ, ಪರಿನಿಯಮಗಳು ಮತ್ತು ಜಾರಿಯಲ್ಲಿರುವ ಕಾನೂನುಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿಯನ್ನು ರಚಿಸತಕ್ಕದ್ದು ಹಾಗೂ ಅಂಥ ವಿಮಾ ಯೋಜನೆಗಳನ್ನು ಒದಗಿಸತಕ್ಕದ್ದು.

**42. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ಸಂಸ್ಥೆಗಳ ರಚನೆಯ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ಸಂಸ್ಥೆಯ ಸದಸ್ಯನಾಗಿ ಯಾವೊಬ್ಬ ವ್ಯಕ್ತಿಯು ಸೂಕ್ತವಾಗಿ ಆಯ್ಕೆಯಾಗಿದ್ದಾನೆಯೇ ಅಥವಾ ನೇಮಕಗೊಂಡಿದ್ದಾನೆಯೇ ಅಥವಾ ಅದಕ್ಕೆ ಅರ್ಹನಾಗಿದ್ದಾನೆಯೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆ ವಿಷಯವನ್ನು ತೀರ್ಮಾನಕ್ಕಾಗಿ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**43. ಸಮಿತಿಗಳ ರಚನೆ.–** 22ನೇ ಪ್ರಕರಣದಲ್ಲಿ ನಮೂದಿಸಿದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅಧಿಕಾರವನ್ನು ಹೊಂದಿರುವ ಅಂಥ ಸದಸ್ಯರನ್ನು ಒಳಗೊಂಡ ಅಂಥ ಪ್ರಾಧಿಕಾರದ ಒಂದು ಸಮಿತಿಯನ್ನು ರಚಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**44. ಆಕಸ್ಮಿಕವಾಗಿ ಖಾಲಿಯಾದ ಸ್ಥಾನಗಳನ್ನು ತುಂಬುವುದು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಂಸ್ಥೆಯ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ಪೈಕಿ ಯಾವುದೇ ಸ್ಥಾನವು ಆಕಸ್ಮಿಕವಾಗಿ ಖಾಲಿಯಾದರೆ, ಯಾರ ಸ್ಥಾನವು ಖಾಲಿಯಾಗಿ ತುಂಬಬೇಕಾಗಿ ಬಂದಿದೆಯೋ ಆ ಸದಸ್ಯನನ್ನು ಯಾವ ರೀತಿಯಲ್ಲಿ ಆರಿಸಲಾಗಿತ್ತೋ ಅದೇ ರೀತಿಯಲ್ಲಿ ಹೊಸ ಸದಸ್ಯನನ್ನು ಆರಿಸಿ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ಖಾಲಿ ಸ್ಥಾನವನ್ನು ಭರ್ತಿ ಮಾಡಿದ ವ್ಯಕ್ತಿಯು ಆತನು ಯಾವ ಸದಸ್ಯನ ಸ್ಥಾನದಲ್ಲಿ ಭರ್ತಿಯಾಗಿರುವನೋ ಆ ಸದಸ್ಯನು ಪ್ರಾಧಿಕಾರ ಅಥವಾ ಸಂಸ್ಥೆಯ ಸದಸ್ಯನಾಗಿ ಉಳಿಯುತ್ತಿದ್ದ ಬಾಕಿ ಅವಧಿಯವರೆಗೆ ಮಾತ್ರ ಸದಸ್ಯನಾಗಿರತಕ್ಕದ್ದು.

**45. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಪರಿನಿಯಮಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ನಡೆಸಲು ಅವಕಾಶ ಇರತಕ್ಕದ್ದಲ್ಲ.

**46. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮ ಮತ್ತು ಪರಿನಿಯಮಗಳ ಯಾವುದೇ ಇತರ ಉಪಬಂಧಗಳಲ್ಲಿ ಏನೇ ಇದ್ದರೂ,–

(i) ಮೊದಲ ಕುಲಪತಿ ಮತ್ತು ಸಹಕುಲಪತಿ, ಯಾರಾದರೂ ಇದ್ದರೆ, ಅವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು;

(ii) ಮೊದಲ ಕುಲಸಚಿವರನ್ನು ಮತ್ತು ಮೊದಲ ಹಣಕಾಸು ಅಧಿಕಾರಿಯವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು; ಮತ್ತು

(iii) ಮೊದಲ ವ್ಯವಸ್ಥಾಪನ ಮಂಡಳಿ, ಮೊದಲ ಹಣಕಾಸು ಸಮಿತಿ, ಮೊದಲ ಸಂಶೋಧನೆ ಮತ್ತು ಅನ್ವೇಷಣಾ ಪರಿಷತ್ತು ಹಾಗೂ ಮೊದಲ ಶೈಕ್ಷಣಿಕ ಪರಿಷತ್ತನ್ನು ಕುಲಾಧಿಪತಿಯವರು ರಚಿಸತಕ್ಕದ್ದು.

**47. ಶಾಶ್ವತ ಶಾಸನಬದ್ಧ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಕನಿಷ್ಠ ಇಪ್ಪತ್ತೈದು ಕೋಟಿ ರೂಪಾಯಿಗಳನ್ನುಳ್ಳ ಒಂದು ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು ಇದರ ಪೈಕಿ ಕನಿಷ್ಠ ಹದಿನೈದು ಕೋಟಿ ರೂಪಾಯಿಗಳು ನಗದು ರೂಪದಲ್ಲಿ ಮತ್ತು ಇನ್ನುಳಿದದ್ದು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಇರತಕ್ಕದ್ದು ಮತ್ತು ಇದನ್ನು ತಾನಾಗಿಯೆ ಹೆಚ್ಚಿಸಬಹುದಾಗಿದ್ದು ಆದರೆ ಕಡಿಮೆ ಮಾಡತಕ್ಕದ್ದಲ್ಲ.

ಪರಂತು, ಬೆಂಗಳೂರು ಅಥವಾ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊರಗಿರುವ ವಿಶ್ವವಿದ್ಯಾಲಯದ ಸಂದರ್ಭದಲ್ಲಿ ಕನಿಷ್ಠ ಹತ್ತು ಕೋಟಿ ರೂಪಾಯಿಗಳು ನಗದು ರೂಪದಲ್ಲಿರತಕ್ಕದ್ದು ಮತ್ತು ಉಳಿದ ಐದು ಕೋಟಿ ರೂಪಾಯಿಗಳು ಬ್ಯಾಂಕ್ ಗ್ಯಾರಂಟಿಯ ರೂಪದಲ್ಲಿರತಕ್ಕದ್ದು.

(2) ವಿಶ್ವವಿದ್ಯಾಲಯವು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಹಣವನ್ನು ಹೂಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯವು ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಗೆ ವರ್ಗಾವಣೆ ಮಾಡಬಹುದು. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನೂ ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(4) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಿದ ವರಮಾನದ ಶೇಕಡಾ ಎಪ್ಪತ್ತೈದರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸಗಳ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೆಕಡಾ ಇಪ್ಪತ್ತೈದರಷ್ಟನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಯಲ್ಲಿ ಪುನ: ತೊಡಗಿಸತಕ್ಕದ್ದು.

**48. ವಿಶ್ವವಿದ್ಯಾಲಯದ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ನಿಧಿಗಳನ್ನು ಒಳಗೊಂಡ ವಿಶ್ವವಿದ್ಯಾಲಯದ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದು ಕಾಲಕಾಲಕ್ಕೆ ಸ್ವೀಕರಿಸಬಹುದಾದ ದೇಣಿಗೆಗಳು ಮತ್ತು ಇತರ ನಿಧಿಗಳನ್ನು ಒಳಗೊಂಡಿರತಕ್ಕದ್ದು.

(2) ವಿಶ್ವವಿದ್ಯಾಲಯವು, ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ವಿಧಾನದಲ್ಲಿ ವಿಶ್ವವಿದ್ಯಾಲಯದ ದತ್ತಿನಿಧಿಯನ್ನು ಹೂಡುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯ ದತ್ತಿ ನಿಧಿಯು, ವಿಶ್ವವಿದ್ಯಾಲಯವು ತನ್ನ ಸಾಮಾಜಿಕ ಧ್ಯೇಯೋದ್ದೇಶಗಳನ್ನು ನೆರವೇರಿಸುವ ಸಂದರ್ಭದಲ್ಲಿ ಮತ್ತು/ಅಥವಾ ಮುಂಗಾಣದ ಸನ್ನಿವೇಶದಲ್ಲಿ ಉದ್ಭವಿಸಬಹುದಾದ ಹಣಕಾಸು ಸವಾಲುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸ್ವಇಚ್ಛೆಯಿಂದ ನಿರ್ವಹಿಸಿಕೊಂಡು ಬರಲು ಮತ್ತು ಜವಾಬ್ದಾರಿಯಿಂದ ಹಣ ಹೂಡಿಕೆ ಮಾಡಲು ಇಚ್ಛೆಯುಳ್ಳವರಾಗಿ ಸ್ವಯಂ ವಿಧಿಸಿಕೊಂಡ ನಿಧಿಯಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಗೆ ವರ್ಗಾಯಿಸಬಹುದು. ವಿಶ್ವವಿದ್ಯಾಲಯದ ಸಮಾಪನೆಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನು ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಬರುವ ವರಮಾನದ ಶೇಕಡಾ ಎಂಭತ್ತರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸದ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತರಷ್ಟನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಯಲ್ಲಿ ಪುನಃ ತೊಡಗಿಸತಕ್ಕದ್ದು.

**49. ಸಾಮಾನ್ಯ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಸಾಮಾನ್ಯ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯವು ವಿಧಿಸಬಹುದಾದ ಎಲ್ಲಾ ಶುಲ್ಕಗಳು;

(ii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವುದೇ ಇತರ ಮೂಲದಿಂದ ಸ್ವೀಕರಿಸಲಾದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ದೇಣಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು;

(2) ಸಾಮಾನ್ಯ ನಿಧಿಗೆ ಜಮಾ ಮಾಡುವ ನಿಧಿಗಳನ್ನು ವಿಶ್ವವಿದ್ಯಾಲಯದ ಎಲ್ಲಾ ಆವರ್ತಕ ವೆಚ್ಚಗಳನ್ನು ಭರಿಸಲು ಉಪಯೋಗಿಸಿಕೊಳ್ಳತಕ್ಕದ್ದು.

**50. ಅಭಿವೃದ್ಧಿ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಅಭಿವೃದ್ಧಿ ನಿಧಿಯನ್ನು ಸಹ ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ವಿದ್ಯಾರ್ಥಿಗಳಿಂದ ವಿಧಿಸಬಹುದಾದ ಅಭಿವೃದ್ಧಿ ಶುಲ್ಕಗಳು;

(ii) ವಿಶ್ವವಿದ್ಯಾಲಯದ ಅಭಿವೃದ್ಧಿಯ ಉದ್ದೇಶಗಳಿಗಾಗಿ ಯಾವುದೇ ಇತರ ಮೂಲಗಳಿಂದ ಸ್ವೀಕರಿಸಿದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ವಂತಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು; ಮತ್ತು

(v) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಲಾದ ಎಲ್ಲಾ ವರಮಾನಗಳು.

(2) ಅಭಿವೃದ್ಧಿ ನಿಧಿಗೆ ಕಾಲಕಾಲಕ್ಕೆ ಜಮಾ ಮಾಡಿದ ನಿಧಿಯನ್ನು ವಿಶ್ವವಿದ್ಯಾಲಯದ ಅಭಿವೃದ್ಧಿಗಾಗಿ ಉಪಯೋಗಿಸಕೊಳ್ಳತಕ್ಕದ್ದು.

**51. ನಿಧಿಗಳ ನಿರ್ವಹಣೆ.–** 47, 48, 49 ಮತ್ತು 50ನೇ ಪ್ರಕರಣಗಳಡಿಯಲ್ಲಿ ಸ್ಥಾಪಿಸಲಾದ ನಿಧಿಗಳನ್ನು ಪ್ರಬಂಧಕ ಮಂಡಳಿಯ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ನಿಯಂತ್ರಿಸತಕ್ಕದ್ದು ಹಾಗೂ ನಿರ್ವಹಿಸತಕ್ಕದ್ದು.

**52. ವಾರ್ಷಿಕ ವರದಿ.–** (1) ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ಅದರ ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ಪ್ರಬಂಧಕ ಮಂಡಳಿಯು ವಾರ್ಷಿಕ ವರದಿಯನ್ನು ತನ್ನ ಸಭೆಯಲ್ಲಿ ಪರಿಗಣಿಸತಕ್ಕದ್ದು ಹಾಗೂ ಅದನ್ನು ಮಾರ್ಪಾಡುಗಳೊಡನೆ ಅಥವಾ ಮಾರ್ಪಾಡುಗಳಿಲ್ಲದೆ ಅನುಮೋದಿಸಬಹುದು.

(3) ಪ್ರಬಂಧಕ ಮಂಡಳಿಯು ಸೂಕ್ತವಾಗಿ ಅನುಮೋದಿಸಿದ ವಾರ್ಷಿಕ ವರದಿಯ ಒಂದು ಪ್ರತಿಯನ್ನು ಪ್ರತಿವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ಡಿಸೆಂಬರ್ 31ಕ್ಕೆ ಮೊದಲು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**53. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ ಪತ್ರ ಮತ್ತು ಜಮಾ ಖರ್ಚು ಪಟ್ಟಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಎಲ್ಲಾ ಮೂಲಗಳಿಂದ ಪ್ರಾಪ್ತವಾಗುವ ಅಥವಾ ಸ್ವೀಕರಿಸಲಾಗುವ ಎಲ್ಲಾ ನಿಧಿಗಳು ಹಾಗೂ ವಿತರಿಸಿದ ಅಥವಾ ಸಂದಾಯ ಮಾಡಿದ ಎಲ್ಲಾ ಮೊಬಲಗುಗಳನ್ನು ವಿಶ್ವವಿದ್ಯಾಲಯವು ನಿರ್ವಹಿಸುವ ಲೆಕ್ಕಪತ್ರದಲ್ಲಿ ನಮೂದಿಸತಕ್ಕದ್ದು.

(2) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಪ್ರತಿ ವರ್ಷವೂ ಭಾರತದ ಚಾರ್ಟೆಡ್ ಅಕೌಂಟೆಂಟ್‌ಗಳ ಸಂಸ್ಥೆಯ ಸದಸ್ಯರಾಗಿರುವ ಒಬ್ಬ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(3) ವಾರ್ಷಿಕ ಲೆಕ್ಕಪತ್ರಗಳು ಮತ್ತು ಜಮಾ ಖರ್ಚು ಪಟ್ಟಿಯನ್ನು ಲೆಕ್ಕಪರಿಶೋಧನಾ ವರದಿಯೊಡನೆ, ಪ್ರತಿ ವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ನವೆಂಬರ್ 30ಕ್ಕೆ ಮೊದಲು ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(4) ವಾರ್ಷಿಕ ಲೆಕ್ಕಪತ್ರಗಳು, ಜಮಾಖರ್ಚು ಪಟ್ಟಿ ಮತ್ತು ಲೆಕ್ಕಪರಿಶೋಧನಾ ವರದಿಯನ್ನು ಪ್ರಬಂಧಕ ಮಂಡಳಿಯು ತನ್ನ ಸಭೆಯಲ್ಲಿ ಪರ್ಯಾಲೋಚಿಸತಕ್ಕದ್ದು ಮತ್ತು ಪ್ರಬಂಧಕ ಮಂಡಳಿಯು ಅದನ್ನು ತನ್ನ ಅಭಿಪ್ರಾಯಗಳೊಡನೆ ಸಂದರ್ಶಕರಿಗೆ ಹಾಗೂ ಸರ್ಕಾರಕ್ಕೆ ಪ್ರತಿ ವರ್ಷದ ಡಿಸೆಂಬರ್ 31ಕ್ಕೆ ಮೊದಲು ಕಳುಹಿಸತಕ್ಕದ್ದು.

(5) ಲೆಕ್ಕಪರಿಶೋಧಕರ ವರದಿಯಲ್ಲಿ ಯಾವುದೇ ಮುಖ್ಯ ಬದಲಾವಣೆ ಇದ್ದ ಸಂದರ್ಭದಲ್ಲಿ, ಅವುಗಳನ್ನು ಸರಿಪಡಿಸಲು, ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಕ್ಕೆ ನಿರ್ದೇಶನಗಳನ್ನು ಹೊರಡಿಬಹುದು ಮತ್ತು ಅಂಥ ನಿರ್ದೇಶನಗಳು ವಿಶ್ವವಿದ್ಯಾಲಯದ ಮೇಲೆ ಬಂಧನಕಾರಿಯಾಗಿರತಕ್ಕದ್ದು.

**54. ವಿಶ್ವವಿದ್ಯಾಲಯ ದಾಖಲೆಗಳ ರುಜುವಾತಿನ ಮಾದರಿ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಮಿತಿಯ ಯಾವುದೇ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ ಅಥವಾ ಗೊತ್ತುವಳಿಯು ಅಥವಾ ವಿಶ್ವವಿದ್ಯಾಲಯದ ಸ್ವಾಧೀನದಲ್ಲಿರುವ ಇತರ ದಾಖಲೆಗಳು ಅಥವಾ ವಿಶ್ವವಿದ್ಯಾಲಯವು ಯುಕ್ತವಾಗಿ ನಿರ್ವಹಿಸುವ ಯಾವುದೇ ರಿಜಿಸ್ಟರ್‌ನಲ್ಲಿಯ ಯಾವುದೇ ನಮೂದುಗಳ ಪ್ರತಿಯನ್ನು, ಅದರ ಮೇಲೆ ಕುಲಸಚಿವರು ಪ್ರಮಾಣೀಕರಿಸಿದ್ದರೆ, ಅದನ್ನು ಅಂಥ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ, ಗೊತ್ತುವಳಿ ಅಥವಾ ದಾಖಲೆ ಅಥವಾ ರಿಜಿಸ್ಟರ್‌ನಲ್ಲಿ ಇರುವ ನಮೂದನ್ನು ಮೇಲ್ನೋಟದ ಸಾಕ್ಷ್ಯವೆಂಬುದಾಗಿ ಸ್ವೀಕರಿಸತಕ್ಕದ್ದು ಮತ್ತು ವಿಷಯಗಳ ಸಾಕ್ಷಿಯಾಗಿ ಅಂಗೀಕರಿಸತಕ್ಕದ್ದು ಹಾಗೂ ಮೂಲ ದಾಖಲೆಗಳನ್ನೇ ಸಲ್ಲಿಸಿದ್ದರೆ ಅದನ್ನು, ದಾಖಲಿಸಿರುವ ವಿಷಯಗಳು ಮತ್ತು ವಹಿವಾಟುಗಳ ಸಾಕ್ಷ್ಯವಾಗಿ ಅಂಗೀಕರಿಸಲಾಗುತ್ತಿತ್ತೋ, ಅದೇ ರೀತಿಯಲ್ಲಿ ಇವನ್ನೂ ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು.

**55. ನಿರ್ದೇಶನಗಳನ್ನು ನೀಡಲು ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಥವಾ ಅದರಲ್ಲಿ ಇರುವ ಯಾವುವೇ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳು ಅಥವಾ ಆದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿರ್ದೇಶನ ನೀಡುವುದು ಅವಶ್ಯವೆಂದು ಅಥವಾ ಉಚಿತವೆಂದು ಅಭಿಪ್ರಾಯಪಟ್ಟಲ್ಲಿ ಅದು ಅಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿ ಅಥವಾ ಸಂದರ್ಭಾನುಸಾರವಾಗಿ ವ್ಯವಸ್ಥಾಪನಾ ಮಂಡಳಿಯು ಅಂಥ ಪ್ರತಿಯೊಂದು ನಿರ್ದೇಶನವನ್ನು ಪಾಲಿಸತಕ್ಕದ್ದು.

**56. ದಂಡಗಳು.–** (1) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿತವಾದ ನಿಯಮಗಳು ಉಪಬಂಧಗಳನ್ನು ಅಥವಾ ಯಾವುದೇ ಪರೀಕ್ಷಾ ವಿಷಯಗಳನ್ನು ಅಥವಾ ಪದವಿಗಳನ್ನು ನೀಡುವುದಕ್ಕೆ ಅಥವಾ ಅಂಕಪಟ್ಟಿಗಳನ್ನು ನೀಡುವುದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಉಲ್ಲಂಘನೆಗಳನ್ನು ಮಾಡುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಐವತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಹತ್ತು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಆರು ತಿಂಗಳ ಅವಧಿಗಿಂತ ಕಡಿಮೆಯಲ್ಲದ ಆದರೆ ಎರಡು ವರ್ಷಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು:

ಪರಂತು, ಅಪರಾಧವನ್ನು ಎಸಗುವಲ್ಲಿ ವಿಶ್ವವಿದ್ಯಾಲಯವೂ ಸಹ ಒಳಗೊಂಡಿರುವಲ್ಲಿ, ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ಈ ಅಧಿನಿಯಮದ ಅಡಿಯಲ್ಲಿ ಮಂಜೂರು ಮಾಡಲಾದ ಅನುಮತಿ ಪತ್ರವನ್ನು ಹಿಂತೆಗೆದುಕೊಳ್ಳತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿಯ ದಂಡವನ್ನು ಇತರ ಯಾವುದೇ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಲಾದ ದಂಡಕ್ಕೆ ಬಾಧಕವಾಗದಂತೆ ವಿಧಿಸಬಹುದು.

**57. ಪ್ರವೇಶಿಸುವ ಮತ್ತು ಪರಿಶೋಧಿಸುವ ಅಧಿಕಾರ.–** ಈ ಉದ್ದೇಶಕ್ಕಾಗಿ, ರಾಜ್ಯಸರ್ಕಾರದಿಂದ ಪ್ರಾಧಿಕೃತಗೊಂಡ 'ಎ' ಸಮೂಹದ ಅಧಿಕಾರಿ ದರ್ಜೆಗಿಂತ ಕಡಿಮೆಇಲ್ಲದ ದರ್ಜೆಯ ಯಾವೊಬ್ಬ ಅಧಿಕಾರಿಯು, ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಕ್ಯಾಪಿಟೇಶನ್ ಶುಲ್ಕ ನಿಷೇಧ) ಅಧಿನಿಯಮ, 1984ರ (1984ರ ಕರ್ನಾಟಕ ಅಧಿನಿಯಮ 37) ಅಡಿಯಲ್ಲಿ ನಿರ್ದಿಷ್ಟಪಡಿಸಿರಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಉದ್ದೇಶಗಳಿಗಾಗಿ, ಆ ಅಧಿನಿಯಮದ 9ನೇ ಪ್ರಕರಣದ ಅಡಿಯಲ್ಲಿ ಉಪಬಂಧಿಸಲಾದಂತಹವೇ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನೆರವೇರಿಸಲು ಅಧಿಕೃತನಾದ ಅಧಿಕಾರಿ ಎಂಬುದಾಗಿ ಭಾವಿಸತಕ್ಕದ್ದು.

**58. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸಲು ನಿರ್ದೇಶನವನ್ನು ನೀಡುವ ಅಧಿಕಾರ.–** (1) ವಿಶ್ವವಿದ್ಯಾಲಯವು ತನ್ನ ರಚನೆ ಅಥವಾ ನಿಗಮನವನ್ನು ನಿಯಂತ್ರಿಸುವ ಕಾನೂನಿಗೆ ಅನುಸಾರವಾಗಿ ತನ್ನ ಸಮಾಪನವನ್ನು ಉದ್ದೇಶಿಸಿದ್ದಲ್ಲಿ, ಅದು ಕನಿಷ್ಠ ಆರು ತಿಂಗಳ ಲಿಖಿತ ಪೂರ್ವ ಸೂಚನೆಯನ್ನು (ನೋಟಿಸು) ಸರ್ಕಾರಕ್ಕೆ ನೀಡತಕ್ಕದ್ದು.

(2) ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು, ಈ ಕೆಳಗಿನವುಗಳ ಬಗ್ಗೆ, ಎಂದರೆ:–

(i) ಪದವಿಯನ್ನು ನೀಡುವುದಕ್ಕಾಗಿ ಬೋಧನೆಯ ಗುಣಮಟ್ಟ;

(ii) ಶಿಕ್ಷಣದ ಗುಣಮಟ್ಟ;

(iii) ಉನ್ನತ ಶಿಕ್ಷಣದ ವ್ಯಾಪಾರೀಕರಣವನ್ನು ತಡೆಗಟ್ಟುವುದು;

(iv) ಅಧಿನಿಯಮದ ಉಪಬಂಧಗಳ ಉಲ್ಲಂಘನೆಯ ಬಗ್ಗೆ, ಯಾವುದಾದರೂ ಇದ್ದಲ್ಲಿ,

– ಇವುಗಳ ಬಗ್ಗೆ ನಿಯತಕಾಲಿಕ ಪರಿವೀಕ್ಷಣೆಯನ್ನು ನಡೆಸತಕ್ಕದ್ದು ಮತ್ತು ಸರ್ಕಾರಕ್ಕೆ ವರದಿಯನ್ನು ಕಳುಹಿಸತಕ್ಕದ್ದು.

(3) ದುರ್ವ್ಯವಹರಣೆ, ದುರಾಡಳಿತ ಮತ್ತು ಅಶಿಸ್ತು ಆಗಿದೆ ಎಂಬುದನ್ನು ಗುರುತಿಸಿದರೆ, ಸರ್ಕಾರವು, ವಿಶ್ವವಿದ್ಯಾಲಯದ ಆಡಳಿತವರ್ಗದವರಿಗೆ ಆಡಳಿತವನ್ನು ಸರಿಪಡಿಸಬೇಕೆಂದು ನಿರ್ದೇಶನಗಳನ್ನು ನೀಡತಕ್ಕದ್ದು. ನಿಯಮಿಸಬಹುದಾದ ಅಂಥ ಅವಧಿಯೊಳಗೆ ಆ ನಿರ್ದೇಶನಗಳನ್ನು ಪಾಲಿಸದಿದ್ದಲ್ಲಿ ವಿಶ್ವವಿದ್ಯಾಲಯವನ್ನು ಅಥವಾ ಅದರ ಯಾವುದೇ ವ್ಯಾಸಂಗ ಕ್ರಮವನ್ನು (ಕೋರ್ಸ್) ಸಮಾಪನಗೊಳಿಸುವ ಬಗ್ಗೆ ತೀರ್ಮಾನವನ್ನು ಕೈಗೊಳ್ಳುವ ಹಕ್ಕು ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವನ್ನು ಅಥವಾ ಅದರ ಯಾವುದೇ ವ್ಯಾಸಂಗ ಕ್ರಮವನ್ನು (ಕೋರ್ಸ್) ಸಮಾಪನಗೊಳಿಸುವ ವಿಧಾನವು, ಸರ್ಕಾರವು ಈ ಸಂಬಂಧದಲ್ಲಿ ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ವಿಶ್ವವಿದ್ಯಾಲಯವು ತನ್ನ ಕಾರಣಗಳನ್ನು ಹೇಳಿಕೊಳ್ಳಲು ಸಮಂಜಸ ಅವಕಾಶಗಳನ್ನು ನೀಡಿದ ಹೊರತು ಅಂಥ ಯಾವುದೇ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

(5) (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ನೋಟಿಸನ್ನು ಸ್ವೀಕರಿಸಿದ ಮೇಲೆ, ಸರ್ಕಾರವು ಸಂಬಂಧಿಸಿದ ನಿಯಂತ್ರಣಾ ಪ್ರಾಧಿಕಾರದೊಡನೆ ಸಮಾಲೋಚಿಸಿ, ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸಲು ಅಥವಾ ವ್ಯಾಸಂಗ ಕ್ರಮವನ್ನು ಪರಿಸಮಾಪನಗೊಳಿಸಲು ಉದ್ದೇಶಿಸಿದ ದಿನಾಂಕದಿಂದ, ವಿಶ್ವವಿದ್ಯಾಲಯದಲ್ಲಿ ನಿಯತ ವ್ಯಾಸಂಗ ಕ್ರಮಗಳಲ್ಲಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಕೊನೆಯ ತಂಡ (ಬ್ಯಾಚ್) ತನ್ನ ವ್ಯಾಸಂಗ ಕ್ರಮವನ್ನು ಮುಗಿಸುವವರೆಗೆ ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ವಿಶ್ವವಿದ್ಯಾಲಯದ ಆಡಳಿತಕ್ಕೆ ಸೂಕ್ತ ವ್ಯವಸ್ಥೆಯನ್ನು ಮಾಡತಕ್ಕದ್ದು.

**59. ಸಮಾಪನೆಯ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ವೆಚ್ಚಗಳು.–** (1) 58ನೇ ಪ್ರಕರಣದ (5)ನೇ ಉಪಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವ ಅವಧಿಯಲ್ಲಿ ಅದರ ಆಡಳಿತಾತ್ಮಕ ವೆಚ್ಚಗಳನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿ, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ನೇಮಿಸಬಹುದಾದ ಅಂಥ ವಿಧಾನದಲ್ಲಿ ಭರಿಸತಕ್ಕದ್ದು.

(2) ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವ ಅವಧಿಯಲ್ಲಿ ವಿಶ್ವವಿದ್ಯಾಲಯದ ವೆಚ್ಚವನ್ನು ಭರಿಸಲು 47, 48, 49, ಮತ್ತು 50ನೇ ಪ್ರಕರಣಗಳ ಅಡಿಯಲ್ಲಿ ಉಲ್ಲೇಖಿಸಲಾದ ನಿಧಿಯು ಸಾಕಷ್ಟು ಇಲ್ಲದಿದ್ದಲ್ಲಿ, ಅಂಥ ವೆಚ್ಚವನ್ನು ಸರ್ಕಾರವು, ವಿಶ್ವವಿದ್ಯಾಲಯದ ಸ್ವತ್ತುಗಳು ಮತ್ತು ಆಸ್ತಿಗಳನ್ನು ವಿಲೇ ಮಾಡುವ ಮೂಲಕ ಭರಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಸಮಾಪನೆಯು ದುರ್ವ್ಯವಹರಣೆ ಅಥವಾ ದುರಾಡಳಿತದ ಕಾರಣಗಳಿಗಾಗಿ ಆಗಿದ್ದರೆ, ಸರ್ಕಾರವು ಅಂಥ ದುರ್ವ್ಯವಹಾರಕ್ಕೆ ಅಥವಾ ದುರಾಡಳಿತಕ್ಕೆ ಹೊಣೆಯಾಗಿರುವ ವ್ಯಕ್ತಿಗಳನ್ನು ಗುರುತಿಸುವ ಮತ್ತು ಅವರ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ದಂಡನೆಯನ್ನು ವಿಧಿಸಲು ಸ್ವತಂತ್ರವಾಗಿರತಕ್ಕದ್ದು.

**60. ತೊಂದರೆಗಳ ನಿವಾರಣೆಗೆ ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಅಧಿಸೂಚನೆಯ ಅಥವಾ ಆದೇಶದ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಮತ್ತು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಈ ಪ್ರಕರಣದ ಅಡಿಯಲ್ಲಿ ಅಂಥ ಯಾವುದೇ ಅಧಿಸೂಚನೆ ಅಥವಾ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸತಕ್ಕದ್ದು.

**61. ರಾಜ್ಯ ಸರ್ಕಾರದ ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮೊದಲು ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಉಭಯ ಸದನಗಳು ಒಪ್ಪಿದರೆ ತದನಂತರ ಅಂಥ ನಿಯಮವು ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಮೊದಲು ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವನ್ನು ಉಂಟುಮಾಡತಕ್ಕದ್ದಲ್ಲ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಜೆ.ಎಸ್.ಎಸ್. ಮಹಾವಿದ್ಯಾಪೀಠ (ನೋಂ) ನ್ಯಾಸ, ಮೈಸೂರು ಇವರು ರಾಜ್ಯದಲ್ಲಿ ಖಾಸಗಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಮುಂದೆ ಬಂದಿರುತ್ತಾರೆ. ಪ್ರಖ್ಯಾತ ಸಂಸ್ಥೆಯೊಂದರಿಂದ ಸ್ಥಾಪಿತವಾಗುವ ಖಾಸಗಿ ವಿಶ್ವವಿದ್ಯಾಲಯವು ಶಿಕ್ಷಣ ಆಕಾಂಕ್ಷಿ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣವನ್ನು ವಿಸ್ತರಿಸುವುದಕ್ಕೆ ಖಚಿತವಾಗಿ ನೆರವಾಗುತ್ತದೆ. ಇದು ಕರ್ನಾಟಕದಲ್ಲಿ ಉನ್ನತ ಶಿಕ್ಷಣ ವಲಯದಲ್ಲಿ ಪ್ರಸ್ತುತ ಶೇಕಡಾ 11.5 ಕ್ಕೆ ನಿಂತಿರುವ ಒಟ್ಟು ದಾಖಲಾತಿ ಪ್ರಮಾಣದ ಏರಿಕೆಯನ್ನೂ ಸಹ ತ್ವರಿತಗೊಳಿಸುತ್ತದೆ.

ಮೇಲ್ಕಂಡ ಅಂಶಗಳ ದೃಷ್ಟಿಯಿಂದ, ಜೆ.ಎಸ್.ಎಸ್. ಮಹಾವಿದ್ಯಾಪೀಠ (ನೋಂ) ನ್ಯಾಸ, ಮೈಸೂರು ಇವರ ಮೂಲಕ ಜೆ.ಎಸ್.ಎಸ್. ವಿಜ್ಞಾನ ಮತ್ತು ತಂತ್ರಜ್ಞಾನ ವಿಶ್ವವಿದ್ಯಾಲಯ ಸ್ಥಾಪನೆಗೆ ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಈ ಖಾಸಗಿ ವಿಶ್ವವಿದ್ಯಾಲಯವು ತಾಂತ್ರಿಕ, ಆರೋಗ್ಯ, ವ್ಯವಸ್ಥಾಪನೆ, ಜೀವವಿಜ್ಞಾನಗಳ ಹಾಗೂ ಅವುಗಳಿಗೆ ಆನುಷಂಗಿಕವಾದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಲ್ಲಿನ ಬೋಧನೆ, ತರಬೇತಿ, ಸಂಶೋಧನೆ ಮತ್ತು ಅಭಿವೃದ್ಧಿಯ ಮೇಲೆ ಬೆಳಕನ್ನು ಚೆಲ್ಲುತ್ತದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ

| | |
|---|---|
| **ಖಂಡ 39 :** | ವಿಶ್ವವಿದ್ಯಾಲಯದ ನೌಕರರ ನೇಮಕಾತಿಯ, ನಿಬಂಧನೆಗಳು ಮತ್ತು ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 47 :** | ಶಾಶ್ವತ ಶಾಸನಬದ್ಧ ದತ್ತಿ ನಿಧಿ ಹೂಡಿಕೆಯ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 58 :** | (3)ನೇ ಉಪಖಂಡವು, ವಿಶ್ವವಿದ್ಯಾಲಯದ, ಸರ್ಕಾರವು ನೀಡುವ ನಿರ್ದೇಶನಗಳನ್ನು ಆಡಳಿತ ವರ್ಗವು ಪಾಲಿಸುವ ಕಾಲಮಿತಿಯನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(4)ನೇ ಉಪಖಂಡವು, ವಿಶ್ವವಿದ್ಯಾಲಯದ ಸಮಾಪನಾ ರೀತಿಗೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 59 :** | ವಿಶ್ವವಿದ್ಯಾಲಯದ ಆಡಳಿತವನ್ನು ಹಸ್ತಾಂತರಗೊಳಿಸುವಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿ, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ವೆಚ್ಚವನ್ನು ಭರಿಸುವ ರೀತಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 61 :** | ಈ ಅಧಿನಿಯಮಗಳ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ

**ಸಿ.ಟಿ. ರವಿ**
ಉನ್ನತ ಶಿಕ್ಷಣ ಸಚಿವರು

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL
## ONE HUNDRED AND TWENTY FIRST SESSION
# J.S.S. SCIENCE AND TECHNOLOGY UNIVERSITY BILL, 2013

**(L.C. Bill No. 12 of 2013)**

A Bill to establish and incorporate in the State of Karnataka a University of unitary nature in private sector by the J.S.S. Mahavidyapeetha (R) Trust, Mysore to promote and undertake the advancement of applied University education in General, Technical, Health, Management, Life Sciences and allied sectors and for the matters connected therewith or incidental thereto.

Whereas it is expedient to establish and incorporate in the State of Karnataka a University of unitary nature in private sector by the J.S.S. Mahavidyapeetha (R) Trust, Mysore to promote and undertake the advancement of applied University Education in Technical, Health, Management, life sciences and allied sectors and for the matters connected therewith or incidental thereto for the purposes hereinafter appearing;

Be it enacted by the Karnataka State Legislature in the sixty fourth year of the Republic of India as follows:-

**CHAPTER-I**

**PRELIMINARY**

**1. Short title, extent and commencement:-**(1) This Act may be called the J.S.S. Science and Technology University Act, 2013.

(2) It extends to the whole of the State of Karnataka.

(3) It shall come into force on such date as the State Government may, by notification, in the official Gazette, appoint.

**2. Definitions:-**In this Act, unless the context otherwise requires,-

(a) "Academic Council" means the Academic Council of the University as specified in section 25;

(b) "Agenda Matters" means all the matters and businesses to be designated in the Statutes each of which can be either included in the Agenda or be taken up for discussion and decision at a meeting of the Board of Governors or the Board of Management or any Committees, as the case may be, only subject to the prior written approval of the Chancellor, consenting to the passing of such matters and businesses at such a meeting;

(c) "Board of Governors" means the Board of Governors of the University as specified in Section 23;

(d) "Board of Management" means the Board of Management of the University as specified in Section 24;

(e) "Chancellor", "Vice-Chancellor", "Pro Vice-Chancellor" means respectively the Chancellor, Vice Chancellor and Pro Vice Chancellor of the University;

(f) "Campus" means a campus established, maintained by the University wherever situated;

(g) "Committees" means the committees formed under this Act or by the various functionaries of the University as the case may be and includes the Nomination Committee, the Finance Committee and such other committees;

(h) "Constituent College" means a college or institution established and maintained by the University;

(i) "Finance Committee" means the Finance Committee of the University as specified in Section 27;

(j) "Government" means the Government of Karnataka;

(k) "National Accreditation bodies" means a body established by the Central Government for laying down norms and conditions for ensuring academic standards of higher education, such as University Grants Commission, All India Council of Technical Education, National Council of Teacher Education, Medical and Dental Councils of India, Pharmaceutical Council of India, National Council of Assessment and Accreditation, Indian Council of Agriculture Research, Council of Scientific and Industrial Research etc. and includes the Government;

(l) "Prescribed" means prescribed by rules made by the Government under this Act;

(m) "Principal in relation to a Constituent College" means the head of the Constituent College and includes, where there is no Principal or in the absence of a Principal appointed, the Vice-Principal or any other person for the time being appointed to act as Principal;

(n) "Registrar" means the Registrar of the University;

(o) "Regional Centre" means a centre established or maintained by the University for the purpose of co-ordinating and supervising the work of Study Centres in any region and for performing such other functions as may be conferred on such centre by the Board of Management;

(p) "Sponsoring Authority" or "Sponsoring Body" in relation to this Act means Sponsoring Trust;

(q) "Sponsoring Trust" means J.S.S. Mahavidyapeetha (R) Trust, Mysore**,** registered under the Indian Trust Act, 1982.

(r) "State" means State of Karnataka;

(s) "Statutes" and "Regulations" means respectively the Statutes and Regulations of the University made under this Act;

(t) "Study Centre" means a centre established and maintained by the University for the purpose of advising, counseling or for rendering any other assistance required by the students in the context of the education;

(u) "Teacher" means and includes a Professor, Associate Professor, Assistant Professor, Reader or Lecturer or such other person as may be appointed for imparting instruction or conducting or to guide research in the University or in a Constituent College and includes the Principal of Constituent College in conformity with the norms prescribed by the University Grants Commission;

(v) "University" means J.S.S. Science and Technology University established and incorporated under this Act;

(w) "University Grants Commission" means the Commission established under section 4 of the University Grants Commission Act, 1956 (Central Act 3 of 1956);

(x) "Visitor" means the visitor of the University as specified in section 13.

## CHAPTER-II

## THE UNIVERSITY AND SPONSORING BODY

**3. Proposal for the establishment of the University:-** (1) Sponsoring Trust shall have the right to establish the University of unitary nature subject to and in accordance with the provisions of this Act.

(2) The proposal to establish a University shall be made to the State Government by Sponsoring Trust.

(4) The proposal shall contain the following particulars, namely:-

(i) the objects of the University along with the details of Sponsoring Trust;

(ii) the extent and status of the University and the availability of land;

(iii) the nature and type of programmes of study and research to be undertaken by the University during a period of five academic years immediately following the commencement date;

(iv) the nature of faculties, courses of study and research proposed to be started;

(v) the campus development such as buildings, equipment and structural amenities;

(vi) the phased outlays of capital expenditure for a period of five academic years immediately following the commencement date;

(vii) the item-wise recurring expenditure, sources of finance and estimated expenditure for each student;

(viii) the scheme for mobilizing resources and the cost of capital thereto and the manner of repayments to each source;

(ix) the scheme of generation of funds internally through the recovery of fee from students, revenues anticipated from consultancy and other activities relating to the objects of the University and other anticipated incomes;

(x) the details of expenditure on unit cost, the extent of concessions or rebates in fee, freeship and scholarship for students belonging to economically weaker sections and the fee structure indicating varying rate of fee, if any, that would be levied on students who are either non resident Indians or persons of Indian origin or sponsored by non resident Indians or persons of Indian origin and students of nationalities other than India;

(xi) the years of experience and expertise in the concerned discipline at the command of Sponsoring Trust; as well as the financial resources;

(xii) the system for selection of students to the courses of study at the University; and

(xiii) status of fulfillment of such other conditions as may be required by the State Government to be fulfilled before the establishment of the University.

(4) A Screening Committee shall be constituted by the State Government consisting of three members who are Ex-officio members of Karnataka State Higher Education Council to examine the proposal received from the Sponsoring Trust which has recommendations to the State Government for establishment of the University.

**4. Establishment of the University:-** (1) Where the State Government, after considering the recommendations of the screening Committee and holding such inquiry as it may deem necessary, is satisfied that-

(i) the Trust has ability to run an University with sufficient infrastructure.

(ii) owns a land to the extent specified below in accordance with its location namely:-

(a) twenty five acres of land if it is within limits of Bruhat Bangalore Mahanagara Palike;

(b) forty acres of land if it is out side the limits of Bruhat Bangalore Mahanagara Palike but within Bangalore Metropolitan Region Development Authority area;

(c) not less than sixty acres of land in the places other than the places specified in Clauses (a) and (b).

The land specified above shall consist of a single block and it shall be in the name of the concerned Trust / foundation / institution / university itself. Based on the furnished particulars required in sub-section (3) of section 3, the Government may direct the Trust to establish the permanent Statutory Endowment Fund as specified in section 47.

(2) After the establishment of the Permanent Statutory Endowment Fund, the State Government may, by notification, in the official Gazette, accord sanction for establishment of the University of unitary nature in the State by the name of "J.S.S. Science and Technology University".

(3) The headquarters of the University shall be at Mysore. The University shall have Campuses or Regional Centres, Study Centres anywhere in Karnataka and subject to the prior permission of the State Government and as per UGC norms.

(4) The First Chancellor, the First Vice-Chancellor, First members of the Board of Governors, First members of the Board of Management and the Academic Council and all persons who may hereafter become such officers or members, so long as they continue to hold such office or membership, shall constitute a body corporate and can sue and be sued in the name of the-University.

(5) On sanction for the establishment of the University under sub-section (2), the land and other movable and immovable properties acquired, created, arranged or built by Sponsoring Trust for the purpose of the University shall vest in the University.

(6) In all suits and other legal proceedings by or against the University, the pleading shall be signed and verified by, and all processes in such suits and proceedings shall be issued to and be served on the Registrar.

(7) The land, building and other properties of the University shall not be used for any purpose other than incidental to the objects of the University.

**5. Grants and Financial Assistance:-** The University shall be self-financing and shall neither make a demand nor shall be entitled to any maintenance grant-in-aid or any other financial assistance from the State or any other body or corporation owned or controlled by the State:

Provided that the State may, provide financial support through grants or otherwise,-

(a) for research, development and other activities for which other State Government organizations are provided financial assistance; or

(b) for any specific research or programmes receiving support from the State Government and

(c) provided to or the benefit of the similar Universities in the State whether subject to a change in State Policy or otherwise;

Provided further that the university may receive any financial support from any other source.

**6. Power to establish constituent College, additional campuses, Regional Centres or Study Centres:-** The University may have Constituent Colleges, Regional Centres, additional campuses and Study Centres at such places in the State as it deems fit after the completion of five years after its establishment with prior approval of the State Government subject to norms of UGC and other National Accreditation bodies.

**7. Objects of the University:-**The University shall employ a broad range of strategies to achieve its vision and objectives,-

(i) to support, promote and undertake advancement of and innovation in University education leading up to and including post graduate, doctoral and post doctoral courses in the Technical, Health, Management, Life sciences and allied sectors and make provisions for research, advancement and dissemination of knowledge including consultancy in these fields;

(ii) to collaborate with any other universities, research institutions, non-profit organizations, industry associations, professional associations or other organizations, to conceptualize, design, develop and offer specific educational and research programmes, training programmes and exchange programmes for students, faculty members and others;

(iii) to undertake collaborative research and advocacy with any organizations with prior approval of the State Government;

(iv) to disseminate and advance knowledge by providing instructional and research facilities in such branches of learning as it may deem fit and in particular, to make special provisions for integrated courses in Technical, Health, Management, Life sciences and other such Higher Educational Programmes of the University and to make appropriate measures for promoting interdisciplinary studies and research;

(v) to develop human resources to meet the demands of high end technical and professional industries with research on future sustainable technologies catering to engineering solutions and support techonology business and technology incubation;

(vi) to provide innovative system of University level education, flexible and open with regard to methods and places of learning, combination of courses eligibility for enrolment, age of entry, conduct of examinations and operation of programmes with a view to promoting access and equity in higher learning besides encouraging excellence in new fields of knowledge and placing special emphasis on both academic as well as application oriented learning;

(vii) to develop resource centres to contribute to quality education with prior approval of State Government;

(viii) to establish Campuses, Regional centres, study centres and constituent Colleges at various locations in Karnataka and to contribute and develop an understanding of educational change in technical, professional, general education and social and human development with prior approval of Government;

(ix) to institute degrees, diplomas, certificates and other academic distinctions like award of credits on the basis of successful completion of academic work evaluated through multiple modern methods of assessment;

(x) to disseminate knowledge and develop a public debate on issues of education and allied development fields through seminars, conferences, executive education programmes, community development programmes, publications and training programmes and events;

(xi) to undertake programmes for development and training of faculty and researchers of the University in partnership with any other university of quality with prior approval of the State Government;

(xii) to undertake necessary or expedient action to pursue and promote the objectives of the University;

(xiii) to pursue any objectives as may be approved by the Government for the enhancement of education and other development sectors in India.

**8. Powers of the University:-**The University shall have the following powers, namely:-

(i) to establish and maintain such Campuses, Regional Centres and Study Centres in Karnataka as may be determined by the University from time to time in the manner laid down by the Statutes with prior approval of the Government and as per UGC norms;

(ii) to carry out all such other activities as may be necessary or feasible in furtherance of the object of the University;

(iii) to confer degrees or other academic distinctions in the manner and under conditions laid down in the Statutes;

(iv) to institute and award fellowships, scholarships and prizes, awards, medals etc., in accordance with the Statutes;

(v) to demand and receive such fees, bills, invoices and collect charges as may be fixed by the Statutes or rules, as the case may be;

(vi) to make provisions for extracurricular activities for students and employees;

(ಆರ್) "ರಾಜ್ಯ" ಎಂದರೆ, ಕರ್ನಾಟಕ ರಾಜ್ಯ;

(ಎಸ್) "ಪರಿನಿಯಮಗಳು" ಮತ್ತು "ವಿನಿಯಮಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಅನುಕ್ರಮವಾಗಿ ವಿಶ್ವವಿದ್ಯಾಲಯದ ಪರಿನಿಯಮಗಳು ಮತ್ತು ವಿನಿಯಮಗಳು;

(ಟಿ) "ಅಧ್ಯಯನ ಕೇಂದ್ರ" ಎಂದರೆ, ವಿದ್ಯಾರ್ಥಿಗಳಿಗೆ ಅಗತ್ಯವಾದ ಬುದ್ಧಿವಾದ, ಸಲಹೆಗಳನ್ನು ನೀಡುವ ಅಥವಾ ಇತರ ಯಾವುದೇ ನೆರವನ್ನು ನೀಡುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯವು ಸ್ಥಾಪಿಸಿದ ಮತ್ತು ನಿರ್ವಹಿಸಿಕೊಂಡುಬಂದ ಒಂದು ಕೇಂದ್ರ;

(ಯು) "ಅಧ್ಯಾಪಕರು" ಎಂದರೆ, ಒಬ್ಬ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಅಥವಾ ವಿಶ್ವವಿದ್ಯಾಲಯದಲ್ಲಿ ಅಥವಾ ಒಂದು ಘಟಕ ಕಾಲೇಜಿನಲ್ಲಿ ಬೋಧಿಸುವುದಕ್ಕೆ ಅಥವಾ ಸಂಶೋಧನೆ ನಡೆಸುವುದಕ್ಕೆ ಅಥವಾ ಸಂಶೋಧನೆಗೆ ಮಾರ್ಗದರ್ಶನ ನೀಡುವುದಕ್ಕೆ ನೇಮಕವಾದ ಅಂಥ ಇತರ ವ್ಯಕ್ತಿ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗವು ನಿಯಮಿಸಿದ ಗುಣಮಟ್ಟಗಳಿಗೆ ಅನುಸಾರವಾಗಿ ಇರುವ ಘಟಕ ಕಾಲೇಜಿನ ಪ್ರಾಂಶುಪಾಲರು ಇದರಲ್ಲಿ ಒಳಗೊಳ್ಳುತ್ತಾರೆ;

(ವಿ) "ವಿಶ್ವವಿದ್ಯಾಲಯ ಅನುದಾನಗಳ ಆಯೋಗ" ಎಂದರೆ, ವಿಶ್ವವಿದ್ಯಾಲಯ ಅನುದಾನಗಳ ಆಯೋಗ ಅಧಿನಿಯಮ, 1956ರ (1956ರ ಕೇಂದ್ರ ಅಧಿನಿಯಮ 3) 4ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಆಯೋಗ;

(ಡಬ್ಲ್ಯೂ) "ವಿಶ್ವವಿದ್ಯಾಲಯ" ಎಂದರೆ, ಈ ಅಧಿನಿಯಮದಡಿಯಲ್ಲಿ ಸ್ಥಾಪಿಸಿ ನಿಗಮಿತಗೊಳಿಸಲಾದ ಶ್ರೀನಿವಾಸ ವಿಶ್ವವಿದ್ಯಾಲಯ;

(ಎಕ್ಸ್) "ಸಂದರ್ಶಕರು" ಎಂದರೆ, 13ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ವಿಶ್ವವಿದ್ಯಾಲಯದ ಸಂದರ್ಶಕರು.

## ಅಧ್ಯಾಯ– II

## ವಿಶ್ವವಿದ್ಯಾಲಯ ಮತ್ತು ಪ್ರಾಯೋಜಕ ಸಂಸ್ಥೆ

**3. ವಿಶ್ವವಿದ್ಯಾಲಯದ ಸ್ಥಾಪನೆಗೆ ಪ್ರಸ್ತಾವ.–** (1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಮತ್ತು ಅದಕ್ಕನುಸಾರವಾಗಿ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಹಕ್ಕನ್ನು ಪ್ರಾಯೋಜಕ ನ್ಯಾಸವು ಹೊಂದಿರತಕ್ಕದ್ದು.

(2) ಪ್ರಾಯೋಜಕ ನ್ಯಾಸವು ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು.

(3) ಪ್ರಸ್ತಾವವು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಪ್ರಾಯೋಜಕ ನ್ಯಾಸದ ವಿವರಗಳೊಂದಿಗೆ ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು;

(ii) ವಿಶ್ವವಿದ್ಯಾಲಯದ ವ್ಯಾಪ್ತಿ ಮತ್ತು ಸ್ಥಾನಮಾನ ಹಾಗೂ ಭೂಮಿಯ ಲಭ್ಯತೆ;

(iii) ಪ್ರಾರಂಭದ ದಿನಾಂಕದಿಂದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ವಿಶ್ವವಿದ್ಯಾಲಯವು ಕೈಗೊಳ್ಳಬೇಕೆಂದಿರುವ ಅಧ್ಯಯನ ಮತ್ತು ಸಂಶೋಧನಾ ಕಾರ್ಯಕ್ರಮಗಳ ಸ್ವರೂಪ ಮತ್ತು ಬಗೆಗಳು;

(iv) ಪ್ರಾರಂಭಿಸಬೇಕೆಂದು ಪ್ರಸ್ತಾಪಿಸಿರುವ ವ್ಯಾಸಂಗ ವಿಭಾಗಗಳು (ಫ್ಯಾಕಲ್ಟಿಗಳು), ಅಧ್ಯಯನ ಕ್ರಮಗಳು ಮತ್ತು ಸಂಶೋಧನೆಗಳ ಸ್ವರೂಪ;

(v) ಕಟ್ಟಡಗಳು, ಸಲಕರಣೆಗಳು ಮತ್ತು ರಚನಾ ಸೌಕರ್ಯಗಳನ್ನು ಒದಗಿಸುವಂಥ ಕ್ಯಾಂಪಸ್ ಅಭಿವೃದ್ಧಿ;

(vi) ಪ್ರಾರಂಭದ ದಿನಾಂಕದ ನಿಕಟ ಐದು ಶೈಕ್ಷಣಿಕ ವರ್ಷಗಳ ಅವಧಿಗಾಗಿ ಬಂಡವಾಳ ವೆಚ್ಚದ ಹಂತಗಳು;

(vii) ಬಾಬುವಾರು ಆವರ್ತಕ ವೆಚ್ಚ, ಆರ್ಥಿಕ ಮೂಲಗಳು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಗೆ ತಗಲುವ ಅಂದಾಜು ವೆಚ್ಚ;

(viii) ಸಂಪನ್ಮೂಲ ಸಂಗ್ರಹಣೆಗಾಗಿ ಯೋಜನೆ ಮತ್ತು ಅದಕ್ಕೆ ಬಂಡವಾಳದಿಂದ ತಗಲುವ ವೆಚ್ಚ ಹಾಗೂ ಪ್ರತಿಯೊಂದು ಮೂಲಕ್ಕೂ ಮರು ಸಂದಾಯ ಮಾಡುವ ರೀತಿ;

(ix) ವಿದ್ಯಾರ್ಥಿಗಳಿಂದ ಶುಲ್ಕ ವಸೂಲು ಮಾಡಿ ಆಂತರಿಕವಾಗಿ ನಿಧಿ ಸಂಗ್ರಹಿಸುವ ಯೋಜನೆ, ಸಲಹಾ ಸೇವೆ ಮತ್ತು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳಿಗೆ ಸಂಬಂಧಿಸಿದ ಇತರ ಚಟುವಟಿಕೆಗಳಿಂದ ನಿರೀಕ್ಷಿತ ವರಮಾನಗಳು ಮತ್ತು ಇತರ ನಿರೀಕ್ಷಿತ ವರಮಾನಗಳು;

(x) ಘಟಕವೊಂದಕ್ಕೆ ತಗಲುವ ವೆಚ್ಚದ ವಿವರಗಳು, ಆರ್ಥಿಕವಾಗಿ ದುರ್ಬಲವಾದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಶುಲ್ಕ, ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿ ವೇತನದಲ್ಲಿ ನೀಡುವ ರಿಯಾಯಿತಿ ಅಥವಾ ವಿನಾಯತಿಯ ಪರಿಮಿತಿಯ ವಿವರಗಳನ್ನು ಮತ್ತು ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳಿಗೆ ಅಥವಾ ಅನಿವಾಸಿ ಭಾರತೀಯರು ಅಥವಾ ಭಾರತೀಯ ಮೂಲದ ವ್ಯಕ್ತಿಗಳು ಪ್ರಾಯೋಜಿಸಿದ ವಿದ್ಯಾರ್ಥಿಗಳಿಗೆ ಮತ್ತು ಭಾರತವನ್ನುಳಿದು ಇತರ ರಾಷ್ಟ್ರಗಳ ವಿದ್ಯಾರ್ಥಿಗಳಿಗೆ ವಿಧಿಸತಕ್ಕ ಶುಲ್ಕದ ದರಗಳು ಬೇರೆ ಬೇರೆ ಇದ್ದಲ್ಲಿ ಅವುಗಳನ್ನು ಸೂಚಿಸುವ ಶುಲ್ಕ ರಚನೆಯ ವಿವರಗಳು;

(xi) ಸಂಬಂಧಪಟ್ಟ ವಿದ್ಯಾ ವಿಭಾಗದಲ್ಲಿ ಎಷ್ಟು ವರ್ಷಗಳ ಅನುಭವ ಮತ್ತು ಪರಿಣಿತಿಯನ್ನು ಪ್ರಾಯೋಜಕ ನ್ಯಾಸವು ದೊರಕಿಸಿಕೊಡಲಿದೆ ಹಾಗೂ ಅದರ ಹಣಕಾಸಿನ ಸಂಪನ್ಮೂಲಗಳು;

(xii) ವಿಶ್ವವಿದ್ಯಾಲಯದಲ್ಲಿರುವ ಅಧ್ಯಯನ ಕ್ರಮಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕಾಗಿ ಇರುವ ವ್ಯವಸ್ಥೆ;

(xiii) ವಿಶ್ವವಿದ್ಯಾಲಯವು ಸ್ಥಾಪನೆಯಾಗುವುದಕ್ಕೆ ಮೊದಲು ನೆರವೇರಿಸಬೇಕೆಂದು ರಾಜ್ಯ ಸರ್ಕಾರವು ಅಗತ್ಯಪಡಿಸಬಹುದಾದ ಅಂಥ ಇತರ ಷರತ್ತುಗಳ ನೆರವೇರಿಕೆಯ ಹಂತ.

(4) ಪ್ರಾಯೋಜಕ ನ್ಯಾಸದಿಂದ ಸ್ವೀಕರಿಸಿದ ಪ್ರಸ್ತಾವಗಳನ್ನು ಪರೀಕ್ಷಿಸಲು ರಾಜ್ಯ ಸರ್ಕಾರವು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ಪದನಿಮಿತ್ತ ಸದಸ್ಯರಾದ ಮೂರು ಸದಸ್ಯರುಗಳನ್ನು ಒಳಗೊಂಡ ಒಂದು ಶೋಧನಾ ಸಮಿತಿಯನ್ನು ರಚಿಸತಕ್ಕದ್ದು ಮತ್ತು ಅದು ವಿಶ್ವವಿದ್ಯಾಲಯದ ಸ್ಥಾಪನೆಗೆ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡತಕ್ಕದ್ದು.

**4. ವಿಶ್ವವಿದ್ಯಾಲಯದ ಸ್ಥಾಪನೆ.–** (1) ರಾಜ್ಯ ಸರ್ಕಾರವು ಶೋಧನಾ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಪರಿಶೀಲಿಸಿದ ತರುವಾಯ ಮತ್ತು ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ,–

(i) ನ್ಯಾಸವು ಸಾಕಷ್ಟು ಮೂಲ ಸೌಕರ್ಯದೊಂದಿಗೆ ವಿಶ್ವವಿದ್ಯಾಲಯವೊಂದನ್ನು ನಡೆಸಲು ಸಮರ್ಥವಾಗಿದೆ ಎಂದು ಅದು ಮನಗಂಡರೆ;

(ii) ಪ್ರದೇಶಕ್ಕನುಸಾರವಾಗಿ ಕೆಳಗೆ ನಿರ್ದಿಷ್ಟ ಪಡಿಸಿದ ವ್ಯಾಪ್ತಿಗೆ ಭೂಮಿಯ ಒಡೆತನವನ್ನು ಹೊಂದಿರತಕ್ಕದ್ದು, ಎಂದರೆ:–

(ಎ) ಭೂಮಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿತಿಯೊಳಗಿದ್ದರೆ ಇಪ್ಪತ್ತೈದು ಎಕರೆಗಳು;

(ಬಿ) ಭೂಮಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಮಿತಿಯಿಂದ ಹೊರಗೆ ಇದ್ದು, ಆದರೆ ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಪ್ರದೇಶದ ಒಳಗೆ ಇದ್ದರೆ ನಲವತ್ತು ಎಕರೆಗಳು;

(ಸಿ) ಭೂಮಿಯು (ಎ) ಮತ್ತು (ಬಿ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳನ್ನು ಹೊರತುಪಡಿಸಿದ್ದರೆ ಅರವತ್ತು ಎಕರೆಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.

ಮೇಲೆ ನಿರ್ದಿಷ್ಟಪಡಿಸಿದ ಭೂಮಿಯು ಏಕ ಘಟಕ (ಸಿಂಗಲ್ ಬ್ಲಾಕ್) ದಲ್ಲಿರತಕ್ಕದ್ದು ಮತ್ತು ಇದು ಸಂಬಂಧಪಟ್ಟ ನ್ಯಾಸ/ಪ್ರತಿಷ್ಠಾನ/ ಸಂಸ್ಥೆ/ವಿಶ್ವವಿದ್ಯಾಲಯದ ಹೆಸರಿನಲ್ಲಿರತಕ್ಕದ್ದು. 3ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ ಅಗತ್ಯಪಡಿಸಲಾದಂತೆ ಒದಗಿಸಿದ ವಿವರಗಳ ಆಧಾರದ ಮೇಲೆ ಸರ್ಕಾರವು 47ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸಬೇಕೆಂದು ನ್ಯಾಸಕ್ಕೆ ನಿರ್ದೇಶನ ನೀಡಬಹುದು.

(2) ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಸ್ಥಾಪನೆಯ ತರುವಾಯ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, **"**ಶ್ರೀನಿವಾಸ ವಿಶ್ವವಿದ್ಯಾಲಯ**"** ಎಂಬ ಹೆಸರಿನ ಒಂದು ಏಕಾತ್ಮಕ ಸ್ವರೂಪದ ವಿಶ್ವವಿದ್ಯಾಲಯವನ್ನು ರಾಜ್ಯದಲ್ಲಿ ಸ್ಥಾಪಿಸುವುದಕ್ಕೆ ಮಂಜೂರಾತಿಯನ್ನು ನೀಡಬಹುದು.

(3) ವಿಶ್ವವಿದ್ಯಾಲಯದ ಕೇಂದ್ರ ಕಾರ್ಯಸ್ಥಾನವು ಮಂಗಳೂರಿನಲ್ಲಿ ಇರತಕ್ಕದ್ದು. ವಿಶ್ವವಿದ್ಯಾಲಯವು ತನ್ನ ಕ್ಯಾಂಪಸ್ಸುಗಳನ್ನು ಅಥವಾ ಪ್ರಾದೇಶಿಕ ಕೇಂದ್ರಗಳನ್ನು, ಅಧ್ಯಯನ ಕೇಂದ್ರಗಳನ್ನು ಕರ್ನಾಟಕದ ಯಾವುದೇ ಭಾಗದಲ್ಲಿ ಹೊಂದಿರತಕ್ಕದ್ದು ಮತ್ತು ಆ ಬಗ್ಗೆ ರಾಜ್ಯ ಸರ್ಕಾರದ ಪೂರ್ವಾನುಮತಿಯನ್ನು ಪಡೆದುಕೊಳ್ಳುವುದಕ್ಕೊಳಪಟ್ಟು ಹಾಗೂ ವಿಶ್ವವಿದ್ಯಾಲಯದ ಅನುದಾನ ಆಯೋಗದ ಗುಣಮಟ್ಟಗಳಿಗನುಸಾರವಾಗಿ ಹೊಂದಿರತಕ್ಕದ್ದು.

(4) ಮೊದಲ ಕುಲಾಧಿಪತಿಯವರು, ಮೊದಲ ಕುಲಪತಿಯವರು, ಪ್ರಬಂಧಕ ಮಂಡಳಿಯ ಮೊದಲ ಸದಸ್ಯರುಗಳು, ವ್ಯವಸ್ಥಾಪನಾ ಮಂಡಳಿಯ ಹಾಗೂ ಶೈಕ್ಷಣಿಕ ಪರಿಷತ್ತಿನ ಮೊದಲ ಸದಸ್ಯರುಗಳು ಮತ್ತು ಇನ್ನು ಮುಂದೆ, ಅಂಥ ಅಧಿಕಾರಿಗಳು ಅಥವಾ ಸದಸ್ಯರುಗಳಾಗಬಹುದಾದಂಥ ಎಲ್ಲಾ ವ್ಯಕ್ತಿಗಳು, ಅಂಥ ಪದ ಅಥವಾ ಸದಸ್ಯತ್ವವನ್ನು ಹೊಂದಿರುವುದು ಮುಂದುವರೆಯುವವರೆಗೆ, ಒಂದು ನಿಗಮಿತ ನಿಕಾಯವನ್ನು ರಚಿಸತಕ್ಕದ್ದು. ಮತ್ತು ಅದು ವಿಶ್ವವಿದ್ಯಾಲಯದ ಹೆಸರಿನಲ್ಲಿ ದಾವೆ ಹೂಡಬಹುದು ಮತ್ತು ದಾವೆಗೊಳಗಾಗಬಹುದು.

(5) (2)ನೇ ಉಪಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಗೆ ಮಂಜೂರಾತಿಯಾದ ಮೇಲೆ, ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ, ನ್ಯಾಸವು ಆರ್ಜಿಸಿದ, ಸೃಜಿಸಿದ, ಏರ್ಪಾಟು ಮಾಡಿಕೊಂಡ ಅಥವಾ ಕಟ್ಟಲ್ಪಟ್ಟ ಭೂಮಿ ಮತ್ತು ಇತರ ಸ್ಥಿರ ಮತ್ತು ಚರ ಸ್ವತ್ತು, ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರತಕ್ಕದ್ದು.

(6) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಮತ್ತು ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

(7) ವಿಶ್ವವಿದ್ಯಾಲಯದಲ್ಲಿನ ಭೂಮಿ, ಕಟ್ಟಡ ಮತ್ತು ಇತರ ಸ್ವತ್ತುಗಳನ್ನು ವಿಶ್ವವಿದ್ಯಾಲಯದ ಉದ್ದೇಶಗಳಿಗೆ ಆನುಷಂಗಿಕವಾಗಿರುವುದನ್ನು ಹೊರತುಪಡಿಸಿ ಇತರ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

**5. ಅನುದಾನಗಳು ಮತ್ತು ಹಣಕಾಸು ನೆರವು.–** ವಿಶ್ವವಿದ್ಯಾಲಯವು ಸ್ವಂತ ಧನಮೂಲ ಉಳ್ಳದ್ದಾಗಿರತಕ್ಕದ್ದು ಮತ್ತು ರಾಜ್ಯದಿಂದ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಇತರ ಸಂಸ್ಥೆ ಅಥವಾ ನಿಗಮದಿಂದ ಯಾವುದೇ ನಿರ್ವಹಣಾ ಸಹಾಯ ಅನುದಾನ ಅಥವಾ ಯಾವುದೇ ಹಣಕಾಸು ನೆರವನ್ನು ಹಕ್ಕಿನಿಂದ ಕೇಳತಕ್ಕದ್ದಲ್ಲ ಅಥವಾ ಅದನ್ನು ಪಡೆಯಲು ಹಕ್ಕನ್ನು ಹೊಂದಿರತಕ್ಕದ್ದಲ್ಲ:

ಪರಂತು, ರಾಜ್ಯವು,–

(ಎ) ಇತರ ರಾಜ್ಯ ಸರ್ಕಾರದ ಸಂಘಟನೆಗಳಿಗೆ ಹಣಕಾಸು ನೆರವನ್ನು ಒದಗಿಸುತ್ತಿರುವಂಥದ್ದೇ ಸಂಶೋಧನೆ, ಅಭಿವೃದ್ಧಿ ಮತ್ತಿತರ ಚಟುವಟಿಕೆಗಳಿಗಾಗಿ; ಅಥವಾ

(ಬಿ) ರಾಜ್ಯ ಸರ್ಕಾರದಿಂದ ನೆರವನ್ನು ಪಡೆಯುವ ಯಾವುದೇ ನಿರ್ದಿಷ್ಟ ಸಂಶೋಧನೆ ಅಥವಾ ಕಾರ್ಯಕ್ರಮಗಳಿಗಾಗಿ; ಮತ್ತು

(ಸಿ) ರಾಜ್ಯ ಕಾರ್ಯನೀತಿಯ ಬದಲಾವಣೆಗೆ ಒಳಪಟ್ಟು ಅಥವಾ ಅನ್ಯಥಾ ಇದೇ ಬಗೆಯ ವಿಶ್ವವಿದ್ಯಾಲಯಗಳಿಗೆ ಅವಕಾಶವನ್ನು ಕಲ್ಪಿಸುವುದಕ್ಕೆ ಅಥವಾ ಅವುಗಳ ಪ್ರಯೋಜನಕ್ಕಾಗಿ,

– ಅನುದಾನದ ಮೂಲಕ ಅಥವಾ ಅನ್ಯಥಾ ಹಣಕಾಸು ಬೆಂಬಲವನ್ನು ಒದಗಿಸಬಹುದು:

ಮತ್ತು ಪರಂತು, ವಿಶ್ವವಿದ್ಯಾಲಯವು, ಯಾವುದೇ ಇತರ ಮೂಲದಿಂದ ಯಾವುದೇ ಆರ್ಥಿಕ ನೆರವನ್ನು ಸ್ವೀಕರಿಸಬಹುದು.

**6. ಘಟಕ ಕಾಲೇಜು, ಹೆಚ್ಚುವರಿ ಕ್ಯಾಂಪಸ್‌ಗಳು, ಪ್ರಾದೇಶಿಕ ಕೇಂದ್ರಗಳು ಅಥವಾ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವುದಕ್ಕೆ ಅಧಿಕಾರ.–** ವಿಶ್ವವಿದ್ಯಾಲಯವು ಸ್ಥಾಪನೆಯಾದ ತರುವಾಯ ಐದು ವರ್ಷಗಳನ್ನು ಪೂರ್ಣಗೊಳಿಸಿದ ನಂತರ, ವಿಶ್ವವಿದ್ಯಾಲಯ ಅನುದಾನ ಆಯೋಗದ ಮತ್ತು ಇತರ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ಗುಣಮಟ್ಟಗಳಿಗೆ ಒಳಪಟ್ಟು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ವಿಶ್ವವಿದ್ಯಾಲಯವು, ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂಥ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಹೆಚ್ಚುವರಿ ಕ್ಯಾಂಪಸ್‌ಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಹೊಂದಿರಬಹುದು.

**7. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ವಿಶ್ವವಿದ್ಯಾಲಯವು, ತನ್ನ ಭವಿಷ್ಯದ್‌ದೃಷ್ಟಿ ಮತ್ತು ಧ್ಯೇಯೋದ್ದೇಶಗಳನ್ನು ಸಾಧಿಸಲು ಈ ಮುಂದಿನಂತೆ ವಿವಿಧ ಬಗೆಯ ಕಾರ್ಯತಂತ್ರಗಳನ್ನು ಕೈಗೊಳ್ಳಬಹುದು:–

(i) ತಾಂತ್ರಿಕತೆ, ಆರೋಗ್ಯ, ವ್ಯವಸ್ಥಾಪನೆ, ಜೀವ ವಿಜ್ಞಾನಗಳು ಮತ್ತು ಸಂಬಂಧಿತ ವಲಯಗಳಲ್ಲಿ ಸ್ನಾತಕೋತ್ತರ, ಡಾಕ್ಟೊರಲ್ ಮತ್ತು ಪೋಸ್ಟ್ ಡಾಕ್ಟೊರಲ್ ಕೋರ್ಸುಗಳಿಗೆ ಮುಂದುವರಿಯುವ ಮತ್ತು ಅವುಗಳನ್ನು ಒಳಗೊಳ್ಳುವ ವಿಶ್ವವಿದ್ಯಾಲಯ ಶಿಕ್ಷಣದಲ್ಲಿ ಪ್ರಗತಿಯನ್ನು ಮತ್ತು ಅನ್ವೇಷಣೆಯನ್ನು ಬೆಂಬಲಿಸುವುದು, ಪ್ರೋತ್ಸಾಹಿಸುವುದು ಮತ್ತು ಕೈಗೊಳ್ಳುವುದು ಹಾಗೂ ಈ ಕ್ಷೇತ್ರಗಳಲ್ಲಿ ಸಲಹೆಯನ್ನೂ ಒಳಗೊಂಡಂತೆ ಸಂಶೋಧನೆ, ಪ್ರಗತಿ ಮತ್ತು ಪ್ರಸಾರಕ್ಕೆ ಅವಕಾಶವನ್ನು ಕಲ್ಪಿಸುವುದು;

(ii) ವಿದ್ಯಾರ್ಥಿಗಳಿಗೆ, ಬೋಧಕ ವೃಂದದ (ಫ್ಯಾಕಲ್ಟಿ) ಸದಸ್ಯರಿಗೆ ಮತ್ತು ಇತರರಿಗೆ ನಿರ್ದಿಷ್ಟ ಶೈಕ್ಷಣಿಕ ಮತ್ತು ಸಂಶೋಧನಾ ಕಾರ್ಯಕ್ರಮಗಳನ್ನು, ತರಬೇತಿ ಕಾರ್ಯಕ್ರಮಗಳನ್ನು ಮತ್ತು ವಿನಿಮಯ ಕಾರ್ಯಕ್ರಮಗಳನ್ನು ಪರಿಕಲ್ಪಿಸಲು, ವಿನ್ಯಾಸಗೊಳಿಸಲು, ಅಭಿವೃದ್ಧಿಪಡಿಸಲು ಇತರ ಯಾವುದೇ ವಿಶ್ವವಿದ್ಯಾಲಯಗಳು, ಸಂಶೋಧನಾ ಸಂಸ್ಥೆಗಳು, ಲಾಭರಹಿತ ಸಂಸ್ಥೆಗಳು, ಕೈಗಾರಿಕಾ ಸಂಸ್ಥೆಗಳು, ವೃತ್ತಿಪರ ಸಂಸ್ಥೆಗಳು ಅಥವಾ ಇತರ ಸಂಸ್ಥೆಗಳೊಂದಿಗೆ ಸಹಯೋಗವನ್ನು ಹೊಂದುವುದು;

(iii) ರಾಜ್ಯ ಸರ್ಕಾರದ ಪೂರ್ವ ಅನುಮೋದನೆಯೊಡನೆ, ಯಾವುದೇ ಸಂಸ್ಥೆಯೊಂದಿಗೆ ಸಹಯೋಗ ಹೊಂದಿ ಸಂಶೋಧನೆಯನ್ನು ಮತ್ತು ಹೊಸತನವನ್ನು ಬೆಳಕಿಗೆ ತರುವುದು;

(iv) ತಾನು ಸೂಕ್ತವೆಂದು ಭಾವಿಸಬಹುದಾದಂತೆ, ಕಲಿಕೆಯ ಅಂಥ ಶಾಖೆಗಳಲ್ಲಿ ಬೋಧನಾ ಮತ್ತು ಸಂಶೋಧನಾ ಸೌಲಭ್ಯಗಳನ್ನು ಒದಗಿಸಿ ಜ್ಞಾನ ಪ್ರಸಾರ ಮಾಡುವುದು ಮತ್ತು ಅದನ್ನು ಮುಂದುವರೆಸುವುದು ಹಾಗೂ ವಿಶೇಷವಾಗಿ ತಾಂತ್ರಿಕ, ಆರೋಗ್ಯ, ವ್ಯವಸ್ಥಾಪನೆ, ಜೀವ ವಿಜ್ಞಾನಗಳು ಮತ್ತು ಸಂಬಂಧಿತ ಕೋರ್ಸುಗಳಲ್ಲಿ ಸಮಗ್ರ ವ್ಯಾಸಂಗ ವಿಷಯಗಳಿಗಾಗಿ ವಿಶೇಷ ಉಪಬಂಧ ಕಲ್ಪಿಸುವುದು ಮತ್ತು ವಿಶ್ವವಿದ್ಯಾಲಯದಲ್ಲಿ ಅಂತರವಿದ್ಯಾವಿಷಯಗಳ ಅಧ್ಯಯನ ಮತ್ತು ಸಂಶೋಧನೆಗೆ ಉತ್ತೇಜನ ನೀಡುವುದಕ್ಕಾಗಿ ಸೂಕ್ತ ಕ್ರಮ ಕೈಗೊಳ್ಳುವುದು;

(v) ಇಂಜಿನಿಯರಿಂಗ್ ಪರಿಹಾರಗಳನ್ನೊದಗಿಸುವ ಭವಿಷ್ಯದ ಸಮರ್ಥವಾದ ತಾಂತ್ರಿಕತೆಗಳ ಸಂಶೋಧನೆಯೊಂದಿಗೆ ಮತ್ತು ತಾಂತ್ರಿಕ ವ್ಯವಹಾರ ಮತ್ತು ಬೆಳೆಯುತ್ತಿರುವ ತಾಂತ್ರಿಕತೆಗೆ ಬೆಂಬಲದೊಂದಿಗೆ ಉನ್ನತ ತಾಂತ್ರಿಕ ಮತ್ತು ವೃತ್ತಿಪರ ಕೈಗಾರಿಕೆಗಳ ಬೇಡಿಕೆಗಳನ್ನು ಈಡೇರಿಸುವುದು;

(vi) ಉನ್ನತ ಕಲಿಕೆಗೆ ಪ್ರವೇಶಾವಕಾಶಗಳನ್ನು ಮತ್ತು ನ್ಯಾಯಸಮ್ಮತತೆಗೆ ಉತ್ತೇಜನ ನೀಡುವ ದೃಷ್ಟಿಯಿಂದ, ಕಲಿಕೆಯ ವಿಧಾನಗಳು ಮತ್ತು ಸ್ಥಳಗಳು, ವ್ಯಾಸಂಗ ಕ್ರಮಗಳ ಸಂಯೋಜನೆ, ದಾಖಲಾತಿಗಾಗಿ ಅರ್ಹತೆ, ಪ್ರವೇಶದ ವಯಸ್ಸು, ಪರೀಕ್ಷೆಯನ್ನು ನಡೆಸುವುದು ಮತ್ತು ಕಾರ್ಯಕ್ರಮಗಳ ನಿರ್ವಹಣೆಗೆ ಸಂಬಂಧಿಸಿದಂತೆ ನಮ್ಯವಾದ (ಫ್ಲೆಕ್ಸಿಬಲ್) ಮತ್ತು ಮುಕ್ತವಾದ, ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣದ ಅನ್ವೇಷಣಾ ಪದ್ಧತಿಯನ್ನು ಅಳವಡಿಸುವುದು ಹಾಗೂ ಜ್ಞಾನದ ಹೊಸ ಕ್ಷೇತ್ರಗಳಲ್ಲಿ ಉತ್ಕೃಷ್ಟತೆಗೆ ಪ್ರೋತ್ಸಾಹಿಸುವುದು, ಶೈಕ್ಷಣಿಕ ಮತ್ತು ಸಮನ್ವಯ ಕಲಿಕೆ, ಇವೆರೆಡಕ್ಕೂ ಸಮನಾದ ಪ್ರಾಮುಖ್ಯತೆಯನ್ನು ನೀಡುವುದು;

(vii) ಗುಣಮಟ್ಟದ ಶಿಕ್ಷಣಕ್ಕಾಗಿ ಕೊಡುಗೆಯನ್ನು ನೀಡಲು ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಸಂಪನ್ಮೂಲ ಕೇಂದ್ರಗಳನ್ನು ಅಭಿವೃದ್ಧಿಪಡಿಸುವುದು;

(viii) ಕರ್ನಾಟಕದಲ್ಲಿ ವಿವಿಧ ಸ್ಥಳಗಳಲ್ಲಿ ಕ್ಯಾಂಪಸುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳು ಮತ್ತು ಸಂಯೋಜಿತ ಕಾಲೇಜುಗಳನ್ನು ಸ್ಥಾಪಿಸುವುದು ಮತ್ತು ತಾಂತ್ರಿಕತೆ, ವೃತ್ತಿಪರತೆ, ಸಾಮಾನ್ಯ ಶಿಕ್ಷಣ ಮತ್ತು ಸಮಾಜ ಮತ್ತು ಮಾನವ ಅಭಿವೃದ್ಧಿಯಲ್ಲಿ ಶೈಕ್ಷಣಿಕ ಬದಲಾವಣೆಗೆ ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಕೊಡುಗೆ ನೀಡುವುದು ಮತ್ತು ಜ್ಞಾನವನ್ನು ಅಭಿವೃದ್ಧಿಪಡಿಸುವುದು;

(ix) ಮೌಲ್ಯಮಾಪನದ ವಿವಿಧ ಆಧುನಿಕ ವಿಧಾನಗಳ ಮೂಲಕ ಮಾಡಿದ ಮೌಲ್ಯಮಾಪನಕ್ಕೆ ಅನುಸಾರವಾಗಿ ಶಿಕ್ಷಣವನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದುದರ ಆಧಾರದ ಮೇಲೆ ನೀಡಲು ಪದವಿಗಳನ್ನು, ಡಿಪ್ಲೋಮೋಗಳನ್ನು, ಪ್ರಮಾಣಪತ್ರಗಳನ್ನು ಮತ್ತು ಯಶೋಪತ್ರ ಪ್ರದಾನದಂಥ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು;

(x) ಉಪನ್ಯಾಸ ಮಾಲಿಕೆಗಳು, ವಿಚಾರ ಸಂಕಿರಣಗಳು, ಸಮ್ಮೇಳನಗಳು, ಕಾರ್ಯಾಂಗ ಶಿಕ್ಷಣ ಕಾರ್ಯಕ್ರಮಗಳು, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳು, ಪ್ರಕಟಣೆಗಳು ಮತ್ತು ತರಬೇತಿ ಕಾರ್ಯಕ್ರಮಗಳು ಮತ್ತು ಕಾರ್ಯಸೂಚಿಗಳ ಮೂಲಕ ಜ್ಞಾನ ಪ್ರಸಾರ ಮಾಡುವುದು ಮತ್ತು ಶಿಕ್ಷಣ ಮತ್ತು ತತ್ಸಂಬಂಧಿತ ಅಭಿವೃದ್ಧಿ ಕ್ಷೇತ್ರಗಳ ವಿಷಯಗಳ ಬಗ್ಗೆ ಸಾರ್ವಜನಿಕ ಚರ್ಚೆಯನ್ನು ಏರ್ಪಡಿಸುವುದು;

(xi) ರಾಜ್ಯ ಸರ್ಕಾರದ ಪೂರ್ವ ಅನುಮತಿಯೊಂದಿಗೆ, ಉತ್ತಮ ಗುಣಮಟ್ಟದ ಇತರ ಯಾವುವೇ ವಿಶ್ವವಿದ್ಯಾಲಯಗಳೊಂದಿಗೆ ಸಹಭಾಗಿಗಳಾಗಿ ವಿಶ್ವವಿದ್ಯಾಲಯದ ಬೋಧಕ ವೃಂದ (ಫ್ಯಾಕಲ್ಟಿ) ಮತ್ತು ಸಂಶೋಧಕರ ಅಭಿವೃದ್ಧಿ ಮತ್ತು ತರಬೇತಿಗಾಗಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದು;

(xii) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಮುಂದುವರಿಸುವುದಕ್ಕಾಗಿ ಮತ್ತು ಉತ್ತೇಜಿಸುವುದಕ್ಕಾಗಿ ಅವಶ್ಯಕವಾದ ಮತ್ತು ಯುಕ್ತವಾದ ಕ್ರಮಗಳನ್ನು ಕೈಗೊಳ್ಳುವುದು;

(xiii) ಭಾರತದಲ್ಲಿ ಶಿಕ್ಷಣ ಮತ್ತು ಇತರ ಅಭಿವೃದ್ಧಿ ವಲಯಗಳನ್ನು ವಿಸ್ತರಿಸುವುದಕ್ಕಾಗಿ ಸರ್ಕಾರವು ಅನುಮೋದಿಸಬಹುದಾದಂತೆ ಯಾವುವೇ ಧ್ಯೇಯೋದ್ದೇಶಗಳನ್ನು ಮುಂದುವರಿಸುವುದು.

**8. ವಿಶ್ವವಿದ್ಯಾಲಯದ ಅಧಿಕಾರಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಮತ್ತು ವಿಶ್ವವಿದ್ಯಾಲಯದ ಅನುದಾನ ಆಯೋಗದ ಗುಣಮಟ್ಟಗಳಿಗೆ ಅನುಸಾರವಾಗಿ ಪರಿನಿಯಮಗಳಲ್ಲಿ ಹೇಳಲಾದ ರೀತಿಯಲ್ಲಿ ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿರ್ಧರಿಸಬಹುದಾದಂತೆ ಕ್ಯಾಂಪಸ್ಸುಗಳು, ಪ್ರಾದೇಶಿಕ ಕೇಂದ್ರಗಳು ಮತ್ತು ಅಧ್ಯಯನ ಕೇಂದ್ರಗಳನ್ನು ಕರ್ನಾಟಕದಲ್ಲಿ ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(ii) ವಿಶ್ವವಿದ್ಯಾಲಯದ ಉದ್ದೇಶವನ್ನು ಕಾರ್ಯರೂಪಕ್ಕೆ ತರುವಲ್ಲಿ ಅಗತ್ಯವಾಗಬಹುದಾದ ಅಥವಾ ಕಾರ್ಯಸಾಧ್ಯವಾಗಬಹುದಾದ ಎಲ್ಲಾ ಅಂಥ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು;

(iii) ಪರಿನಿಯಮಗಳಲ್ಲಿ ಹೇಳಲಾದ ರೀತಿಯಲ್ಲಿ ಮತ್ತು ಷರತ್ತುಗಳಿಗೊಳಪಟ್ಟು ಪದವಿಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನಮಾಡುವುದು;

(iv) ಪರಿನಿಯಮಗಳನ್ವಯ ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿ ವೇತನಗಳು ಮತ್ತು ಬಹುಮಾನಗಳು, ಅವಾರ್ಡುಗಳು, ಪಾರಿತೋಷಕಗಳು ಇತ್ಯಾದಿಗಳನ್ನು ಸ್ಥಾಪಿಸುವುದು ಮತ್ತು ನೀಡುವುದು;

(v) ಪರಿನಿಯಮಗಳಲ್ಲಿ ಅಥವಾ ಸಂದರ್ಭಾನುಸಾರವಾಗಿ ನಿಯಮಗಳಲ್ಲಿ ನಿಗದಿಪಡಿಸಬಹುದಾದ ಅಂಥ ಶುಲ್ಕಗಳು, ಬಿಲ್ಲುಗಳು, ಖರೀದಿ ಪಟ್ಟಿಗಳನ್ನು ಕೇಳಿಪಡೆದುಕೊಳ್ಳುವುದು ಮತ್ತು ಸ್ವೀಕರಿಸುವುದು ಹಾಗೂ ಚಾರ್ಜುಗಳನ್ನು ವಸೂಲು ಮಾಡುವುದು;

(vi) ವಿದ್ಯಾರ್ಥಿಗಳಿಗೆ ಮತ್ತು ಸಿಬ್ಬಂದಿಗಳಿಗೆ ಪಠ್ಯೇತರ ಚಟುವಟಿಕೆಗಳಿಗೆ ಅವಕಾಶಗಳನ್ನು ಕಲ್ಪಿಸುವುದು;

(vii) ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ, ಕ್ಯಾಂಪಸುಗಳ, ಪ್ರಾದೇಶಿಕ ಕೇಂದ್ರಗಳ, ಅಧ್ಯಯನ ಕೇಂದ್ರಗಳ ಫ್ಯಾಕಲ್ಟಿ, ಅಧಿಕಾರಿಗಳು ಮತ್ತು ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳುವುದು;

(viii) ವಿಶ್ವವಿದ್ಯಾಲಯದ ಅಥವಾ ಒಂದು ಘಟಕ ಕಾಲೇಜಿನ ಅಥವಾ ಕ್ಯಾಂಪಸ್ಸಿನ, ಪ್ರಾದೇಶಿಕ ಕೇಂದ್ರದ, ಅಧ್ಯಯನ ಕೇಂದ್ರದ ಉದ್ದೇಶಕ್ಕಾಗಿ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದಿರುವ, ಯಾವುದೇ ರೀತಿಯ ಸ್ವಯಂ ದೇಣಿಗೆಗಳು ಮತ್ತು ಕೊಡುಗೆಗಳನ್ನು ಸ್ವೀಕರಿಸುವುದು ಮತ್ತು ನ್ಯಾಸ ಮತ್ತು ದತ್ತಿ ಸ್ವತ್ತುಗಳೂ ಸೇರಿದಂತೆ, ಯಾವುದೇ ಚರ ಅಥವಾ ಸ್ಥಿರ ಸ್ವತ್ತನ್ನು ಆರ್ಜಿಸುವುದು, ಹೊಂದಿರುವುದು, ನಿರ್ವಹಿಸುವುದು, ನಡೆಸುವುದು ಮತ್ತು ಹಸ್ತಾಂತರ ಮಾಡುವುದು;

(ix) ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸಿಕೊಂಡು ಬರುವುದು ಹಾಗೂ ವಿಶ್ವವಿದ್ಯಾಲಯದ ಅಥವಾ ಘಟಕ ಕಾಲೇಜಿನ ವಿದ್ಯಾರ್ಥಿಗಳಿಗೆ ವಸತಿ ಸ್ಥಳಗಳಾಗಿ ಮಾನ್ಯತೆ ನೀಡುವುದು;

(x) ವಸತಿಯ ಮೇಲ್ವಿಚಾರಣೆ ಮಾಡುವುದು ಮತ್ತು ನಿಯಂತ್ರಣ ಮಾಡುವುದು ಹಾಗೂ ವಿದ್ಯಾರ್ಥಿಗಳು ಮತ್ತು ಎಲ್ಲಾ ಪ್ರವರ್ಗಗಳ ಸಿಬ್ಬಂದಿಗಳಲ್ಲಿ ಶಿಸ್ತು ನಿಯಂತ್ರಣ ಮಾಡುವುದು ಮತ್ತು ವಿದ್ಯಾರ್ಥಿಗಳು ಮತ್ತು ಸಿಬ್ಬಂದಿಗಳಿಗೆ ನಡತೆ ಸಂಹಿತೆಯನ್ನು ರೂಪಿಸುವುದೂ ಒಳಗೊಂಡಂತೆ, ಅಂಥ ಸಿಬ್ಬಂದಿಗಳ ಸೇವಾಷರತ್ತುಗಳನ್ನು ನಿರೂಪಿಸುವುದು;

(xi) ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಬೆಂಬಲ ಸಿಬ್ಬಂದಿಯ ಹುದ್ದೆಗಳನ್ನು ಮತ್ತು ಇತರ ಅವಶ್ಯ ಹುದ್ದೆಗಳನ್ನು ಸೃಜಿಸುವುದು;

(xii) ವಿಶ್ವವಿದ್ಯಾಲಯವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರ ವಿಶ್ವವಿದ್ಯಾಲಯಗಳೊಡನೆ ಸಹಕರಿಸುವುದು ಮತ್ತು ಸಹಯೋಗ ಹೊಂದುವುದು;

(xiii) ಶಿಕ್ಷಕರಿಗೆ, ಪಾಠಗಳನ್ನು ರಚಿಸುವವರಿಗೆ, ಮೌಲ್ಯಮಾಪಕರಿಗೆ ಮತ್ತಿತರ ಶೈಕ್ಷಣಿಕ ಸಿಬ್ಬಂದಿಗೆ ಪುನರ್ಮನನ ವ್ಯಾಸಂಗಕ್ರಮಗಳು, ಅಭಿಮುಖ ವ್ಯಾಸಂಗ ಕ್ರಮಗಳು, ಕಾರ್ಯಾಗಾರಗಳು, ವಿಚಾರಗೋಷ್ಠಿಗಳು ಮತ್ತಿತರ ಕಾರ್ಯಕ್ರಮಗಳನ್ನು ಏರ್ಪಡಿಸುವುದು ಮತ್ತು ನಡೆಸುವುದು;

(xiv) ಶೈಕ್ಷಣಿಕ ಪರಿಷತ್ತಿನ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯಕ್ಕೆ ಅಥವಾ ಘಟಕ ಕಾಲೇಜಿಗೆ, ಪ್ರಾದೇಶಿಕ ಕೇಂದ್ರಗಳಿಗೆ, ಅಧ್ಯಯನ ಕೇಂದ್ರಗಳಿಗೆ ಪ್ರವೇಶವನ್ನು ನೀಡುವುದಕ್ಕೆ ಮತ್ತು ಈ ಅಧಿನಿಯಮದಲ್ಲಿ ಕಲ್ಪಿಸಿದ ವ್ಯಾಪ್ತಿಗಿಂತ ಕಡಿಮೆಯಿಲ್ಲದಂತೆ ಕರ್ನಾಟಕದ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ನೀಡುವುದಕ್ಕೆ ಮಾನಕ ಗುಣಮಟ್ಟಗಳನ್ನು ನಿರ್ಧರಿಸುವುದು;

(xv) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅವಶ್ಯವಾಗಬಹುದಾದಂಥ ಇತರ ಎಲ್ಲಾ ಕ್ರಮಗಳನ್ನು ಅಥವಾ ಕಾರ್ಯಗಳನ್ನು, ಅವು ಮೇಲೆ ಹೇಳಿದ ಅಧಿಕಾರಗಳಿಗೆ ಪ್ರಾಸಂಗಿಕವಾಗಿರಲಿ ಅಥವಾ ಇಲ್ಲದಿರಲಿ, ಕೈಗೊಳ್ಳುವುದು;

(xvi) ಪರೀಕ್ಷೆಗಳ ಆಧಾರದ ಮೇಲೆ ಅಥವಾ ಸರ್ಕಾರದಿಂದ ಅನುಮೋದಿತವಾದ ಇತರ ಯಾವುದೇ ಮೌಲ್ಯಮಾಪನ ವಿಧಾನದ ಆಧಾರದ ಮೇಲೆ ನೀಡಲು ಪದವಿಗಳು, ಡಿಪ್ಲೋಮಾಗಳು, ಪ್ರಮಾಣಪತ್ರಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಸ್ಥಾಪಿಸುವುದು;

(xvii) ಫಿಲಂಗಳು, ಕ್ಯಾಸೆಟ್‌ಗಳು, ಧ್ವನಿಸುರುಳಿಗಳು, ದೃಶ್ಯಸುರುಳಿಗಳು, ಸಿ.ಡಿ., ವಿ.ಸಿ.ಡಿ. ಮತ್ತು ಇತರ ತಂತ್ರಾಂಶಗಳೂ ಹಾಗೂ ಇತರ ಸಂಬಂಧಿತ ವಿದ್ಯುನ್ಮಾನ ಮತ್ತು ಮುದ್ರಣ ಮಾಧ್ಯಮ ಸೇರಿದಂತೆ ಬೋಧಕ ಸಾಮಗ್ರಿಗಳನ್ನು ತಯಾರಿಸುವುದಕ್ಕಾಗಿ ಅವಕಾಶ ಕಲ್ಪಿಸುವುದು;

(xviii) ಪ್ರಬಂಧಕ ಮಂಡಳಿಯ ಅನುಮೋದನೆಯೊಡನೆ ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ಸ್ವತ್ತುಗಳನ್ನು ಭದ್ರತೆಯಾಗಿ ನೀಡಿ ಅಥವಾ ನೀಡದೆ ಹಣವನ್ನು ಪಡೆಯುವುದು, ಸಂಗ್ರಹಿಸುವುದು, ಚಂದಾದಾರರಾಗುವುದು ಮತ್ತು ಸಾಲ ಪಡೆಯುವುದು;

(xix) ಸರ್ಕಾರದ ಪೂರ್ವಾನುಮೋದನೆಯೊಂದಿಗೆ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗಳ ಆಡಳಿತವನ್ನು ವಶಪಡಿಸಿಕೊಳ್ಳುವುದು, ವಹಿಸಿಕೊಳ್ಳುವುದು ಮತ್ತು ನಡೆಸುವುದು;

(xx) ಕಾರ್ಯಕಾರಿ ಪರಿಷತ್ತು ಪೂರ್ವಾನುಮೋದನೆಯೊಂದಿಗೆ ಸ್ವತ್ತುಗಳನ್ನು ಆರ್ಜಿಸುವುದು;

(xxi) ವಿಶ್ವವಿದ್ಯಾಲಯದ ಮೇಲಿನ ಉದ್ದೇಶಗಳಿಗೆ ಸಂಬಂಧಿಸಿದ ಅಥವಾ ಪ್ರಾಸಂಗಿಕವಾದ ಯಾವುದೇ ಇತರ ಚಟುವಟಿಕೆಗಳನ್ನು ಕೈಗೊಳ್ಳುವುದು.

**9. ವಿಶ್ವವಿದ್ಯಾಲಯವು ಎಲ್ಲಾ ವರ್ಗ, ಜಾತಿ, ಮತ, ಲಿಂಗ ಅಥವಾ ರಾಷ್ಟ್ರ ಭೇದವಿಲ್ಲದೆ ಎಲ್ಲರಿಗೂ ಮುಕ್ತವಾಗಿರತಕ್ಕದ್ದು.–** ವಿಶ್ವವಿದ್ಯಾಲಯದ ಪ್ರವೇಶಗಳು ವರ್ಗ, ಜಾತಿ, ಮತ, ಲಿಂಗ ಅಥವಾ ರಾಷ್ಟ್ರ ಭೇದವಿಲ್ಲದೆ ಎಲ್ಲಾ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು. ಎಲ್ಲಾ ಪ್ರವೇಶಗಳನ್ನು ಅರ್ಹತಾ ಪರೀಕ್ಷೆಗಳಲ್ಲಿನ ಅರ್ಹತೆಯ ಆಧಾರದ ಮೇಲೆ ಮಾಡತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಎಲ್ಲಾ ಕೋರ್ಸುಗಳ ಪ್ರವೇಶದಲ್ಲಿ ಶೇಕಡಾ ನಲವತ್ತರಷ್ಟನ್ನು ಕರ್ನಾಟಕ ರಾಜ್ಯದ ವಿದ್ಯಾರ್ಥಿಗಳಿಗೆ ಮೀಸಲಿಡತಕ್ಕದ್ದು ಮತ್ತು ಪ್ರವೇಶಗಳನ್ನು ರಾಜ್ಯ ಸರ್ಕಾರವು ಅಥವಾ ಅದರ ಏಜೆನ್ಸಿಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಮಾಡತಕ್ಕದ್ದು ಮತ್ತು ಸೀಟುಗಳನ್ನು ಅರ್ಹತ ಮತ್ತು ರಾಜ್ಯ ಸರ್ಕಾರವು ಕಾಲಕಾಲಕ್ಕೆ ರೂಪಿಸುವ ಮೀಸಲಾತಿ ನೀತಿಗೆ ಅನುಸಾರವಾಗಿ ಹಂಚಿಕೆ ಮಾಡತಕ್ಕದ್ದು:

ಮತ್ತು ಪರಂತು, ಯಾವುದೇ ಕೋರ್ಸಿನಲ್ಲಿ ಹತ್ತಕ್ಕಿಂತ ಕಡಿಮೆ ಸೀಟುಗಳು ಇರುವಲ್ಲಿ, ಸ್ನಾತಕೋತ್ತರ ಇಂಥ ಕೋರ್ಸುಗಳನ್ನು ಒಟ್ಟಿಗೆ ಒಂದುಗೂಡಿಸುವ ಮೂಲಕ ಮೀಸಲಿಡತಕ್ಕದ್ದು ಮತ್ತು ಯಾವುದೇ ಕೋರ್ಸಿನಲ್ಲಿ ಮೂರು ಸೀಟುಗಳಿಗಿಂತ ಕಡಿಮೆ ಇರುವಲ್ಲಿ, ಅವುಗಳನ್ನು ಸರದಿ ಸುತ್ತಿನಲ್ಲಿ ಮೀಸಲಿಡತಕ್ಕದ್ದು.

**10. ರಾಷ್ಟ್ರೀಯ ಅಧಿಮಾನ್ಯತೆ.–** ವಿಶ್ವವಿದ್ಯಾಲಯವು ಪ್ರಾರಂಭವಾದ ತರುವಾಯ ಆದಷ್ಟು ಬೇಗನೆ ಸಂಬಂಧಪಟ್ಟ ಶಾಸನಾತ್ಮಕ ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳಿಂದ ಅಧಿಮಾನ್ಯತೆಯನ್ನು ಕೋರತಕ್ಕದ್ದು ಮತ್ತು ಖಾಸಗಿ ವಿಶ್ವವಿದ್ಯಾಲಯಗಳು ನಡೆಸುವ ಎಲ್ಲಾ ವ್ಯಾಸಂಗ ಕ್ರಮಗಳು ರಾಷ್ಟ್ರೀಯ ಅಧಿಮಾನ್ಯತಾ ಸಂಸ್ಥೆಗಳ ವಿನಿಯಮಗಳಿಗೆ ಅನುಸಾರವಾಗಿ ಇರತಕ್ಕದ್ದು.

**11. ಪ್ರಾಯೋಜಕ ಸಂಸ್ಥೆಯ ಅಧಿಕಾರಗಳು.–** ಪ್ರಾಯೋಜಕ ಸಂಸ್ಥೆಯು ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದಂತೆ ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಇವುಗಳಲ್ಲಿ ಪ್ರತಿಯೊಂದನ್ನು ಪ್ರಾಯೋಜಕ ಸಂಸ್ಥೆಯು ತನ್ನ ವಿವೇಚನಾನುಸಾರ ಚಲಾಯಿಸಬಹುದು, ಎಂದರೆ:–

(i) ಕುಲಾಧಿಪತಿಯವರನ್ನು ನೇಮಿಸುವುದು ಅಥವಾ ಪುನರ್‌ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(ii) ವಿಶ್ವವಿದ್ಯಾಲಯದ ಪ್ರಥಮ ಪ್ರಬಂಧಕ ಮಂಡಳಿಯನ್ನು ರಚಿಸುವುದು;

(iii) ಪ್ರಬಂಧಕ ಮಂಡಳಿಯ ಅಧ್ಯಕ್ಷರನ್ನು ನಾಮನಿರ್ದೇಶಿಸುವುದು;

(iv) ಪ್ರಬಂಧಕ ಮಂಡಳಿಯ ಸದಸ್ಯರಾಗಿ ಮೂರು ವ್ಯಕ್ತಿಗಳನ್ನು ನಾಮನಿರ್ದೇಶಿಸುವುದು;

(v) ಕಾರ್ಯಕಾರಿ ಪರಿಷತ್ತಿನ ಸದಸ್ಯರಾಗಿ ಇಬ್ಬರು ವ್ಯಕ್ತಿಗಳನ್ನು ನಾಮ ನಿರ್ದೇಶಿಸುವುದು;

(vi) ವಿಶ್ವವಿದ್ಯಾಲಯದ ದತ್ತಿ ನಿಧಿಗೆ ದೇಣಿಗೆ ನೀಡಲು ನಿಧಿ ಮೂಲಗಳನ್ನು ನಿರ್ಧರಿಸುವುದು;

(vii) ವಿಶ್ವವಿದ್ಯಾಲಯದ ಹಣದ ವಿನಿಯೋಗ ಮತ್ತು ವೆಚ್ಚ ಮಾಡುವುದನ್ನು ನಿರ್ಧರಿಸುವುದು;

(viii) ಈ ಅಧಿನಿಯಮದಲ್ಲಿ ಉಪಬಂಧಿಸಿರುವ ವಿಧಾನದಲ್ಲಿ ಪ್ರಬಂಧಕ ಮಂಡಳಿಯ ಸಭೆಯಲ್ಲಿಯ ವಿವಾದಗಳನ್ನು ಬಗೆಹರಿಸುವುದು;

## ಅಧ್ಯಾಯ -III

## ವಿಶ್ವವಿದ್ಯಾಲಯದ ಅಧಿಕಾರಿಗಳು

**12. ವಿಶ್ವವಿದ್ಯಾಲಯದ ಅಧಿಕಾರಿಗಳು.–** ಈ ಮುಂದಿನವರು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು, ಎಂದರೆ:–

(i) ಸಂದರ್ಶಕರು;

(ii) ಸಹ–ಸಂದರ್ಶಕರು;

(iii) ಕುಲಾಧಿಪತಿಗಳು;

(iv) ಕುಲಪತಿಗಳು;

(v) ಸಹಕುಲಪತಿಗಳು;

(vi) ಕುಲಸಚಿವರು;

(vii) ಹಣಕಾಸು ಅಧಿಕಾರಿ; ಮತ್ತು

(viii) ಪರಿನಿಯಮಗಳ ಮೂಲಕ ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಘೋಷಿಸಬಹುದಾದಂಥ ಇತರ ಅಧಿಕಾರಿಗಳು.

**13. ಸಂದರ್ಶಕರು.–** (1) ಕರ್ನಾಟಕದ ಘನತೆವೆತ್ತ ರಾಜ್ಯಪಾಲರು ವಿಶ್ವವಿದ್ಯಾಲಯದ ಸಂದರ್ಶಕರಾಗಿರತಕ್ಕದ್ದು ಮತ್ತು ಸಂದರ್ಶಕರು ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಯ ಸುಧಾರಣೆಗಾಗಿ ಸಲಹೆಗಳನ್ನು ನೀಡಬಹುದು.

(2) ಸಂದರ್ಶಕರು, ಪದವಿಗಳನ್ನು ಮತ್ತು ಡಿಪ್ಲೋಮೊಗಳನ್ನು ಪ್ರದಾನ ಮಾಡಲು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಸಂದರ್ಶಕರು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ, ಯಾವುದೇ ಪತ್ರ ಅಥವಾ ಮಾಹಿತಿಯನ್ನು ತರಿಸಿಕೊಳ್ಳುವುದು.

(ii) ಸಂದರ್ಶಕರು, ಅವರು ಸ್ವೀಕರಿಸಿದ ಮಾಹಿತಿಯ ಆಧಾರದ ಮೇಲೆ ವಿಶ್ವವಿದ್ಯಾಲಯಗಳ ಯಾವುದೇ ಪ್ರಾಧಿಕಾರವು ಮಾಡಿದ ಯಾವುದೇ ಆದೇಶ, ನಡೆಸಿದ ವ್ಯವಹರಣೆಗಳು ಅಥವಾ ಕೈಗೊಂಡ ತೀರ್ಮಾನಗಳು, ಈ ಅಧಿನಿಯಮ, ವಿನಿಯಮಗಳು ಅಥವಾ ನಿಯಮಗಳಿಗೆ ಪೂರಕವಾಗಿಲ್ಲವೆಂದು ಮನಗಂಡರೆ ಅವರು ವಿಶ್ವವಿದ್ಯಾಲಯದ ಹಿತಾಸಕ್ತಿಯಿಂದ ತಾವು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಹೊರಡಿಸಬಹುದು ಮತ್ತು ಹಾಗೆ ಹೊರಡಿಸಿದ ನಿರ್ದೇಶನಗಳನ್ನು ಸಂಬಂಧಪಟ್ಟವರೆಲ್ಲರೂ ಪಾಲಿಸತಕ್ಕದ್ದು.

**14. ಸಹ–ಸಂದರ್ಶಕರು.–** (1) ಕರ್ನಾಟಕ ಸರ್ಕಾರದ ಮಾನ್ಯ ಉನ್ನತ ಶಿಕ್ಷಣ ಸಚಿವರು ವಿಶ್ವವಿದ್ಯಾಲಯದ ಸಹ–ಸಂದರ್ಶಕರಾಗಿರತಕ್ಕದ್ದು.

(2) ಸಂದರ್ಶಕರ ಅನುಪಸ್ಥಿತಿಯಲ್ಲಿ ಸಹ–ಸಂದರ್ಶಕರು ಪದವಿಗಳನ್ನು ಮತ್ತು ಡಿಪ್ಲೋಮೊಗಳನ್ನು ಪ್ರದಾನ ಮಾಡಲು ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**15. ಕುಲಾಧಿಪತಿಗಳು.–** (1) ಕುಲಾಧಿಪತಿಯವರನ್ನು ಪ್ರಾಯೋಜಕ ಸಂಸ್ಥೆಯು ನೇಮಿಸತಕ್ಕದ್ದು.

(2) ಪ್ರಾಯೋಜಕ ಸಂಸ್ಥೆಯ ಪ್ರಸ್ತುತ ಅಧ್ಯಕ್ಷರು ಮೊದಲನೇ ಕುಲಾಧಿಪತಿಗಳಾಗಿರತಕ್ಕದ್ದು, ಅವರು ತಮ್ಮ ಜೀವನಪರ್ಯಂತ ಅಥವಾ ಅವರು ತಮ್ಮ ಪದವನ್ನು ಬಿಟ್ಟುಕೊಡುವವರೆಗೆ ಕುಲಾಧಿಪತಿಗಳಾಗಿ ಪದಧಾರಣ ಮಾಡಿರತಕ್ಕದ್ದು.

(3) ತದನಂತರದ ಕುಲಾಧಿಪತಿಗಳು, ಅಂಥ ನೇಮಕಾತಿಯನ್ನು ಪರಿಗಣಿಸುವ ಸಂದರ್ಭದಲ್ಲಿ ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ, ಪ್ರಾಯೋಜಕ ಸಂಸ್ಥೆಯ ನ್ಯಾಸಧಾರಿಯಾಗಿರತಕ್ಕದ್ದು ಅಥವಾ ಶಿಕ್ಷಣ, ವಿಜ್ಞಾನ, ಸಂಸ್ಕೃತಿ ಅಥವಾ ಸಾರ್ವಜನಿಕ ಜೀವನ ಕ್ಷೇತ್ರಗಳಲ್ಲಿ ರಾಷ್ಟ್ರೀಯ ಮಟ್ಟದ ಛಾಪನ್ನು ಪಡೆದಿರುವ ಅಂಥ ಇತರ ವ್ಯಕ್ತಿಯಾಗಿರತಕ್ಕದ್ದು.

(4) ಹಾಗೆ ನೇಮಕಗೊಂಡ ತದನಂತರದ ಕುಲಾಧಿಪತಿಗಳು ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ಪದಧಾರಣ ಮಾಡತಕ್ಕದ್ದು.

(5) ಕುಲಾಧಿಪತಿಗಳು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿದ ಪರಿನಿಯಮಗಳ ಅಡಿಯಲ್ಲಿ ಅವರಿಗೆ ಪ್ರದಾನ ಮಾಡಬಹುದಾದಂಥ ಅಧಿಕಾರಗಳನ್ನು ಹೊಂದಿರತಕ್ಕದ್ದು, ಅವುಗಳಲ್ಲಿ ಈ ಮುಂದಿನ ಅಧಿಕಾರಗಳು ಒಳಗೊಂಡಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು;

(ii) ಸಂದರ್ಶಕರ ಮತ್ತು ಸಹ–ಸಂದರ್ಶಕರಿಬ್ಬರ ಗೈರುಹಾಜರಿಯಲ್ಲಿ ವಿಶ್ವವಿದ್ಯಾಲಯದ ಎಲ್ಲಾ ಘಟಿಕೋತ್ಸವಗಳಲ್ಲಿ ಅಧ್ಯಕ್ಷತೆಯನ್ನು ವಹಿಸುವುದು;

(iii) ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುವುದು;

(iv) ಈ ಅಧಿನಿಯಮ ಮತ್ತು ಪರಿನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ಕುಲಪತಿಗಳನ್ನು ನೇಮಿಸುವುದು ಅಥವಾ ಪುನರ್ನೇಮಿಸುವುದು ಅಥವಾ ಅವರ ನೇಮಕಾತಿಯನ್ನು ಅಂತ್ಯಗೊಳಿಸುವುದು;

(v) ಈ ಅಧಿನಿಯಮದ 16ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ ನಾಮನಿರ್ದೇಶಕ ಸಮಿತಿಯ ಸದಸ್ಯರಾಗಿ ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶನ ಮಾಡುವುದು;

(vi) ಸಹಕುಲಪತಿಗಳು, ಡೀನ್, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿಗಳ ನೇಮಕಾತಿಯನ್ನು ಪೂರ್ವಾನುಮೋದಿಸುವುದು;

(vii) ಪ್ರಬಂಧಕ ಮಂಡಳಿಯ ಸದಸ್ಯರನ್ನಾಗಿ ಇಬ್ಬರು ಶಿಕ್ಷಣ ತಜ್ಞರನ್ನು ನಾಮನಿರ್ದೇಶಿಸುವುದು;

(viii) ಮೊದಲ ಸಹಕುಲಪತಿಗಳು ಮತ್ತು ಹಣಕಾಸು ಅಧಿಕಾರಿಗಳನ್ನು ನೇಮಿಸುವುದು;

(ix) ಮೊದಲ ವ್ಯವಸ್ಥಾಪನಾ ಮಂಡಳಿ, ಹಣಕಾಸು ಸಮಿತಿ, ಸಂಶೋಧನಾ ಪರಿಷತ್ತು ಹಾಗೂ ಶೈಕ್ಷಣಿಕ ಪರಿಷತ್ತುಗಳನ್ನು ರಚಿಸುವುದು;

(x) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ ಕಾರ್ಯಸೂಚಿ ವಿಷಯಗಳನ್ನು ಪೂರ್ವಾನುಮೋದಿಸುವುದು;

(xi) ಈ ಅಧಿನಿಯಮದಲ್ಲಿ ಉಪಬಂಧಿಸಿದ ವಿಧಾನದಲ್ಲಿ (ಪ್ರಬಂಧಕ ಮಂಡಳಿಯ ಸಭೆಯಲ್ಲಿ ಉಂಟಾದ ವಿವಾದಗಳನ್ನು ಹೊರತುಪಡಿಸಿ) ವಿವಾದಗಳನ್ನು ಪರಿಹರಿಸುವುದು.

(6) ಪದಾಧಿಕಾರಿ ಅಥವಾ ಸಂಸ್ಥೆ ಮತ್ತು ವಿಶ್ವವಿದ್ಯಾಲಯದ ಯಾವುದೇ ಇತರ ಪದಾಧಿಕಾರಿ ಅಥವಾ ಸಂಸ್ಥೆಯ ನಡುವೆ ವಿವಾದಗಳು ಉಂಟಾದಲ್ಲಿ, ಆ ವಿವಾದವನ್ನು ಕುಲಾಧಿಪತಿಯವರ ಪರ್ಯಾಲೋಚನೆಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿವಾದದ ಸಂದರ್ಭದಲ್ಲಿ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**16. ಕುಲಪತಿಗಳು.–** (1) (2)ನೇ ಉಪಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ನಾಮನಿರ್ದೇಶಕ ಸಮಿತಿಯು ಶಿಫಾರಸ್ಸು ಮಾಡಿದ ಮೂರು ವ್ಯಕ್ತಿಗಳ ಪೈಕಿಯಿಂದ ಒಬ್ಬರನ್ನು ಮೂರು ವರ್ಷಗಳ ಅವಧಿಗಾಗಿ ಕುಲಪತಿಗಳನ್ನಾಗಿ, ಪರಿನಿಯಮಗಳಲ್ಲಿ ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕುಲಾಧಿಪತಿಯವರು ನೇಮಿಸತಕ್ಕದ್ದು. ಮೂರು ವರ್ಷಗಳ ಅವಧಿಯು ಮುಗಿದ ತರುವಾಯ, ಇದನ್ನು ಮೂರು ವರ್ಷಗಳ ಮತ್ತೊಂದು ಅವಧಿಗೆ ನವೀಕರಿಸಬಹುದು:

ಪರಂತು, ಕುಲಪತಿಯವರು, ತಮ್ಮ ಅವಧಿ ಮುಗಿದ ನಂತರವೂ ಹೊಸ ಕುಲಪತಿಯವರು ಸೇರಿಕೊಳ್ಳುವವರೆಗೆ ಪದದಲ್ಲಿ ಮುಂದುವರೆಯತಕ್ಕದ್ದು. ಆದಾಗ್ಯೂ ಈ ಅವಧಿಯು ಯಾವುದೇ ಸಂದರ್ಭದಲ್ಲಿ ಒಂದು ವರ್ಷವನ್ನು ಮೀರತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಹೇಳಿರುವ ನಾಮನಿರ್ದೇಶಕ ಸಮಿತಿಯಲ್ಲಿ ಈ ಮುಂದಿನ ವ್ಯಕ್ತಿಗಳು ಇರತಕ್ಕದ್ದು, ಎಂದರೆ:-

(i) ಕುಲಾಧಿಪತಿಯವರು ನಾಮನಿರ್ದೇಶಿಸಿದ ಒಬ್ಬ ವ್ಯಕ್ತಿ;

(ii) ಪ್ರಬಂಧಕ ಮಂಡಳಿಯ ಇಬ್ಬರು ನಾಮ ನಿರ್ದೇಶಿತರು, ಇವರಲ್ಲಿ ಒಬ್ಬರನ್ನು ಪ್ರಬಂಧಕ ಮಂಡಳಿಯು ಸಮಿತಿಯ ಸಂಚಾಲಕರೆಂದು ನಾಮನಿರ್ದೇಶಿಸತಕ್ಕದ್ದು.

(3) ನಾಮನಿರ್ದೇಶನ ಸಮಿತಿಯು, ಅರ್ಹತೆಯ ಆಧಾರದ ಮೇಲೆ ಕುಲಪತಿಯ ಹುದ್ದೆಗೆ ಸೂಕ್ತವಾದ ಮೂರು ವ್ಯಕ್ತಿಗಳ ಹೆಸರನ್ನು ಶಿಫಾರಸ್ಸು ಮಾಡತಕ್ಕದ್ದು ಮತ್ತು ಅದನ್ನು ಪ್ರತಿಯೊಬ್ಬ ವ್ಯಕ್ತಿಯ ವಿದ್ಯಾರ್ಹತೆ ಮತ್ತಿತರ ವಿಶಿಷ್ಟ ಪ್ರಶಸ್ತಿಗಳನ್ನು ತಿಳಿಸುವ ಒಂದು ಸಂಕ್ಷಿಪ್ತ ವರದಿಯೊಂದಿಗೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು.

(4) ಕುಲಪತಿಯವರು ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಮತ್ತು ಶೈಕ್ಷಣಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ವ್ಯವಹಾರಗಳ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ಚಲಾಯಿಸತಕ್ಕದ್ದು ಹಾಗೂ ವಿಶ್ವವಿದ್ಯಾಲಯದ ಪ್ರಾಧಿಕಾರಗಳ ತೀರ್ಮಾನಗಳನ್ನು ಜಾರಿಗೊಳಿಸತಕ್ಕದ್ದು:

ಪರಂತು, ಶಿಕ್ಷಕರ ನೇಮಕಾತಿಯನ್ನು ಹೊರತುಪಡಿಸಿ ಕೂಡಲೇ ಕ್ರಮವನ್ನು ಕೈಗೊಳ್ಳಬೇಕಾದ ತುರ್ತು ಸ್ವರೂಪದ ಯಾವುದೇ ಇತರ ವಿಷಯಗಳಲ್ಲಿ ಮತ್ತು ಅದನ್ನು ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ವಿಶ್ವವಿದ್ಯಾಲಯವು ಇದಕ್ಕಾಗಿ ಅಧಿಕೃತಗೊಳಿಸಿದ್ದ ಯಾವೊಬ್ಬ ಅಧಿಕಾರಿ ಅಥವಾ ಪ್ರಾಧಿಕಾರ ಅಥವಾ ಇತರ ಸಂಸ್ಥೆಯು ಕೂಡಲೇ ಕ್ರಮಕೈಗೊಳ್ಳುವುದು ಸಾಧ್ಯವಿರದಿರುವಾಗ ಕುಲಪತಿಯವರು ತಾನು ಸೂಕ್ತವೆಂದು ಭಾವಿಸಬಹುದಾದಂತಹ ಕ್ರಮವನ್ನು ಕುಲಾಧಿಪತಿಯವರ ಲಿಖಿತ ಪೂರ್ವಾನುಮೋದನೆಯನ್ನು ಪಡೆದು ಕೈಗೊಳ್ಳತಕ್ಕದ್ದು.

(5) ಕುಲಪತಿಯವರು ಪರಿನಿಯಮಗಳು ಅಥವಾ ನಿಯಮಗಳಲ್ಲಿ ಹೇಳಲಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು:

ಪರಂತು, ಕುಲಪತಿಗಳ ಅಭಿಪ್ರಾಯದಲ್ಲಿ, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಯಾವುದೇ ನಿರ್ಣಯವು, ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಿದ ಪರಿನಿಯಮಗಳು, ವಿನಿಯಮಗಳು ಅಥವಾ ನಿಯಮಗಳ ಮೂಲಕ ಪ್ರದತ್ತವಾದ ಅಧಿಕಾರದ ಹೊರಗಿದ್ದರೆ ಅಥವಾ ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಪ್ರತಿಕೂಲವಾಗಬಹುದಾಗಿದ್ದರೆ, ಅದರ ನಿರ್ಣಯದ ದಿನಾಂಕದಿಂದ ಹದಿನೈದು ದಿನಗಳ ಒಳಗೆ ತನ್ನ ನಿರ್ಣಯವನ್ನು ಪರಿಷ್ಕರಿಸಲು ಸಂಬಂಧಪಟ್ಟ ಪ್ರಾಧಿಕಾರವನ್ನು ಆತನು ಕೋರತಕ್ಕದ್ದು ಮತ್ತು ಪ್ರಾಧಿಕಾರವು ಅಂಥ ನಿರ್ಣಯವನ್ನು ಸಂಪೂರ್ಣವಾಗಿ ಅಥವಾ ಭಾಗಶ:ವಾಗಿ ಪರಿಷ್ಕರಿಸಲು ನಿರಾಕರಿಸಿದ ಸಂದರ್ಭದಲ್ಲಿ ಅಥವಾ ಹದಿನೈದು ದಿನಗಳೊಳಗೆ ಯಾವುದೇ ನಿರ್ಣಯವನ್ನು ತೆಗೆದುಕೊಳ್ಳಲು ವಿಫಲವಾದಲ್ಲಿ, ನಂತರ ಅಂಥ ವಿಷಯವನ್ನು ಕುಲಾಧಿಪತಿಗಳಿಗೆ ಕಳುಹಿಸತಕ್ಕದ್ದು ಮತ್ತು ಈ ಬಗ್ಗೆ ಇವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

(6) ಕುಲಪತಿಯವರ ಸೇವೆಗಳನ್ನು, ಪ್ರಬಂಧಕ ಮಂಡಳಿಯ ಅನುಮೋದನೆಯೊಂದಿಗೆ ಮತ್ತು ಸಹಜ ನ್ಯಾಯದ ತತ್ವಗಳನ್ನು ಅನುಸರಿಸಿದ ನಂತರ ಹಾಗೂ ಶಿಸ್ತಿನ ಆಧಾರದ ಮೇಲೆ ಅಂತ್ಯಗೊಳಿಸುವ ಸಂದರ್ಭವೂ ಸೇರಿದಂತೆ, ಪ್ರಕರಣದ ಬಗ್ಗೆ ಕುಲಪತಿಯು ತನ್ನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ ತರುವಾಯ, ಕುಲಾಧಿಪತಿಯವರು ಅಂತ್ಯಗೊಳಿಸಬಹುದು.

(7) ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಸಂದರ್ಶಕರು, ಸಹ-ಸಂದರ್ಶಕರು ಮತ್ತು ಕುಲಾಧಿಪತಿಯವರು ಇವರುಗಳ ಗೈರು ಹಾಜರಿಯ ಸಂದರ್ಭದಲ್ಲಿ ಕುಲಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**17. ಸಹಕುಲಪತಿಗಳು.-** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಮೂರು ಜನರನ್ನು ಮೀರದಂತೆ ಸಹಕುಲಪತಿಗಳನ್ನು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನೇಮಕಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**18. ವ್ಯಾಸಂಗ ವಿಭಾಗಗಳ ಡೀನ್‌ಗಳು.-** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು ಪರಿನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ವಿಧಾನದಲ್ಲಿ ವ್ಯಾಸಂಗ ವಿಭಾಗಗಳ ಡೀನ್‌ಗಳನ್ನು ನೇಮಕಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**19. ಕುಲಸಚಿವರು.-** (1) ಕುಲಾಧಿಪತಿಯವರು, ಪರಿನಿಯಮಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ನಿಬಂಧನೆ ಮತ್ತು ಷರತ್ತುಗಳ ಮೇಲೆ ಕುಲಸಚಿವರನ್ನು ನೇಮಕ ಮಾಡತಕ್ಕದ್ದು.

(2) ಪರಿನಿಯಮಗಳಲ್ಲಿ ಪರಿಭಾಷಿಸಿರುವಂಥ ಎಲ್ಲಾ ಕರಾರುಗಳನ್ನು ವಿಶ್ವವಿದ್ಯಾಲಯದ ಪರವಾಗಿ ಕುಲಸಚಿವರು ಮಾಡಿಕೊಳ್ಳತಕ್ಕದ್ದು ಮತ್ತು ಅದಕ್ಕೆ ಸಹಿ ಹಾಕತಕ್ಕದ್ದು.

(3) ಕುಲಸಚಿವರು ವಿಶ್ವವಿದ್ಯಾಲಯದ ಪರವಾಗಿ ದಾಖಲೆಗಳನ್ನು ಅಧಿಕೃತಗೊಳಿಸುವ ಅಧಿಕಾರವನ್ನು ಹೊಂದಿರತಕ್ಕದ್ದು ಹಾಗೂ ಪರಿನಿಯಮಗಳಿಂದ ಪ್ರದತ್ತಗೊಳಿಸಬಹುದಾದಂಥ ಅಥವಾ ಕುಲಾಧಿಪತಿಯವರು ಮತ್ತು ಕುಲಪತಿಯವರು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(4) ಕುಲಸಚಿವರು ವಿಶ್ವವಿದ್ಯಾಲಯದ ದಾಖಲೆಗಳು ಮತ್ತು ಸಾಮಾನ್ಯ ಮೊಹರನ್ನು ಸರಿಯಾದ ರೀತಿಯಲ್ಲಿ ರಕ್ಷಿಸಿಕೊಂಡು ಬರುವ ಹೊಣೆಗಾರಿಕೆಯನ್ನು ಹೊಂದಿರತಕ್ಕದ್ದು ಮತ್ತು ಕುಲಾಧಿಪತಿಯವರು, ಕುಲಪತಿಯವರು ಅಥವಾ ಇತರ ಯಾವುದೇ ಪ್ರಾಧಿಕಾರವು ಕೋರಿದಂಥ ಎಲ್ಲಾ ಅಂಥ ಮಾಹಿತಿಯನ್ನು ಮತ್ತು ದಾಖಲೆಗಳನ್ನು ಅವರ ಮುಂದೆ ಮಂಡಿಸಲು ಬದ್ಧರಾಗಿತಕ್ಕದ್ದು.

**20. ಹಣಕಾಸು ಅಧಿಕಾರಿ.–** ಕುಲಪತಿಯವರು, ಕುಲಾಧಿಪತಿಯವರ ಲಿಖಿತ ಅನುಮೋದನೆಯನ್ನು ಪಡೆದುಕೊಂಡು, ಪರಿನಿಯಮಗಳ ಮೂಲಕ ಪ್ರದತ್ತಗೊಳಿಸಬಹುದಾದ ಅಂಥ ವಿಧಾನದಲ್ಲಿ ಹಣಕಾಸು ಅಧಿಕಾರಿಯನ್ನು ನೇಮಕ ಮಾಡತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**21. ಇತರ ಅಧಿಕಾರಿಗಳು.–** ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ ನೇಮಕಾತಿಯ ವಿಧಾನ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಕರ್ತವ್ಯಗಳು ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**22. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಈ ಮುಂದಿನವುಗಳು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(i) ಪ್ರಬಂಧಕ ಮಂಡಳಿ;

(ii) ವ್ಯವಸ್ಥಾಪನಾ ಮಂಡಳಿ;

(iii) ಶೈಕ್ಷಣಿಕ ಪರಿಷತ್ತು;

(iv) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು;

(v) ಹಣಕಾಸು ಸಮಿತಿ; ಮತ್ತು

(vi) ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಪರಿನಿಯಮಗಳ ಮೂಲಕ ಘೋಷಿಸಬಹುದಾದ ಅಂಥ ಇತರ ಪ್ರಾಧಿಕಾರಗಳು.

**23. ಪ್ರಬಂಧಕ ಮಂಡಳಿ ಮತ್ತು ಇದರ ಅಧಿಕಾರಗಳು.–** (1) ಪ್ರಬಂಧಕ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು – ಅಧ್ಯಕ್ಷರು;

(ii) ಕುಲಪತಿಯವರು – ಸದಸ್ಯರು;

(iii) ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(iv) ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(v) ರಾಜ್ಯ ಸರ್ಕಾರವು ನಾಮ ನಿರ್ದೇಶನ ಮಾಡಿದ ಆಡಳಿತವನ್ನು ಒಳಗೊಂಡಂತೆ ವ್ಯವಸ್ಥಾಪನೆ, ಹಣಕಾಸು ಅಥವಾ ಯಾವುದೇ ಇತರ ವಿಶೇಷ ಕ್ಷೇತ್ರದಲ್ಲಿನ ಒಬ್ಬರು ತಜ್ಞರು;

(vi) ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶಿಸಿದ ಇಬ್ಬರು ವ್ಯಕ್ತಿಗಳು ಅವರ ಪೈಕಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(vii) ಸಹ ಕುಲಪತಿಯವರು ಮತದಾನದ ಹಕ್ಕಿಲ್ಲದ ಸದಸ್ಯರಾಗಿರತಕ್ಕದ್ದು;

(viii) ವಿಶ್ವವಿದ್ಯಾಲಯ ಅನುದಾನ ಆಯೋಗದ ನಾಮನಿರ್ದೇಶಿತ ಒಬ್ಬ ಸುಪ್ರಸಿದ್ಧ ಶಿಕ್ಷಣ ತಜ್ಞರು.

(2) ಕುಲಸಚಿವರು ಪ್ರಬಂಧಕ ಮಂಡಳಿಯ ಮತ ದಾನದ ಹಕ್ಕಿರದ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ಪ್ರಬಂಧಕ ಮಂಡಳಿಯ ಸದಸ್ಯರ ಪದಾವಧಿ, ಸರ್ಕಾರದಿಂದ ನಾಮನಿರ್ದೇಶಿತರಾದ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ನೇಮಕಾತಿ, ನವೀಕರಣ ಮತ್ತು ತೆಗೆದುಹಾಕುವುದು ಮುಂತಾದವುಗಳು ಪರಿನಿಯಮಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಲ್ಲಿ ಕುಲಾಧಿಪತಿಯವರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಗೈರುಹಾಜರಿಯಲ್ಲಿ ಕುಲಾಧಿಪತಿಯವರಿಂದ ನಾಮನಿರ್ದೇಶಿತರಾದ ಯಾರಾದರೂ ಒಬ್ಬರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು. ಅಂಥ ಸಭೆಯ ಅಧ್ಯಕ್ಷತೆಯನ್ನು ವಹಿಸುವುದಕ್ಕೆ ಕುಲಾಧಿಪತಿಯವರು ಯಾವೊಬ್ಬ ವ್ಯಕ್ತಿಯನ್ನೂ ನಾಮನಿರ್ದೇಶನ ಮಾಡಿರದಿದ್ದಲ್ಲಿ, ಸಭೆಯಲ್ಲಿ ಹಾಜರಿರುವ ಸದಸ್ಯರು ಸರಳ ಬಹುಮತದ ಮೂಲಕ ಅವರುಗಳ ಪೈಕಿಯಿಂದಲೇ ಆ ಸಭೆಗೆ ಮಾತ್ರವೇ ಅಧ್ಯಕ್ಷನನ್ನು ಚುನಾಯಿಸತಕ್ಕದ್ದು.

(5) ಪ್ರಬಂಧಕ ಮಂಡಳಿಯ ಎಲ್ಲಾ ಸಭೆಗಳಿಗೆ, ಅಂಥ ಸಭೆಯಲ್ಲಿ ಹಾಜರಾಗುವ ಮತ್ತು ಮತದಾನ ನೀಡುವ ಮೂರು ಜನ ಸದಸ್ಯರು ಗಣಪೂರ್ತಿ (ಕೋರಂ) ಆಗಿರತಕ್ಕದ್ದು:

ಪರಂತು, ಪ್ರಬಂಧಕ ಮಂಡಳಿಯ ಯಾವುದೇ ಸಭೆಯ ಕೋರಂ ಪೂರ್ಣವಾಗಬೇಕಾದರೆ ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು ಹಾಜರಿರುವುದು ಮತ್ತು ಕುಲಾಧಿಪತಿಯವರು ಅಥವಾ ಪ್ರಾಯೋಜಕ ಸಂಸ್ಥೆಯ ನಾಮನಿರ್ದೇಶಿತರು ಹಾಜರಾಗದೇ ಇದ್ದಾಗ ಕುಲಪತಿಯವರು ಹಾಜರಿರುವುದು ಯಾವಾಗಲೂ ಅವಶ್ಯವಾಗಿರತಕ್ಕದ್ದು.

(6) ಪ್ರಬಂಧಕ ಮಂಡಳಿಯು ವಿಶ್ವವಿದ್ಯಾಲಯದ ಪ್ರಧಾನ ಪ್ರಬಂಧಕ ಸಂಸ್ಥೆಯಾಗಿರತಕ್ಕದ್ದು ಮತ್ತು ಅದು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ಶಾಸನಬದ್ಧ ಲೆಕ್ಕಪರಿಶೋಧಕರನ್ನು ನೇಮಕಗೊಳಿಸುವುದು;

(ii) ವಿಶ್ವವಿದ್ಯಾಲಯವು ಅನುಸರಿಸಬೇಕಾದ ಕಾರ್ಯನೀತಿಗಳನ್ನು ರಚಿಸುವುದು;

(iii) ಈ ಅಧಿನಿಯಮದ ಅಥವಾ ಪರಿನಿಯಮಗಳ ಅಥವಾ ನಿಯಮಗಳ ಉಪಬಂಧಗಳಿಗೆ ಅನುಗುಣವಾಗಿ ಇರದ ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ತೀರ್ಮಾನಗಳನ್ನು ಪುನರೀಕ್ಷಿಸುವುದು;

(iv) ವಿಶ್ವವಿದ್ಯಾಲಯದ ಆಯವ್ಯಯ ಮತ್ತು ವಾರ್ಷಿಕ ವರದಿಗಳನ್ನು ಅನುಮೋದಿಸುವುದು;

(v) ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸುವುದು ಅಥವಾ ಈಗಾಗಲೇ ಇರುವ ಪರಿನಿಯಮಗಳು ಮತ್ತು ನಿಯಮಗಳನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

(vi) ವಿಶ್ವವಿದ್ಯಾಲಯವನ್ನು ಸ್ವಯಂಸಮಾಪನಗೊಳಿಸುವ ನಿರ್ಧಾರವನ್ನು ತೆಗೆದುಕೊಳ್ಳುವುದು;

(vii) ಸರ್ಕಾರಕ್ಕೆ ಸಲ್ಲಿಸುವ ಪ್ರಸ್ತಾವಗಳನ್ನು ಅನುಮೋದಿಸುವುದು;

(viii) ಶುಲ್ಕ ನಿಯಂತ್ರಣ ಸಮಿತಿಗೆ ಮೂವರು ಸದಸ್ಯರನ್ನು ನಾಮನಿರ್ದೇಶನ ಮಾಡುವುದು;

(ix) ವಿಶ್ವವಿದ್ಯಾಲಯದ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದಕ್ಕೆ ಅಪೇಕ್ಷಣೀಯವೆಂದು ಕಂಡುಬರುವಂಥ ತೀರ್ಮಾನಗಳನ್ನು ಮತ್ತು ಕ್ರಮಗಳನ್ನು ಕೈಗೊಳ್ಳುವುದು.

(7) ಪ್ರಬಂಧಕ ಮಂಡಳಿಯು ಒಂದು ವರ್ಷದಲ್ಲಿ ಕನಿಷ್ಠ ಮೂರು ಸಲ ಸಭೆ ಸೇರತಕ್ಕದ್ದು.

(8) ಪ್ರಬಂಧಕ ಮಂಡಳಿಯು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಸಮಯ ಮತ್ತು ಸ್ಥಳದಲ್ಲಿ ಸಭೆ ಸೇರತಕ್ಕದ್ದು.

**24. ವ್ಯವಸ್ಥಾಪನಾ ಮಂಡಳಿ.–** (1) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಗಳು;

(ii) ಸಹಕುಲಪತಿಗಳು;

(iii) ಕುಲಸಚಿವರು;

(iv) ಪ್ರಾಯೋಜಕ ಸಂಸ್ಥೆಯ ಇಬ್ಬರು ನಾಮನಿರ್ದೇಶಿತರು;

(v) ಕುಲಪತಿಗಳು ನಾಮನಿರ್ದೇಶಿಸಬಹುದಾದ ವಿದ್ಯಾಲಯಗಳ ಇಬ್ಬರು ಡೀನ್‌ಗಳು;

(2) ಕುಲಪತಿಯವರು ವ್ಯವಸ್ಥಾಪನಾ ಮಂಡಳಿಯ ಅಧ್ಯಕ್ಷರಾಗಿರತಕ್ಕದ್ದು ಮತ್ತು ಕುಲಸಚಿವರು ವ್ಯವಸ್ಥಾಪನಾ ಮಂಡಳಿಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ವ್ಯವಸ್ಥಾಪನಾ ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

(4) ವ್ಯವಸ್ಥಾಪನಾ ಮಂಡಳಿಯ ಎಲ್ಲಾ ಸಭೆಗಳಲ್ಲಿ ಯಾವಾಗಲೂ ಕುಲಪತಿಯವರು ಅಧ್ಯಕ್ಷತೆ ವಹಿಸತಕ್ಕದ್ದು ಹಾಗೂ ಕುಲಪತಿಯವರ ಗೈರುಹಾಜರಿಯಲ್ಲಿ ಪ್ರಾಯೋಜಕ ಸಂಸ್ಥೆಯು ನಾಮನಿರ್ದೇಶನ ಮಾಡಿದವರು ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪ್ರಾಯೋಜಕ ಸಂಸ್ಥೆಯು ಯಾರನ್ನೂ ನಾಮನಿರ್ದೇಶನ ಮಾಡದೇ ಇದ್ದ ಸಂದರ್ಭದಲ್ಲಿ ಸಭೆಯಲ್ಲಿ ಹಾಜರಿರುವ ಸದಸ್ಯರು ಚುನಾಯಿಸಿದ ಯಾವುದೇ ಇತರ ಸದಸ್ಯರು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(5) ವ್ಯವಸ್ಥಾಪನಾ ಮಂಡಳಿಯ ಸಭೆಯಲ್ಲಿ ಯಾವುದೇ ವಿಷಯವನ್ನು ಕುರಿತು ವಿವಾದ ಉಂಟಾದಲ್ಲಿ ಸದರಿ ವಿಷಯವನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅಂಥ ವಿಷಯದ ಬಗ್ಗೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅದಕ್ಕೆ ವಿಶ್ವವಿದ್ಯಾಲಯವು ಬದ್ಧವಾಗಿರತಕ್ಕದ್ದು.

**25. ಶೈಕ್ಷಣಿಕ ಪರಿಷತ್ತು.–**(1) ಶೈಕ್ಷಣಿಕ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

| | | |
|---|---|---|
| (i) | ಕುಲಪತಿಯವರು | – ಅಧ್ಯಕ್ಷರು |
| (ii) | ಸಹಕುಲಪತಿಯವರು | – ಸದಸ್ಯರು |
| (iii) | ಕುಲಸಚಿವರು | – ಕಾರ್ಯದರ್ಶಿಗಳು |
| (iv) | ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು. | |

(2) ಶೈಕ್ಷಣಿಕ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಶೈಕ್ಷಣಿಕ ಸಂಸ್ಥೆಯಾಗಿರತಕ್ಕದ್ದು ಮತ್ತು ಈ ಅಧಿನಿಯಮದ, ಪರಿನಿಯಮಗಳ, ವಿನಿಯಮಗಳ ಹಾಗೂ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಶೈಕ್ಷಣಿಕ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಬಗ್ಗೆ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**26. ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು.–** (1) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು ವಿಶ್ವವಿದ್ಯಾಲಯದ ಪ್ರಧಾನ ಸಂಶೋಧನಾ ಮತ್ತು ಅನ್ವೇಷಣಾ ಸಮಿತಿಯಾಗಿರತಕ್ಕದ್ದು ಹಾಗೂ ಸಂಶೋಧನಾ ಕ್ಷೇತ್ರಗಳ ಆದ್ಯತೆಯೂ ಒಳಗೊಂಡಂತೆ, ವಿಶ್ವವಿದ್ಯಾಲಯವು ಕೈಗೊಳ್ಳಬೇಕಾದ ಸಂಶೋಧನೆಯ ಬಗ್ಗೆ ಒಂದು ವ್ಯಾಪಕವಾದ ಪರಿಪೂರ್ಣ ಭವಿಷ್ಯದ್ ದೃಷ್ಟಿಯನ್ನು ಒದಗಿಸತಕ್ಕದ್ದು. ಈ ಪರಿಷತ್ತು, ಈ ಅಧಿನಿಯಮದ, ಪರಿನಿಯಮಗಳ, ವಿನಿಯಮಗಳ ಮತ್ತು ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಸಂಶೋಧನೆ ಮತ್ತು ಅನ್ವೇಷಣಾ ಕಾರ್ಯನೀತಿಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅದರ ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

(2) ಸಂಶೋಧನಾ ಮತ್ತು ಅನ್ವೇಷಣಾ ಪರಿಷತ್ತು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಪತಿಯವರು – ಅಧ್ಯಕ್ಷರು

(ii) ಸಹಕುಲಪತಿಯವರು – ಸದಸ್ಯರು

(iii) ಸಂಶೋಧನೆಯ ಡೀನ್ – ಕಾರ್ಯದರ್ಶಿ

(iv) ಅನ್ವೇಷಣಾ ವಿಭಾಗದ ಮುಖ್ಯಸ್ಥರು – ಸದಸ್ಯರು

(v) ಎಲ್ಲಾ ವ್ಯಾಸಂಗ ವಿಭಾಗಗಳ ಡೀನ್‌ಗಳು – ಸದಸ್ಯರು ಮತ್ತು

(vi) ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

**27. ಹಣಕಾಸು ಸಮಿತಿ.–** (1) ಹಣಕಾಸು ಸಮಿತಿ ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(i) ಕುಲಾಧಿಪತಿಯವರು ಅಥವಾ ಅವರ ನಾಮನಿರ್ದೇಶಿತರು – ಅಧ್ಯಕ್ಷರು

(ii) ಕುಲಪತಿಯವರು – ಸದಸ್ಯರು

(iii) ಕುಲಸಚಿವರು – ಸದಸ್ಯರು

(iv) ಹಣಕಾಸು ಅಧಿಕಾರಿ – ಕಾರ್ಯದರ್ಶಿ

(v) ಪ್ರಾಯೋಜಕ ಸಂಸ್ಥೆಯ ಒಬ್ಬ ನಾಮನಿರ್ದೇಶಿತರು – ಸದಸ್ಯರು; ಮತ್ತು

(vi) ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಸದಸ್ಯರು.

(2) ಹಣಕಾಸು ಸಮಿತಿಯು ಹಣಕಾಸಿನ ವಿಷಯಗಳನ್ನು ಕೈಗೊಳ್ಳುವ ವಿಶ್ವವಿದ್ಯಾಲಯದ ಪ್ರಧಾನ ಹಣಕಾಸು ಸಂಸ್ಥೆಯಾಗಿರತಕ್ಕದ್ದು ಹಾಗೂ ಅದು ಈ ಅಧಿನಿಯಮ, ನಿಯಮಗಳು ಮತ್ತು ಪರಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಹಣಕಾಸು ವಿಷಯಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಸಾಮಾನ್ಯ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

**28. ಇತರ ಪ್ರಾಧಿಕಾರಗಳು.–** ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಹಾಗೂ ಪ್ರಕಾರ್ಯಗಳು ಪರಿನಿಯಮಗಳಿಂದ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**29. ಒಂದು ಪ್ರಾಧಿಕಾರದ ಅಥವಾ ಸಂಸ್ಥೆಯ ಸದಸ್ಯತ್ವಕ್ಕೆ ಅನರ್ಹತೆ.–** ವಿಶ್ವವಿದ್ಯಾಲಯದ ಸಂಸ್ಥೆಗಳ ಯಾವುವೇ ಪ್ರಾಧಿಕಾರಗಳ ಒಬ್ಬ ವ್ಯಕ್ತಿಯು,–

(ಎ) ಅಸ್ವಸ್ಥ ಚಿತ್ತನಾಗಿದ್ದು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲ್ಪಟ್ಟಿದ್ದರೆ;

(ಬಿ) ಅವಿಮುಕ್ತ ದಿವಾಳಿಯಾಗಿದ್ದರೆ;

(ಸಿ) ನೈತಿಕ ಅಧ:ಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದರೆ;

(ಡಿ) ಖಾಸಗಿ ಬೋಧನಾ ತರಗತಿಗಳನ್ನು ನಡೆಸುತ್ತಿದ್ದರೆ ಅಥವಾ ಸ್ವತ: ನಿರತನಾಗಿದ್ದರೆ;

(ಊ) ಯಾವುದೇ ವಿಧದಲ್ಲಿ, ಎಲ್ಲಿಯೇ, ಯಾವುದೇ ಪರೀಕ್ಷೆಯನ್ನು ನಡೆಸುವಲ್ಲಿ ಅನುಚಿತ ಅಭ್ಯಾಸದಲ್ಲಿ ತೊಡಗಿದ್ದಕ್ಕಾಗಿ ಅಥವಾ ಉತ್ತೇಜಿಸಿದ್ದಕ್ಕಾಗಿ ದಂಡಿತನಾಗಿದ್ದರೆ;

(ಎಫ್) ಪ್ರಾಯೋಜಿತ ಸಂಸ್ಥೆಯು ಯಾವುವೇ ಪ್ರಾಧಿಕಾರಗಳ ಅಥವಾ ಸಂಸ್ಥೆಗಳ ಯಾವೊಬ್ಬ ಸದಸ್ಯನನ್ನು ಆ ಪದವನ್ನು ಹೊಂದಿರುವುದಕ್ಕೆ ಅರ್ಹನಲ್ಲನೆಂದು ಲಿಖಿತದಲ್ಲಿ ಅಭಿಪ್ರಾಯ ನೀಡಿದಾಗಲೆಲ್ಲಾ,

–ಸದಸ್ಯನಾಗಿರುವುದಕ್ಕೆ ಅನರ್ಹನಾಗತಕ್ಕದ್ದು.

**30. ಖಾಲಿಸ್ಥಾನ ಇರುವ ಕಾರಣದಿಂದಾಗಿ ವ್ಯವಹರಣೆಗಳು ಅಸಿಂಧುವಾಗತಕ್ಕದ್ದಲ್ಲ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಕಾರ್ಯ ಅಥವಾ ವ್ಯವಹರಣೆಗಳು ಕೇವಲ ಅದರಲ್ಲಿ ಯಾವುದೇ ಖಾಲಿಸ್ಥಾನ ಇದೆ ಎಂಬ ಕಾರಣದಿಂದ ಅಥವಾ ಪ್ರಾಧಿಕಾರದ ರಚನೆಯಲ್ಲಿ ದೋಷವಿದೆ ಎಂಬ ಕಾರಣದಿಂದ ಮಾತ್ರವೇ ಅಸಿಂಧುವಾಗತಕ್ಕದ್ದಲ್ಲ.

**31. ಕಾರ್ಯಸೂಚಿ ವಿಷಯಗಳ ಬಗ್ಗೆ ಉಪಬಂಧಗಳು.–** (1) ಯಾವುವೇ ಕಾರ್ಯಸೂಚಿ ವಿಷಯಗಳನ್ನು ಕುಲಾಧಿಪತಿಯವರ ಪೂರ್ವಾನುಮೋದನೆಯನ್ನು ಪಡೆಯದೇ ಪ್ರಬಂಧಕ ಮಂಡಳಿಯ ಅಥವಾ ಕಾರ್ಯಕಾರಿ ಪರಿಷತ್ತು ಅಥವಾ ಯಾವುದೇ ಸಮಿತಿಯ ಸಭೆಗಳ ಕಾರ್ಯಸೂಚಿ ವಿಷಯಗಳಲ್ಲಿ ಸೇರಿಸತಕ್ಕದ್ದಲ್ಲ ಅಥವಾ ಚರ್ಚೆಗೆ ತೆಗೆದುಕೊಳ್ಳತಕ್ಕದ್ದಲ್ಲ ಮತ್ತು ತೀರ್ಮಾನಿಸತಕ್ಕದ್ದಲ್ಲ.

(2) ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಪಾಲಿಸದೆ ಇರುವ ಸಂದರ್ಭದಲ್ಲಿ, ಕುಲಾಧಿಪತಿಯವರು ವಿಶ್ವವಿದ್ಯಾಲಯದ ಯಾವುದೇ ಪದಾಧಿಕಾರಿ ಅಥವಾ ಸಂಸ್ಥೆಯು ತೆಗೆದುಕೊಂಡ ಎಲ್ಲಾ ತೀರ್ಮಾನಗಳನ್ನು ವಿಪರ್ಯಯಗೊಳಿಸುವ ಮೂಲಕ ಪರಿಹಾರ ಕ್ರಮಗಳನ್ನು ಕೂಡಲೇ ಕೈಗೊಳ್ಳಲು ಅಧಿಕಾರವನ್ನು ಎಲ್ಲಾ ಸಮಯದಲ್ಲಿ ಹೊಂದಿರತಕ್ಕದ್ದು ಮತ್ತು ಅಂಥ ಪರಿಹಾರ ಕ್ರಮದ ಪರಿಣಾಮವಾಗಿ ಅಧಿನಿಯಮದ ಉಪಬಂಧಗಳನ್ನು ಪಾಲಿಸದೇ ವಿಶ್ವವಿದ್ಯಾಲಯದ ಪದಾಧಿಕಾರಿ ಅಥವಾ ಸಂಸ್ಥೆಯು ಕೈಗೊಂಡಿದ್ದ ಎಲ್ಲಾ ಅಂಥ ಕ್ರಮಗಳು, ಮೊದಲಿನಿಂದಲೂ ಶೂನ್ಯ ಮತ್ತು ಅಕೃತ ಎಂದು ಭಾವಿಸತಕ್ಕದ್ದು ಹಾಗೂ ತತ್ಪರಿಣಾಮವಾಗಿ, ಉಪಬಂಧ ಪಾಲಿಸದೇ ಇದ್ದ ವಿಷಯ ಅಥವಾ ನಿರ್ಧಾರದ ಸಂಬಂಧದಲ್ಲಿ ಅದಕ್ಕೆ ಮುಂಚೆ ಇದ್ದ ವಸ್ತುಸ್ಥಿತಿಯೇ ಮುಂದುವರಿಯತಕ್ಕದ್ದು.

## ಅಧ್ಯಾಯ – V

## ಪರಿನಿಯಮಗಳು ಮತ್ತು ವಿನಿಯಮಗಳು

**32. ಪರಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಪರಿನಿಯಮಗಳು ವಿಶ್ವವಿದ್ಯಾಲಯಕ್ಕೆ ಮತ್ತು ಸಿಬ್ಬಂದಿಗೆ ಸಂಬಂಧಿಸಿದ ಎಲ್ಲಾ ಅಥವಾ ಯಾವುದೇ ವಿಷಯಕ್ಕೆ ಈ ಕೆಳಗಿನಂತೆ ಉಪಬಂಧ ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಕಾರ್ಯಕಲಾಪಗಳನ್ನು ನಡೆಸುವ ಮತ್ತು ಈ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸದಿರುವ ಸಂಸ್ಥೆಗಳ ರಚನೆಯ ಕಾರ್ಯವಿಧಾನ;

(ii) ಶಾಶ್ವತ ಶಾಸನಬದ್ಧ ದತ್ತಿ ನಿಧಿ, ವಿಶ್ವವಿದ್ಯಾಲಯ ದತ್ತಿ ನಿಧಿ, ಸಾಮಾನ್ಯ ನಿಧಿ ಹಾಗೂ ಅಭಿವೃದ್ಧಿ ನಿಧಿಗಳ ನಿರ್ವಹಣೆ;

(iii) ಕುಲಪತಿಗಳು, ಕುಲಸಚಿವರು ಹಾಗೂ ಹಣಕಾಸು ಅಧಿಕಾರಿ ಇವರ ನೇಮಕಾತಿಯ ನಿಬಂಧನೆಗಳು ಹಾಗೂ ಷರತ್ತುಗಳು ಹಾಗೂ ಅವರ ಅಧಿಕಾರಗಳು ಮತ್ತು ಪ್ರಕಾರ್ಯಗಳು;

(iv) ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ, ಅಧ್ಯಾಪಕರ ಮತ್ತು ನೌಕರರ ನೇಮಕಾತಿ ವಿಧಾನ ಹಾಗೂ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು;

(v) ವಿಶ್ವವಿದ್ಯಾಲಯ ಹಾಗೂ ಅದರ ಅಧಿಕಾರಿಗಳು, ವ್ಯಾಸಂಗ ವಿಭಾಗದ (ಫ್ಯಾಕಲ್ಟಿ) ಸದಸ್ಯರು, ನೌಕರರು ಹಾಗೂ ವಿದ್ಯಾರ್ಥಿಗಳ ನಡುವೆ ಉಂಟಾದ ವಿವಾದಗಳನ್ನು ಪರಿಹರಿಸುವ ಕಾರ್ಯವಿಧಾನ;

(vi) ವಿಭಾಗಗಳು ಮತ್ತು ವ್ಯಾಸಂಗ ವಿಭಾಗಗಳ (ಫ್ಯಾಕಲ್ಟಿಗಳ) ಸೃಜನೆ, ರದ್ಧತಿ ಅಥವಾ ಪುನಾರಚನೆ;

(vii) ಇತರ ವಿಶ್ವವಿದ್ಯಾಲಯಗಳು ಅಥವಾ ಉನ್ನತ ಕಲಿಕಾ ಸಂಸ್ಥೆಗಳ ಜೊತೆಯಲ್ಲಿ ಸಹಕರಿಸಬೇಕಾದ ರೀತಿ;

(viii) ಗೌರವ ಪದವಿಗಳ ನೀಡಿಕೆಯ ಕಾರ್ಯವಿಧಾನ;

(ix) ಉಚಿತ ಶಿಕ್ಷಣ (ಫ್ರೀಶಿಪ್) ಮತ್ತು ವಿದ್ಯಾರ್ಥಿವೇತನ ಮಂಜೂರಾತಿಗೆ ಸಂಬಂಧಿಸಿದ ಉಪಬಂಧಗಳು;

(x) ವಿವಿಧ ವ್ಯಾಸಂಗ ಕ್ರಮಗಳಲ್ಲಿನ ಸೀಟುಗಳ ಸಂಖ್ಯೆಗೆ ಸಂಬಂಧಿಸಿದ ಕಾರ್ಯನೀತಿಗಳು ಮತ್ತು ಅಂಥ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಕಾರ್ಯವಿಧಾನ;

(xi) ವಿವಿಧ ವ್ಯಾಸಂಗ ಕ್ರಮಗಳಿಗೆ ವಿದ್ಯಾರ್ಥಿಗಳಿಗೆ ವಿಧಿಸಬಹುದಾದ ಶುಲ್ಕಕ್ಕೆ ಸಂಬಂಧಿಸಿದ ಕಾರ್ಯನೀತಿ;

(xii) ಸಂಶೋಧನಾ ವೇತನಗಳು (ಫೆಲೋಶಿಪ್‌ಗಳು), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಉಚಿತ ಶಿಕ್ಷಣ, ಪದಕಗಳು ಹಾಗೂ ಬಹುಮಾನಗಳನ್ನು ಪ್ರಾರಂಭಿಸುವುದು;

(xiii) ಪ್ರಬಂಧಕ ಮಂಡಳಿಯು ನಿರ್ಧರಿಸಬಹುದಾದ ಅಥವಾ ಈ ಅಧಿನಿಯಮದ ಅಡಿಯಲ್ಲಿ ಪರಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬೇಕಾದ ಅಗತ್ಯತೆಯುಳ್ಳ ಯಾವುದೇ ಇತರ ವಿಷಯಗಳು.

**33. ಪರಿನಿಯಮಗಳ ರಚನೆ ವಿಧಾನ.–** (1) ವ್ಯವಸ್ಥಾಪನಾ ಮಂಡಳಿಯು ರಚಿಸಿದ ಮೊದಲ ಶಾಸನಗಳನ್ನು ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ವ್ಯವಸ್ಥಾಪನಾ ಮಂಡಳಿಯು ಸಲ್ಲಿಸಿದ ಮೊದಲ ಪರಿನಿಯಮಗಳನ್ನು ಪ್ರಬಂಧಕ ಮಂಡಳಿಯು ಪರಿಗಣಿಸತಕ್ಕದ್ದು ಹಾಗೂ ತಾನು ಅವಶ್ಯವೆಂದು ಭಾವಿಸಬಹುದಾದ ಅಂಥ ಮಾರ್ಪಾಡುಗಳು, ಯಾವುದಾದರು ಇದ್ದಲ್ಲಿ, ಅವುಗಳೊಡನೆ ತನ್ನ ಅನುಮೋದನೆಯನ್ನು ನೀಡತಕ್ಕದ್ದು.

(3) ವಿಶ್ವವಿದ್ಯಾಲಯವು, ಪ್ರಬಂಧಕ ಮಂಡಳಿಯು ಅನುಮೋದಿಸಿದ ಮೊದಲ ಪರಿನಿಯಮಗಳನ್ನು ವಿಶ್ವವಿದ್ಯಾಲಯದ ಅಧಿಸೂಚನೆಯಲ್ಲಿ ಪ್ರಕಟಿಸತಕ್ಕದ್ದು ಮತ್ತು ತದನಂತರ ಮೊದಲ ಪರಿನಿಯಮಗಳ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**34. ಪರಿನಿಯಮಗಳ ತಿದ್ದುಪಡಿಯ ಅಧಿಕಾರ.–** ಪ್ರಬಂಧಕ ಮಂಡಳಿಯು ಹೊಸ ಅಥವಾ ಹೆಚ್ಚುವರಿ ಪರಿನಿಯಮಗಳನ್ನು ರಚಿಸಬಹುದು ಅಥವಾ ಪರಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ಅವನ್ನು ನಿರಸನಗೊಳಿಸಬಹುದು.

**35. ವಿನಿಯಮಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ವಿನಿಯಮಗಳು ಈ ಮುಂದಿನ ವಿಷಯಗಳಿಗೆ ಉಪಬಂಧಗಳನ್ನು ಕಲ್ಪಿಸಬಹುದು, ಎಂದರೆ:–

(i) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ ಮತ್ತು ವಿದ್ಯಾರ್ಥಿ ಪಟ್ಟಿಯಲ್ಲಿ ಅವರುಗಳ ದಾಖಲಾತಿ ಹಾಗೂ ಮುಂದುವರಿಕೆ;

(ii) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ನಿಗದಿಪಡಿಸತಕ್ಕ ವ್ಯಾಸಂಗ ಕ್ರಮಗಳು;

(iii) ಪದವಿಗಳ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳ ಪ್ರದಾನ;

(iv) ಸಂಶೋಧನಾ ವೇತನಗಳು (ಫೆಲೋಶಿಪ್), ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಪದಕಗಳು ಮತ್ತು ಬಹುಮಾನಗಳನ್ನು ನೀಡಲು ಷರತ್ತುಗಳು;

(v) ಪರೀಕ್ಷೆಗಳನ್ನು ನಡೆಸುವುದು ಹಾಗೂ ಪರೀಕ್ಷೆ ನಡೆಸುವ ಸಂಸ್ಥೆಗಳು, ಪರೀಕ್ಷಕರು, ಪರೀಕ್ಷಾ ಮೇಲ್ವಿಚಾರಕರು, ಟ್ಯಾಬುಲೇಟರ್‌ಗಳು ಮತ್ತು ಮಾಡರೇಟರ್‌ಗಳ ನೇಮಕಾತಿ ಷರತ್ತುಗಳು ಮತ್ತು ವಿಧಾನ ಹಾಗೂ ಅವರ ಕರ್ತವ್ಯಗಳು;

(vi) ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ, ಪದವಿಗಳಿಗೆ ಹಾಗೂ ಇತರ ಶೈಕ್ಷಣಿಕ ಪ್ರಶಸ್ತಿಗಳಿಗೆ ಪ್ರವೇಶಕ್ಕೆ ವಿಧಿಸತಕ್ಕ ಶುಲ್ಕ;

(vii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನಲ್ಲಿ ವಿದ್ಯಾರ್ಥಿಗಳ ನಿವಾಸಕ್ಕಾಗಿ ಷರತ್ತುಗಳು;

(viii) ವಿಶ್ವವಿದ್ಯಾಲಯ ಅಥವಾ ಒಂದು ಘಟಕ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶಿಸ್ತು ಪಾಲನೆ;

(ix) ಈ ಅಧಿನಿಯಮದ ಅಡಿಯಲ್ಲಿನ ಪರಿನಿಯಮಗಳಲ್ಲಿ ಉಪಬಂಧ ಕಲ್ಪಿಸಬಹುದಾಂಥ ಇತರ ಎಲ್ಲಾ ವಿಷಯಗಳು.

**36. ವಿನಿಯಮಗಳ ರಚನೆ ವಿಧಾನ.–** ವಿನಿಯಮಗಳನ್ನು ಶೈಕ್ಷಣಿಕ ಪರಿಷತ್ತು ರಚಿಸತಕ್ಕದ್ದು ಹಾಗೂ ವ್ಯವಸ್ಥಾಪನಾ ಮಂಡಳಿಯು ಅನುಮೋದಿಸತಕ್ಕದ್ದು.

**37. ವಿನಿಯಮಗಳ ತಿದ್ದುಪಡಿಗೆ ಅಧಿಕಾರ.–** ವ್ಯವಸ್ಥಾಪನಾ ಮಂಡಳಿಯ ಅನುಮೋದನೆಯೊಡನೆ ಶೈಕ್ಷಣಿಕ ಪರಿಷತ್ತು ಹೊಸ ವಿನಿಯಮಗಳನ್ನು ಅಥವಾ ಹೆಚ್ಚುವರಿ ವಿನಿಯಮಗಳನ್ನು ರಚಿಸಬಹುದು ಅಥವಾ ವಿನಿಯಮಗಳ ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

**38. ಶುಲ್ಕ ನಿಯಂತ್ರಣ ಸಮಿತಿ.–** (1) ಸರ್ಕಾರವು ರಚಿಸಿದ ನಿವೃತ್ತ ಸರ್ವೋಚ್ಚ ನ್ಯಾಯಾಲಯದ ಅಥವಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಮುಖ್ಯಸ್ಥರಾಗಿರುವ ಮತ್ತು ವಿಶ್ವವಿದ್ಯಾಲಯದ ಕುಲಾಧಿಪತಿ, ಕುಲಪತಿ, ಉನ್ನತ ಶಿಕ್ಷಣ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ವೈದ್ಯಕೀಯ ಶಿಕ್ಷಣದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು, ಒಬ್ಬ ಮಹಿಳೆಯೂ ಸೇರಿದಂತೆ ಪ್ರಬಂಧಕ ಮಂಡಳಿಯು ನಾಮನಿರ್ದೇಶಿಸಿದ ಇಬ್ಬರು ಶಿಕ್ಷಣ ತಜ್ಞರು ಇವರುಗಳನ್ನು ಒಳಗೊಂಡ ಒಂದು ಶುಲ್ಕ ನಿಯಂತ್ರಣ ಸಮಿತಿಯು, 9ನೇ ಪ್ರಕರಣದ ಅಡಿಯಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗಾಗಿ ಮೀಸಲಿರಿಸಿದ ವಿಶ್ವವಿದ್ಯಾಲಯದ ಸ್ಥಾನಗಳ ಶುಲ್ಕವನ್ನು ನಿಯಂತ್ರಿಸತಕ್ಕದ್ದು. ಸಮಿತಿಯಲ್ಲಿ ಈ ಉದ್ದೇಶಕ್ಕಾಗಿ ಒಬ್ಬರು ಖ್ಯಾತ ಚಾರ್ಟರ್ಡ್ ಅಕೌಂಟೆಂಟ್ ರವರನ್ನು ಸಹ ಸದಸ್ಯನನ್ನಾಗಿ ಸೇರಿಸಿಕೊಳ್ಳತಕ್ಕದ್ದು.

(2) ಸಮಿತಿಯು ವಿಶ್ವವಿದ್ಯಾಲಯದ ಪ್ರವೇಶಗಳ ಮತ್ತು ಶುಲ್ಕದ ಸಂಗ್ರಹಣೆಯ ಅನುಪಾಲನೆಯನ್ನು ನೋಡಿಕೊಳ್ಳತಕ್ಕದ್ದು.

## ಅಧ್ಯಾಯ – VI

## ಸಂಕೀರ್ಣ

**39. ನೌಕರರ ಸೇವಾ ಷರತ್ತುಗಳು.–** (1) ಪರಿನಿಯಮಗಳ ಮತ್ತು ವಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಥವಾ ನಿಯಮಗಳ ಮೂಲಕ ನಿಯಮಿಸಬಹುದಾದ ಅಂಥ ನಿಬಂಧನೆಗಳು ಮತ್ತು ಷರತ್ತುಗಳು, ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಒಳಪಟ್ಟು ಪ್ರತಿಯೊಬ್ಬ ನೌಕರನು ಲಿಖಿತ ಕರಾರಿನ ಅಡಿಯಲ್ಲಿ ನೇಮಕಗೊಳ್ಳತಕ್ಕದ್ದು ಮತ್ತು ಅದನ್ನು ವಿಶ್ವವಿದ್ಯಾಲಯದಲ್ಲಿ ಇಟ್ಟುಕೊಳ್ಳತಕ್ಕದ್ದು ಹಾಗೂ ಅದರ ಪ್ರತಿಯನ್ನು ಸಂಬಂಧಪಟ್ಟ ನೌಕರನಿಗೆ ನೀಡತಕ್ಕದ್ದು.

(2) ನೌಕರರ ವಿರುದ್ಧ ಶಿಸ್ತು ಕ್ರಮವನ್ನು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಕಾರ್ಯವಿಧಾನಗಳ ಮೂಲಕ ನಿಯಂತ್ರಿಸತಕ್ಕದ್ದು.

(3) ಕರಾರಿನಿಂದಾಗಿ ವಿಶ್ವವಿದ್ಯಾಲಯ ಮತ್ತು ನೌಕರನ ಮಧ್ಯದಲ್ಲಿ ಉದ್ಭವಿಸಬಹುದಾದ ಯಾವುದೇ ವಿವಾದವನ್ನು, ಲಿಖಿತ ಕರಾರಿನಲ್ಲಿ ಉಪಬಂಧಿಸಿದ ವಿಧಾನದಲ್ಲಿ ಹಾಗೂ ಪರಿನಿಯಮಗಳ ಅನುಸಾರವಾಗಿ ಪರಿಹರಿಸತಕ್ಕದ್ದು.

**40. ಮೇಲ್ಮನವಿ ಹಕ್ಕು.–** ವಿಶ್ವವಿದ್ಯಾಲಯವು ತನ್ನ ನೌಕರರ ಅಥವಾ ವಿದ್ಯಾರ್ಥಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಂಡ ಸಂದರ್ಭದಲ್ಲಿ, ಬಾಧಿತ ನೌಕರ ಅಥವಾ ವಿದ್ಯಾರ್ಥಿಗಳು ಪರಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಮೇಲ್ಮನವಿ ಹಕ್ಕನ್ನು ಹೊಂದಿರತಕ್ಕದ್ದು.

**41. ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿ .–** ವಿಶ್ವವಿದ್ಯಾಲಯವು, ತನ್ನ ನೌಕರರ ಪ್ರಯೋಜನಕ್ಕಾಗಿ, ಪರಿನಿಯಮಗಳು ಮತ್ತು ಜಾರಿಯಲ್ಲಿರುವ ಕಾನೂನುಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಭವಿಷ್ಯ ಅಥವಾ ನಿವೃತ್ತಿ ವೇತನ ನಿಧಿಯನ್ನು ರಚಿಸತಕ್ಕದ್ದು ಹಾಗೂ ಅಂಥ ವಿಮಾ ಯೋಜನೆಗಳನ್ನು ಒದಗಿಸತಕ್ಕದ್ದು.

**42. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ಸಂಸ್ಥೆಗಳ ರಚನೆಯ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ಸಂಸ್ಥೆಯ ಸದಸ್ಯನಾಗಿ ಯಾವೊಬ್ಬ ವ್ಯಕ್ತಿಯು ಸೂಕ್ತವಾಗಿ ಆಯ್ಕೆಯಾಗಿದ್ದಾನೆಯೇ ಅಥವಾ ನೇಮಕಗೊಂಡಿದ್ದಾನೆಯೇ ಅಥವಾ ಅದಕ್ಕೆ ಅರ್ಹನಾಗಿದ್ದಾನೆಯೇ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆ ವಿಷಯವನ್ನು ತೀರ್ಮಾನಕ್ಕಾಗಿ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**43. ಸಮಿತಿಗಳ ರಚನೆ.–** 22ನೇ ಪ್ರಕರಣದಲ್ಲಿ ನಮೂದಿಸಿದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಅಧಿಕಾರವನ್ನು ಹೊಂದಿರುವ ಅಂಥ ಸದಸ್ಯರನ್ನು ಒಳಗೊಂಡ ಅಂಥ ಪ್ರಾಧಿಕಾರದ ಒಂದು ಸಮಿತಿಯನ್ನು ರಚಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**44. ಆಕಸ್ಮಿಕವಾಗಿ ಖಾಲಿಯಾದ ಸ್ಥಾನಗಳನ್ನು ತುಂಬುವುದು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಂಸ್ಥೆಯ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಸದಸ್ಯರ ಪೈಕಿ ಯಾವುದೇ ಸ್ಥಾನವು ಆಕಸ್ಮಿಕವಾಗಿ ಖಾಲಿಯಾದರೆ, ಯಾರ ಸ್ಥಾನವು ಖಾಲಿಯಾಗಿ ತುಂಬಬೇಕಾಗಿ ಬಂದಿದೆಯೋ ಆ ಸದಸ್ಯನನ್ನು ಯಾವ ರೀತಿಯಲ್ಲಿ ಆರಿಸಲಾಗಿತ್ತೋ ಅದೇ ರೀತಿಯಲ್ಲಿ ಹೊಸ ಸದಸ್ಯನನ್ನು ಆರಿಸಿ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ಖಾಲಿ ಸ್ಥಾನವನ್ನು ಭರ್ತಿ ಮಾಡಿದ ವ್ಯಕ್ತಿಯು ಆತನು ಯಾವ ಸದಸ್ಯನ ಸ್ಥಾನದಲ್ಲಿ ಭರ್ತಿಯಾಗಿರುವನೋ ಆ ಸದಸ್ಯನು ಪ್ರಾಧಿಕಾರ ಅಥವಾ ಸಂಸ್ಥೆಯ ಸದಸ್ಯನಾಗಿ ಉಳಿಯುತ್ತಿದ್ದ ಬಾಕಿ ಅವಧಿಯವರೆಗೆ ಮಾತ್ರ ಸದಸ್ಯನಾಗಿರತಕ್ಕದ್ದು.

**45. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಪರಿನಿಯಮಗಳು ಅಥವಾ ನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿ ಅಥವಾ ಇತರ ನೌಕರರ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ನಡೆಸಲು ಅವಕಾಶ ಇರತಕ್ಕದ್ದಲ್ಲ.

**46. ತಾತ್ಕಾಲಿಕ ಉಪಬಂಧಗಳು.–** ಈ ಅಧಿನಿಯಮ ಮತ್ತು ಪರಿನಿಯಮಗಳ ಯಾವುದೇ ಇತರ ಉಪಬಂಧಗಳಲ್ಲಿ ಏನೇ ಇದ್ದರೂ,–

(i) ಮೊದಲ ಕುಲಪತಿ ಮತ್ತು ಸಹಕುಲಪತಿ, ಯಾರಾದರೂ ಇದ್ದರೆ, ಅವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು;

(ii) ಮೊದಲ ಕುಲಸಚಿವರನ್ನು ಮತ್ತು ಮೊದಲ ಹಣಕಾಸು ಅಧಿಕಾರಿಯವರನ್ನು ಕುಲಾಧಿಪತಿಯವರು ನೇಮಕಮಾಡತಕ್ಕದ್ದು; ಮತ್ತು

(iii) ಮೊದಲ ವ್ಯವಸ್ಥಾಪನ ಮಂಡಳಿ, ಮೊದಲ ಹಣಕಾಸು ಸಮಿತಿ, ಮೊದಲ ಸಂಶೋಧನೆ ಮತ್ತು ಅನ್ವೇಷಣಾ ಪರಿಷತ್ತು ಹಾಗೂ ಮೊದಲ ಶೈಕ್ಷಣಿಕ ಪರಿಷತ್ತನ್ನು ಕುಲಾಧಿಪತಿಯವರು ರಚಿಸತಕ್ಕದ್ದು.

**47. ಶಾಶ್ವತ ಶಾಸನಬದ್ಧ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಕನಿಷ್ಠ ಇಪ್ಪತ್ತೈದು ಕೋಟಿ ರೂಪಾಯಿಗಳನ್ನುಳ್ಳ ಒಂದು ಶಾಶ್ವತ ಶಾಸನಬದ್ಧ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು ಇದರ ಪೈಕಿ ಕನಿಷ್ಠ ಹದಿನೈದು ಕೋಟಿ ರೂಪಾಯಿಗಳು ನಗದು ರೂಪದಲ್ಲಿ ಮತ್ತು ಇನ್ನುಳಿದದ್ದು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಇರತಕ್ಕದ್ದು ಮತ್ತು ಇದನ್ನು ತಾನಾಗಿಯೆ ಹೆಚ್ಚಿಸಬಹುದಾಗಿದ್ದು ಆದರೆ ಕಡಿಮೆ ಮಾಡತಕ್ಕದ್ದಲ್ಲ.

ಪರಂತು, ಬೆಂಗಳೂರು ಅಥವಾ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊರಗಿರುವ ವಿಶ್ವವಿದ್ಯಾಲಯದ ಸಂದರ್ಭದಲ್ಲಿ ಕನಿಷ್ಠ ಹತ್ತು ಕೋಟಿ ರೂಪಾಯಿಗಳು ನಗದು ರೂಪದಲ್ಲಿರತಕ್ಕದ್ದು ಮತ್ತು ಉಳಿದ ಐದು ಕೋಟಿ ರೂಪಾಯಿಗಳು ಬ್ಯಾಂಕ್ ಗ್ಯಾರಂಟಿಯ ರೂಪದಲ್ಲಿರತಕ್ಕದ್ದು.

(2) ವಿಶ್ವವಿದ್ಯಾಲಯವು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಶಾಶ್ವತ ಶಾಸನಬದ್ಧ ದತ್ತಿ ನಿಧಿಯ ಹಣವನ್ನು ಹೂಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯವು ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಗೆ ವರ್ಗಾವಣೆ ಮಾಡಬಹುದು. ವಿಶ್ವವಿದ್ಯಾಲಯವನ್ನು ಸಮಾಪನಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನೂ ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(4) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಿದ ವರಮಾನದ ಶೇಕಡಾ ಎಪ್ಪತ್ತೈದರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸಗಳ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತೈದರಷ್ಟನ್ನು ಶಾಶ್ವತ ಶಾಸನಬದ್ಧ ದತ್ತಿ ನಿಧಿಯಲ್ಲಿ ಪುನ: ತೊಡಗಿಸತಕ್ಕದ್ದು.

**48. ವಿಶ್ವವಿದ್ಯಾಲಯದ ದತ್ತಿ ನಿಧಿ.–** (1) ವಿಶ್ವವಿದ್ಯಾಲಯವು, ಪ್ರಾಯೋಜಕ ಸಂಸ್ಥೆಯು ನಿರ್ಧರಿಸಬಹುದಾದಂತೆ ನಿಧಿಗಳನ್ನು ಒಳಗೊಂಡ ವಿಶ್ವವಿದ್ಯಾಲಯದ ದತ್ತಿ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದು ಕಾಲಕಾಲಕ್ಕೆ ಸ್ವೀಕರಿಸಬಹುದಾದ ದೇಣಿಗೆಗಳು ಮತ್ತು ಇತರ ನಿಧಿಗಳನ್ನು ಒಳಗೊಂಡಿರತಕ್ಕದ್ದು.

(2) ವಿಶ್ವವಿದ್ಯಾಲಯವು, ಪರಿನಿಯಮಗಳ ಮೂಲಕ ನಿರ್ದಿಷ್ಟಪಡಿಸಬಹುದಾದ ವಿಧಾನದಲ್ಲಿ ವಿಶ್ವವಿದ್ಯಾಲಯದ ದತ್ತಿನಿಧಿಯನ್ನು ಹೂಡುವ ಅಧಿಕಾರವನ್ನು ಹೊಂದಿರತಕ್ಕದ್ದು.

(3) ವಿಶ್ವವಿದ್ಯಾಲಯ ದತ್ತಿ ನಿಧಿಯು, ವಿಶ್ವವಿದ್ಯಾಲಯವು ತನ್ನ ಸಾಮಾಜಿಕ ಧ್ಯೇಯೋದ್ದೇಶಗಳನ್ನು ನೆರವೇರಿಸುವ ಸಂದರ್ಭದಲ್ಲಿ ಮತ್ತು/ಅಥವಾ ಮುಂಗಾಣದ ಸನ್ನಿವೇಶದಲ್ಲಿ ಉದ್ಭವಿಸಬಹುದಾದ ಹಣಕಾಸು ಸವಾಲುಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸ್ವಇಚ್ಛೆಯಿಂದ ನಿರ್ವಹಿಸಿಕೊಂಡು ಬರಲು ಮತ್ತು ಜವಾಬ್ದಾರಿಯಿಂದ ಹಣ ಹೂಡಿಕೆ ಮಾಡಲು ಇಚ್ಛೆಯುಳ್ಳವರಾಗಿ ಸ್ವಯಂ ವಿಧಿಸಿಕೊಂಡ ನಿಧಿಯಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಸಾಮಾನ್ಯ ನಿಧಿ ಅಥವಾ ಅಭಿವೃದ್ಧಿ ನಿಧಿಯಿಂದ ಯಾವುದೇ ಮೊಬಲಗನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಗೆ ವರ್ಗಾಯಿಸಬಹುದು. ವಿಶ್ವವಿದ್ಯಾಲಯದ ಸಮಾಪಣೆಗೊಳಿಸುವ ಸಂದರ್ಭವನ್ನು ಹೊರತುಪಡಿಸಿ, ಇತರ ಯಾವ ಸಂದರ್ಭಗಳಲ್ಲೂ ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಯಾವುದೇ ಮೊಬಲಗನ್ನು ಇತರ ಉದ್ದೇಶಗಳಿಗಾಗಿ ವರ್ಗಾಯಿಸತಕ್ಕದ್ದಲ್ಲ.

(5) ವಿಶ್ವವಿದ್ಯಾಲಯದ ದತ್ತಿ ನಿಧಿಯಿಂದ ಬರುವ ವರಮಾನದ ಶೇಕಡಾ ಎಂಭತ್ತರಷ್ಟನ್ನು ವಿಶ್ವವಿದ್ಯಾಲಯದ ಅಭಿವೃದ್ಧಿ ಅಥವಾ ಸಾಮಾನ್ಯ ಕೆಲಸದ ಉದ್ದೇಶಗಳಿಗಾಗಿ ಬಳಸಿಕೊಳ್ಳತಕ್ಕದ್ದು. ಉಳಿದ ಶೇಕಡಾ ಇಪ್ಪತ್ತರಷ್ಟನ್ನು ವಿಶ್ವವಿದ್ಯಾಲಯದ ದತ್ತಿ ನಿಧಿಯಲ್ಲಿ ಪುನಃ ತೊಡಗಿಸತಕ್ಕದ್ದು.

**49. ಸಾಮಾನ್ಯ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಸಾಮಾನ್ಯ ನಿಧಿಯನ್ನು ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯವು ವಿಧಿಸಬಹುದಾದ ಎಲ್ಲಾ ಶುಲ್ಕಗಳು;

(ii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವುದೇ ಇತರ ಮೂಲದಿಂದ ಸ್ವೀಕರಿಸಲಾದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ದೇಣಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು;

(2) ಸಾಮಾನ್ಯ ನಿಧಿಗೆ ಜಮಾ ಮಾಡುವ ನಿಧಿಗಳನ್ನು ವಿಶ್ವವಿದ್ಯಾಲಯದ ಎಲ್ಲಾ ಆವರ್ತಕ ವೆಚ್ಚಗಳನ್ನು ಭರಿಸಲು ಉಪಯೋಗಿಸಕೊಳ್ಳತಕ್ಕದ್ದು.

**50. ಅಭಿವೃದ್ಧಿ ನಿಧಿ.–** (1) ವಿಶ್ವವಿದ್ಯಾಲಯವು, ಒಂದು ಅಭಿವೃದ್ಧಿ ನಿಧಿಯನ್ನು ಸಹ ಸ್ಥಾಪಿಸತಕ್ಕದ್ದು. ಇದರಲ್ಲಿ ಈ ಮುಂದಿನ ಮೊಬಲಗುಗಳನ್ನು ಜಮಾ ಮಾಡತಕ್ಕದ್ದು, ಎಂದರೆ:–

(i) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ವಿದ್ಯಾರ್ಥಿಗಳಿಂದ ವಿಧಿಸಬಹುದಾದ ಅಭಿವೃದ್ಧಿ ಶುಲ್ಕಗಳು;

(ii) ವಿಶ್ವವಿದ್ಯಾಲಯದ ಅಭಿವೃದ್ಧಿಯ ಉದ್ದೇಶಗಳಿಗಾಗಿ ಯಾವುದೇ ಇತರ ಮೂಲಗಳಿಂದ ಸ್ವೀಕರಿಸಿದ ಎಲ್ಲಾ ಮೊತ್ತ;

(iii) ವಿಶ್ವವಿದ್ಯಾಲಯಕ್ಕೆ ಮಾಡಿದ ಎಲ್ಲಾ ವಂತಿಗೆಗಳು;

(iv) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೂಲಕ ನಿಷೇಧಿಸದೇ ಇರುವ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಸ್ಥೆಯು ಈ ಸಂಬಂಧದಲ್ಲಿ ಕೊಟ್ಟ ಎಲ್ಲಾ ದೇಣಿಗೆಗಳು/ವಂತಿಗೆಗಳು; ಮತ್ತು

(v) ಶಾಶ್ವತ ಶಾಸನಬದ್ಧ ದತ್ತಿ ನಿಧಿಯಿಂದ ಸ್ವೀಕರಿಸಲಾದ ಎಲ್ಲಾ ವರಮಾನಗಳು.

(2) ಅಭಿವೃದ್ಧಿ ನಿಧಿಗೆ ಕಾಲಕಾಲಕ್ಕೆ ಜಮಾ ಮಾಡಿದ ನಿಧಿಯನ್ನು ವಿಶ್ವವಿದ್ಯಾಲಯದ ಅಭಿವೃದ್ಧಿಗಾಗಿ ಉಪಯೋಗಿಸಕೊಳ್ಳತಕ್ಕದ್ದು.

**51. ನಿಧಿಗಳ ನಿರ್ವಹಣೆ.–** 47, 48, 49 ಮತ್ತು 50ನೇ ಪ್ರಕರಣಗಳಡಿಯಲ್ಲಿ ಸ್ಥಾಪಿಸಲಾದ ನಿಧಿಗಳನ್ನು ಪ್ರಬಂಧಕ ಮಂಡಳಿಯ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ನಿಯಂತ್ರಿಸತಕ್ಕದ್ದು ಹಾಗೂ ನಿರ್ವಹಿಸತಕ್ಕದ್ದು.

**52. ವಾರ್ಷಿಕ ವರದಿ.–** (1) ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ಅದರ ಅನುಮೋದನೆಗಾಗಿ ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(2) ಪ್ರಬಂಧಕ ಮಂಡಳಿಯು ವಾರ್ಷಿಕ ವರದಿಯನ್ನು ತನ್ನ ಸಭೆಯಲ್ಲಿ ಪರಿಗಣಿಸತಕ್ಕದ್ದು ಹಾಗೂ ಅದನ್ನು ಮಾರ್ಪಾಡುಗಳೊಡನೆ ಅಥವಾ ಮಾರ್ಪಾಡುಗಳಿಲ್ಲದೆ ಅನುಮೋದಿಸಬಹುದು.

(3) ಪ್ರಬಂಧಕ ಮಂಡಳಿಯು ಸೂಕ್ತವಾಗಿ ಅನುಮೋದಿಸಿದ ವಾರ್ಷಿಕ ವರದಿಯ ಒಂದು ಪ್ರತಿಯನ್ನು ಪ್ರತಿವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ಡಿಸೆಂಬರ್ 31ಕ್ಕೆ ಮೊದಲು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

**53. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ ಪತ್ರ ಮತ್ತು ಜಮಾ ಖರ್ಚು ಪಟ್ಟಿಯನ್ನು ವ್ಯವಸ್ಥಾಪನಾ ಮಂಡಳಿಯ ನಿರ್ದೇಶನದಲ್ಲಿ ತಯಾರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಎಲ್ಲಾ ಮೂಲಗಳಿಂದ ಪ್ರಾಪ್ತವಾಗುವ ಅಥವಾ ಸ್ವೀಕರಿಸಲಾಗುವ ಎಲ್ಲಾ ನಿಧಿಗಳು ಹಾಗೂ ವಿತರಿಸಿದ ಅಥವಾ ಸಂದಾಯ ಮಾಡಿದ ಎಲ್ಲಾ ಮೊಬಲಗುಗಳನ್ನು ವಿಶ್ವವಿದ್ಯಾಲಯವು ನಿರ್ವಹಿಸುವ ಲೆಕ್ಕಪತ್ರದಲ್ಲಿ ನಮೂದಿಸತಕ್ಕದ್ದು.

(2) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಪ್ರತಿ ವರ್ಷವೂ ಭಾರತದ ಚಾರ್ಟೆಡ್ ಅಕೌಟೆಂಟ್‌ಗಳ ಸಂಸ್ಥೆಯ ಸದಸ್ಯರಾಗಿರುವ ಒಬ್ಬ ಲೆಕ್ಕಪರಿಶೋಧಕರಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು.

(3) ವಾರ್ಷಿಕ ಲೆಕ್ಕಪತ್ರಗಳು ಮತ್ತು ಜಮಾ ಖರ್ಚು ಪಟ್ಟಿಯನ್ನು ಲೆಕ್ಕಪರಿಶೋಧನಾ ವರದಿಯೊಡನೆ, ಪ್ರತಿ ವರ್ಷದ ಮಾರ್ಚ್ 31ಕ್ಕೆ ಕೊನೆಗೊಳ್ಳುವ ಆರ್ಥಿಕ ವರ್ಷದ ತರುವಾಯ ಬರುವ ನವೆಂಬರ್ 30ಕ್ಕೆ ಮೊದಲು ಪ್ರಬಂಧಕ ಮಂಡಳಿಗೆ ಸಲ್ಲಿಸತಕ್ಕದ್ದು.

(4) ವಾರ್ಷಿಕ ಲೆಕ್ಕಪತ್ರಗಳು, ಜಮಾಖರ್ಚು ಪಟ್ಟಿ ಮತ್ತು ಲೆಕ್ಕಪರಿಶೋಧನಾ ವರದಿಯನ್ನು ಪ್ರಬಂಧಕ ಮಂಡಳಿಯು ತನ್ನ ಸಭೆಯಲ್ಲಿ ಪರ್ಯಾಲೋಚಿಸತಕ್ಕದ್ದು ಮತ್ತು ಪ್ರಬಂಧಕ ಮಂಡಳಿಯು ಅದನ್ನು ತನ್ನ ಅಭಿಪ್ರಾಯಗಳೊಡನೆ ಸಂದರ್ಶಕರಿಗೆ ಹಾಗೂ ಸರ್ಕಾರಕ್ಕೆ ಪ್ರತಿ ವರ್ಷದ ಡಿಸೆಂಬರ್ 31ಕ್ಕೆ ಮೊದಲು ಕಳುಹಿಸತಕ್ಕದ್ದು.

(5) ಲೆಕ್ಕಪರಿಶೋಧಕರ ವರದಿಯಲ್ಲಿ ಯಾವುದೇ ಮುಖ್ಯ ಬದಲಾವಣೆ ಇದ್ದ ಸಂದರ್ಭದಲ್ಲಿ, ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಕ್ಕೆ ನಿರ್ದೇಶನಗಳನ್ನು ಹೊರಡಿಬಹುದು ಮತ್ತು ಅಂಥ ನಿರ್ದೇಶನಗಳು ವಿಶ್ವವಿದ್ಯಾಲಯದ ಮೇಲೆ ಬಂಧನಕಾರಿಯಾಗಿರತಕ್ಕದ್ದು.

**54. ವಿಶ್ವವಿದ್ಯಾಲಯ ದಾಖಲೆಗಳ ರುಜುವಾತಿನ ಮಾದರಿ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಸಮಿತಿಯ ಯಾವುದೇ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ ಅಥವಾ ಗೊತ್ತುವಳಿಯು ಅಥವಾ ವಿಶ್ವವಿದ್ಯಾಲಯದ ಸ್ವಾಧೀನದಲ್ಲಿರುವ ಇತರ ದಾಖಲೆಗಳು ಅಥವಾ ವಿಶ್ವವಿದ್ಯಾಲಯವು ಯುಕ್ತವಾಗಿ ನಿರ್ವಹಿಸುವ ಯಾವುದೇ ರಿಜಿಸ್ಟರ್‌ನಲ್ಲಿಯ ಯಾವುದೇ ನಮೂದುಗಳ ಪ್ರತಿಯನ್ನು, ಅದರ ಮೇಲೆ ಕುಲಸಚಿವರು ಪ್ರಮಾಣೀಕರಿಸಿದ್ದರೆ, ಅದನ್ನು ಅಂಥ ರಶೀದಿ, ಅರ್ಜಿ, ಸೂಚನೆ, ಆದೇಶ, ವ್ಯವಹರಣೆ, ಗೊತ್ತುವಳಿ ಅಥವಾ ದಾಖಲೆ ಅಥವಾ ರಿಜಿಸ್ಟರ್‌ನಲ್ಲಿ ಇರುವ ನಮೂದನ್ನು ಮೇಲ್ನೋಟದ ಸಾಕ್ಷ್ಯವೆಂಬುದಾಗಿ ಸ್ವೀಕರಿಸತಕ್ಕದ್ದು ಮತ್ತು ವಿಷಯಗಳ ಸಾಕ್ಷಿಯಾಗಿ ಅಂಗೀಕರಿಸತಕ್ಕದ್ದು ಹಾಗೂ ಮೂಲ ದಾಖಲೆಗಳನ್ನೇ ಸಲ್ಲಿಸಿದ್ದರೆ ಅದನ್ನು, ದಾಖಲಿಸಿರುವ ವಿಷಯಗಳು ಮತ್ತು ವಹಿವಾಟುಗಳ ಸಾಕ್ಷ್ಯವಾಗಿ ಅಂಗೀಕರಿಸಲಾಗುತ್ತಿತ್ತೋ, ಅದೇ ರೀತಿಯಲ್ಲಿ ಇವನ್ನೂ ಸಾಕ್ಷ್ಯವಾಗಿ ಅಂಗೀಕರಿಸತಕ್ಕದ್ದು.

**55. ನಿರ್ದೇಶನಗಳನ್ನು ನೀಡಲು ರಾಜ್ಯ ಸರ್ಕಾರದ ಅಧಿಕಾರ.–** ರಾಜ್ಯಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಥವಾ ಅದರಲ್ಲಿ ಇರುವ ಯಾವುವೇ ಉಪಬಂಧಗಳನ್ನು ಅಥವಾ ಅದರಡಿಯಲ್ಲಿ ರಚಿಸಿದ ಯಾವುವೇ ನಿಯಮಗಳು ಅಥವಾ ಆದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿರ್ದೇಶನ ನೀಡುವುದು ಅವಶ್ಯವೆಂದು ಅಥವಾ ಉಚಿತವೆಂದು ಅಭಿಪ್ರಾಯಪಟ್ಟಲ್ಲಿ ಅದು ಅಂಥ ನಿರ್ದೇಶನಗಳನ್ನು ನೀಡಬಹುದು ಮತ್ತು ವಿಶ್ವವಿದ್ಯಾಲಯದ ಪ್ರಬಂಧಕ ಮಂಡಳಿ ಅಥವಾ ಸಂದರ್ಭಾನುಸಾರವಾಗಿ ವ್ಯವಸ್ಥಾಪನಾ ಮಂಡಳಿಯು ಅಂಥ ಪ್ರತಿಯೊಂದು ನಿರ್ದೇಶನವನ್ನು ಪಾಲಿಸತಕ್ಕದ್ದು.

**56. ದಂಡಗಳು.–** (1) ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿತವಾದ ನಿಯಮಗಳು ಉಪಬಂಧಗಳನ್ನು ಅಥವಾ ಯಾವುದೇ ಪರೀಕ್ಷಾ ವಿಷಯಗಳನ್ನು ಅಥವಾ ಪದವಿಗಳನ್ನು ನೀಡುವುದಕ್ಕೆ ಅಥವಾ ಅಂಕಪಟ್ಟಿಗಳನ್ನು ನೀಡುವುದಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಉಲ್ಲಂಘನೆಗಳನ್ನು ಮಾಡುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ಮೇಲೆ, ಐವತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಆದರೆ ಹತ್ತು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಆರು ತಿಂಗಳ ಅವಧಿಗಿಂತ ಕಡಿಮೆಯಲ್ಲದ ಆದರೆ ಎರಡು ವರ್ಷಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು:

ಪರಂತು, ವಿಶ್ವವಿದ್ಯಾಲಯವೂ ಸಹ ಒಳಗೊಂಡಿರುವಲ್ಲಿ, ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ಈ ಅಧಿನಿಯಮದ ಅಡಿಯಲ್ಲಿ ಮಂಜೂರು ಮಾಡಲಾದ ಅನುಮತಿ ಪತ್ರವನ್ನು ಹಿಂತೆಗೆದುಕೊಳ್ಳತಕ್ಕದ್ದು.

